ಪಂಪಮಹಾಕವಿಯ ವಿಕ್ರಮಾರ್ಜುನವಿಜಯದೊಳಗಣ

# ಕರ್ಣರಸಾಯನಂ



ಸಂಗ್ರಾಹಕರು ಮತ್ತು ವ್ಯಾಖ್ಯಾನಕಾರರು

ಕೆ. ವಿ. ಕೃಷ್ಣಭಟ್ಟರು, ವಿದ್ವಾನ್, ಎಂ. ಎ., ಬಿ. ಓ. ಎಲ್.

1953

ಬೆಲೆ

ಎರಡೂವರೆ ರೂಪಾಯಿ

# ಬಿನ್ನಹ

ಕನ್ನಡ ಸಾಹಿತ್ಯಕ್ಷೇತ್ರದ ಸುಗ್ಗಿಯು ಎಂದೋ ಆಗಿಹೋಗಿದ್ದುದೇನೋ ನಿಜವು ಆದರೆ ಅವುಗಳಲ್ಲಿ ಹಲಕೆಲವು ಎಂದೋ ಬೆಳಕು ಕಂಡು ಈಗ ಕಾಣೆಸದಾಗಿವೆ ಇತ್ತೀಚೆಗೆ ಹೆಚ್ಚಾಗಿ ಪ್ರಕಟವಾಗುವವುಗಳೆಂದರೆ ಹಾಯಾಗಿ ಓದತಕ್ಕ ಕಥೆ ಕಾದಂಬರಿಗಳೇ. ಭಾಷಾಭ್ಯಾಸದಲ್ಲಿ ನಿರತರಾಗತಕ್ಕವರಿಗೆ ಬೇಕಾದ ಯಾವ ವ್ಯವಸ್ಥೆಯೂ ಸರಿಯಾಗಿಲ್ಲವೆ "ನಮ್ಮ ಸಾಹಿತ್ಯಕ್ಕೂ ಬಡತನವೆ" ಎಂದು ಭಾವಿಸಿಕೊಳ್ಳುವ ಪರಿಸ್ಥಿತಿಯೊದಗಿರುವುದನ್ನು ಯೋಚಿಸಿದರೆ ವಿಷಾದವಾಗುವುದು ರಾಜಾಧಿರಾಜರ ಆಶ್ರಯದಲ್ಲಿ ಬಳೆದಿದ್ದ ಸಾಹಿತ್ಯವಿಂದು ಮೂಲೆಪಾಲಾಗುತ್ತಿದೆಯಲ್ಲದೆ ಅದನ್ನು ಪುರಸ್ಕರಿಸಲು ಮುಂದೆ ಬರತಕ್ಕವರಾರು? ಮಾತೃಭಾಷೆಯನ್ನೇ ಹೀಗೆ ಕಡೆಗಣಿಸುತ್ತಾ ಬಂದರೆ ಮುಂದಣ ನಮ್ಮ ಜನಾಂಗದ ಗತಿಯೇನು ಎಂಬ ದೂರದೃಷ್ಟಿಯಿಂದ ಘನವಿದ್ವಾಂಸರಾಗಿದ್ದ ಶ್ರೀ ವಿದ್ವಾನ್ ಕೆ ವಿ ಕೃಷ್ಣಭಟ್ಟ, ಕಾವೇರಿಕಾನ ಬಿ ಎ, ಬಿ ಟಿ ಎಲ್ ಇವರು ರನ್ನಕವಿಚಕ್ರವರ್ತಿಯ ಸಹಸ್ರವಾರ್ಷಿಕೋತ್ಸವದ ಸಂದರ್ಭದಲ್ಲಿ ಸಾಹಸಭೀಮವಿಜಯವನ್ನು ವಿಮರ್ಶೆಯೊಂದಿಗೆ ಪ್ರಕಟಿಸುವುದಾಗಿ ಆ ಉದ್ಯಮದಲ್ಲಿ ತೊಡಗಿದ್ದರು ಅದರೊಂದಿಗೆನೇ ಪಂಪನ ಕರ್ಣರಸಾಯನವನ್ನೂ ಸಂಗ್ರಹಿಸಿ ವ್ಯಾಖ್ಯಾನ ಬರೆದು ಇಟ್ಟಿದ್ದರು ಸಂಸ್ಕೃತ, ಕನ್ನಡ, ಇಂಗ್ಲೀಷು ಭಾಷೆಗಳಲ್ಲಿ ಸರಿಯಾಗಿ ವ್ಯವಸಾಯಮಾಡಿ ವಿಶೇಷಅನುಭವಿಗಳಾಗಿದ್ದ ಅವರಿಂದ ಸಾಹಿತ್ಯಸೇವೆಯು ಆಗಬಹುದು ಎಂದು ಅವರ ಒಡನಾಡಿಗಳು ಭಾವಿಸುತ್ತಿದ್ದ ವೇಳೆಗೆ, ವಿಧಿನಿಯಮವು ತದ್ವಿರುದ್ಧವಾಗಿ ಪರಿಣಮಿಸಿದರೆ ಯಾರೇನು ಮಾಡಬಲ್ಲರು? ಆಕಸ್ಮಿಕವಾದ ಹೃದಯಸ್ತಂಭನದಿಂದ ಅವರು ತಮ್ಮ ಮಧ್ಯವಯಸ್ಸಿನಲ್ಲೇ ಕಾಲಾಧೀನರಾದರು ಅವರ ಕೈಯಿಂದ ಹೆಚ್ಚಿನ ಸಾಹಿತ್ಯಸೇವೆಯಾಗುವ ಯೋಗವಿಲ್ಲವೋ? ಕನ್ನಡಿಗರಿಗೆ ಪಡೆಯುವ ಋಣವಿಲ್ಲವೋ ಹೇಳಲಾಗುವುದಿಲ್ಲ ಅವರು ಪಂಪರನ್ನರ ಕೃತಿಗಳ ವಿಚಾರವಾಗಿ ಹುರುಪುಗೊಂಡು ಸಂಗ್ರಹಿಸಿ ಇಟ್ಟಿದ್ದವುಗಳಲ್ಲಿ, ಈ ಹಸ್ತಪ್ರತಿಯು ನಾಶವಾಗಿಬಿಡಬಾರದೆಂದೂ, ಅವರ ಉಪಯೋಗವು ತಪ್ಪದೆ ಕನ್ನಡಿಗರಿಗೆ ದೊರೆಯಬೇಕೆಂದೂ ಉದ್ದೇಶಿಸಿ ಅವರ ಸೋದರರಾದ ಶ್ರೀ ಕಾವೇರಕಾನ ಕೆ. ವಿ ಸುಬ್ರಹ್ಮಣ್ಯ ಭಟ್ಟರಲ್ಲಿ ಹೇಳಿಕೊಂಡಾಗ, "ಬಹುಜನರ ಉಪಯೋಗಕ್ಕೆ ಬೀಳುವುದಾಗಿದ್ದರೆ ಅಗತ್ಯವಾಗಿಯೂ ಬೆಳಕುಗಾಣಲಿ" ಎಂದು ಸಂತೋಷದಿಂದ ಹಸ್ತಪ್ರತಿಯನ್ನು ದಯಪಾಲಿಸಿದುದಕ್ಕಾಗಿ ಅವರಿಗೆ ಕೃತಜ್ಞತೆಯನ್ನು ಸಮರ್ಪಿಸುತ್ತ ಈ ಗ್ರಂಥವು ಕನ್ನಡಿಗರ ಮೆಚ್ಚುಗೆಗೆ ಪಾತ್ರವಾದೀತೆಂಬ ಭರವಸೆಯಿಂದ ಈ "ರಸಾಯನ"ವನ್ನು ಕನ್ನಡಿಗರಿಗೆ ಸಮರ್ಪಿಸುವೆನೆಂದು ಮುಂದೆ ಬಂದಿರುವೆನು.

ಇತಿ,

ಪ್ರಕಾಶಕ.

# ಸಂಕ್ಷಿಪ್ತಕವಿಕಾವ್ಯವಿಚಾರ

ಸಾಹಿತ್ಯವು ನಾಡಿನ ಸೌಭಾಗ್ಯದ ಪ್ರತೀಕವು ನಮ್ಮ ಸಾಹಿತ್ಯಕ್ಷೇತ್ರದಲ್ಲಿ ಸೀಮಾಪುರುಷನೆನಿಸಿದ "ಮಹಾಕವಿ ಪಂಪ"ನ ಹೆಸರನ್ನು ಕೇಳದವರಿಲ್ಲ ಕುಬೇರನ ಭಾಂಡಾಗಾರವು ಕ್ಷಯಿಸಿ ಹೋದರೂ, ಮಹಾಕವಿಪಂಪನ ಸಾಹಿತ್ಯಸಂಪತ್ತು ಶಾಶ್ವತವಾಗಿ ಮೆರೆಯುವುದರಲ್ಲಿ ಸಂಶಯವಿಲ್ಲ ಆತನ ನಿರರ್ಗಳವಾದ ವಾಗ್ಝರಿಗೆ ಬೆರಗಾಗಿ ತಲೆವಾಗದ ಸಾಹಿತಿಯಿರಲಾರನೆಂದರೆ ಆ ಮಹಾಕವಿಯನ್ನು ಪಡೆದ ಕರ್ಣಾಟಕಾಂಬೆಯ ಧನ್ಯತೆಗೆ ಎಣೆಯಿಲ್ಲ. ಸತ್ಪುತ್ರನು ವೃದ್ಧಮಾತೆಗೆ ಕಾಣಿಕೆಯಾಗಿತ್ತ ಕಣ್ಣಡಕದಂತೆ ವಿಕ್ರಮಾರ್ಜುನ ವಿಜಯ (ಪಂಪಭಾರತ) ಆದಿಪುರಾಣ (ಆದಿತೀರ್ಥಂಕರ ಚರಿತ್ರೆ)ಗಳೆಂಬ ಲೌಕಿಕ ಹಾಗೂ ಅಲೌಕಿಕಪರಗಳಾದ ಗ್ರಂಥರತ್ನಗಳನ್ನು ಬರೆದು ಕನ್ನಡಮ್ಮನ ಸೇವೆ ಸಲ್ಲಿಸಿದ ಪಂಪನು ಸಂಸ್ಕೃತಸಾಹಿತ್ಯದಲ್ಲಿ ವಾಲ್ಮೀಕಿಯು ಹಾಗೆ ಕನ್ನಡದಲ್ಲಿ ಆದಿಕವಿಯೆನಿಸಿ ನಾಡೋಜನೆಂದು ಪ್ರಸಿದ್ಧನಾದನು ಅಂತಹ ಮಹಾಕವಿಯು ಎಲ್ಲಿ ಯಾವಾಗ ಜನಿಸಿ ಹೇಗೆ ಮೆರೆದನೆಂಬುದನ್ನು ನಾವು ಪರಿಶೀಲಿಸಬೇಕು, ಅಲ್ಲದೆ ಆತನ ನಿಜವಾದ ಯೋಗ್ಯತೆಯನ್ನು ತಿಳಿದುಕೊಳ್ಳಲಾರೆವು

ವೆಂಗಿಮಂಡಲದ ವೆಂಗಿಪಳುವೆಂಬ ಊರಲ್ಲಿ ವತ್ಸಗೋತ್ರೋದ್ಭವನಾದ ಮಾಧವ ಸೋಮಯಾಜಿಯು ಸಕಲಶಾಸ್ತ್ರಾರ್ಥಪ್ರವೀಣನಾಗಿ ಅನೇಕ ಯಜ್ಞಗಳನ್ನು ಮಾಡಿ ಪ್ರಖ್ಯಾತನಾಗಿದ್ದನು ಅವನಿಗೆ ದಾನಶಾಲಿಯಾದ ಅಭಿಮಾನ ಚಂದ ನೆಂಬ ಮಗನಿದ್ದನು ಅವನ ಮಗ ಕೊಮರಯ್ಯನೆಂಬವನು ವೇದವೇದಾಂಗಪಾರಗನಾಗಿ ಹೆಸರುಪಡೆದಿದ್ದನು. ಆತನ ಮಗ ಅಭಿರಾಮದೇವರಾಯನೆಂಬವನು ಗುಣವಂತನೂ ಜ್ಞಾನೋನ್ನತನೂ ಬಹು ಕೀರ್ತಿಶಾಲಿಯೂ ಆಗಿದ್ದು ಜಿನೇಂದ್ರಧರ್ಮವೇ ಉತ್ತಮವಾದುದೆಂಬ ವಿಶ್ವಾಸದಿಂದ ಅದನ್ನು ಅವಲಂಬಿಸಿದನು. ಅವನ ಮಗನೇ ಪ್ರಸಿದ್ಧನಾದ ಕವಿಪಂಪನು ಆದಿಪುರಾಣದಲ್ಲಿ ಕವಿಯು ತನ್ನ ವಿಚಾರವಾಗಿ ಹೀಗೆ ಹೇಳಿಕೊಂಡಿರುವನು—

ದುಂದುಭಿಗಭೀರನಿನದಂ । ದುಂದುಭಿಸಂವತ್ಸರೋದ್ಭವಂ ಪ್ರಕಟಯಶೋ ।
ದುಂದುಭಿಸಿಂಹಾಸನಸುರ । ದುಂದುಭಿಪತಿಚರಣಭೃಂಗಂ ಪಂಪಂ ॥
ಕದಳೀಗರ್ಭಶ್ಯಾಮಂ ಮೃದುಕುಟಿಲ ಶಿರೋರುಹಂ ಸರೋರುಹವದನಂ ।
ಮೃದುಮಧ್ಯಮತನುಹಿತಮಿತ । ಮೃದುವಚನಂ ಲಲಿತಮಧುರಸುಂದರವೇಷಂ ॥
ವತ್ಸಕುಲತಿಲಕನಭಿಜನ । ವತ್ಸಳನಭಿಮಾನಮೂರ್ತಿ ಸುಕವಿಯಶೋನಿ— ।
ರ್ಮತ್ಸರನಮೃತಮಯೋಕ್ತಿಶ । ರತ್ಸಮಯಸುಧಾಂಶುವಿಶದಕೀರ್ತಿವಿತಾನಂ ॥

ಈತನ ಖ್ಯಾತಿಯನ್ನು ಕೇಳಿ ಚಾಳುಕ್ಯದಲ್ಲಿ ಒಬ್ಬ ಪ್ರಖ್ಯಾತನಾದ ಎರಡನೆಯ ಅರಿಕೇಸರಿಯು ಕವಿವರನಾದ ಪಂಪನನ್ನು ಗೌರವದಿಂದ ಬರಮಾಡಿಕೊಂಡು ತನ್ನ ಖ್ಯಾತಿಯು ನೆಲಸುವಂತ ಕಾವ್ಯ ಬರೆಯಬೇಕೆಂದು ಪ್ರೋತ್ಸಾಹಿಸುತ್ತ ಆತನನ್ನು ತನ್ನ ರಾಜಧಾನಿಯಾದ ಪುಲಿಗೆರೆಯಲ್ಲೇ ನೆಲಸುವಂತೆ ಮಾಡಿಕೊಂಡನು (ಆ ಪುಲಿಗೆರೆಯೆಂದರೆ ಈಗ ಧಾರವಾಡದ ಜಿಲ್ಲಗೆ ಸೇರಿದ ಮಿರಜ್ ಸಂಸ್ಥಾನದ ಲಕ್ಷ್ಮೇಶ್ವರಪುರವೆಂದು ಹೇಳುತ್ತಾರೆ) ಅದರ ಪರಿಣಾಮವಾಗಿ ಕವಿಯು ತನ್ನ ಪೋಷಕನಾದ ಅರಿಕೇಸರಿಯನ್ನು ಕಥಾನಾಯಕನಾದ ಅರ್ಜುನನಿಗೆ ಹೋಲಿಸಿಕೊಂಡು ಕೇವಲ ಆರು ತಿಂಗಳಲ್ಲೇ ಭಾರತ ಕಥೆಯನ್ನೊಳಗೊಂಡಿರುವ "ವಿಕ್ರಮಾರ್ಜುನ ವಿಜಯ"ವೆಂಬ ಹದಿನಾಲ್ಕು ಆಶ್ವಾಸಗಳುಳ್ಳ ಚಂಪೂ ಮಹಾಕಾವ್ಯವನ್ನು ಬರೆದನು ಕವಿಯು ತನ್ನ ಪೋಷಕನಿಗೆ ಅರಿಗ, ಸರಿಗ, ಗುಣಾರ್ಣವ ಇವೇ ಮೊದಲಾದ ಹಲವು ಹೆಸರುಗಳನ್ನು ಹೇಳಿಕೊಂಡಿರುವನು ಭಾರತಕಾವ್ಯದಲ್ಲಿ ಅರಿಕೇಸರಿಯನ್ನು ಅರ್ಜುನನಿಗ ಹೋಲಿಸಿ ಸಾಧ್ಯವಾಗುವಲ್ಲೆಲ್ಲಾ ಅವನ ವಿಕ್ರಮಾಧಿಗಳನ್ನು ಹೊಗಳಿರುವನು ಈ ಕಾವ್ಯವನ್ನು ರಾಜಸಭೆಯಲ್ಲಿ ಓದಿ ರಾಜನನ್ನು ಹಾಗೂ ಉದ್ದಾಮಪಂಡಿತರನ್ನು ತಲೆದೂಗಿಸಿ ಪಂಪನು ರಾಜಕೃಪೆಗೆ ವಿಶೇಷವಾಗಿ ಪಾತ್ರನಾಗಿ ಒಚ್ಚೆಸಾಸಿರದಲ್ಲಿರುವ ಧರ್ಮಪುರವೆಂಬ ಅಗ್ರಹಾರವನ್ನು ಪಡೆದುಕೊಂಡನೆಂದು ಶಾಸನದ ಮೂಲಕ ತಿಳಿದುಬರುವುದು ಬಳಿಕ ಕವಿಯು ಮತದಲ್ಲಿರುವ ಶ್ರದ್ಧೆಯಿಂದ ಪದಿನಾರು ಆಶ್ವಾಸಗಳುಳ 'ಆದಿಪುರಾಣ"ವೆಂಬ ಅಲೌಕಿಕ ಕಾವ್ಯವನ್ನು ಕೇವಲ ಮೂರು ತಿಂಗಳುಗಳಲ್ಲೇ ಬರೆದು ಆದಿಕವಿಯೆಂದು ಪ್ರಸಿದ್ಧನಾದನು

ಈತನು ಪ್ರಸಿದ್ಧ ಕವಿಯು ಮಾತ್ರನಲ್ಲದೆ ಪ್ರಚಂಡವೀರನೂ ಆಗಿದ್ದನೆಂದು ಅವನ ಹೇಳಿಕೆಯಿಂದಲೇ ತಿಳಿದುಬರುತ್ತದೆ—

ಪಂಪಂಧಾತ್ರೀವಳಯ ನಿ । ಳಿಂಪಂಚತುರಂಗಬಳಭಯಂಕರರ್ಗಂ ನಿ- ।
ಷ್ಕಂಪಂಲಲಿತಾಲಂಕರ । ಣಂ ಪಂಚಶಕ್ತಿಕರೂಪನಪಗತಪಾಪಂ ॥
ಕವಿತೆನೆಗಟ್ಟಿಯಂನಿಱಿಸೆ ಜೋಳದ ಪಾಟಿನಿಜಾಧಿನಾಥನಾ
ಹವದೊಳರಾತಿನಾಯಕರ ಪಟ್ಟನೆ ಪಾಱಿಸೆ ಸಂದಪೆಂಪು ಭೂ ।
ಭುವನದೊಳಾಗಳುಂ ಬೆಳಗೆ ಮಿಕ್ಕಭಿಮಾನದ ಮಾತುಕೀರ್ತಿಯಂ
ವಿವರಿಸೆ ಸಂದನೇಂ ಕಲಿಯೊ ಸತ್ಕವಿಯೋ ಕವಿತಾಗುಣಾರ್ಣವಂ ॥

ಪಂಪನು ಕೊಂಡಕುಂದಾನ್ವಯಕ್ಕೆ ಸೇರಿದ ಜೈನಕವಿಯು ಅವನಿಗೆ ಕವಿತಾಗುಣಾರ್ಣವ, ಪುರಾಣಕವಿ, ಸುಕವಿಜನಮನೋಮಾನಸೋತ್ತಂಸಹಂಸ, ಸರಸ್ವತೀ ಮಣಿಹಾರ, ಸಂಸಾರಸಾರೋದಯ ಮುಂತಾದ ಬಿರುದುಗಳಿದ್ದಂತೆ ಕಾವ್ಯದಲ್ಲಿ

ಅಲ್ಲಲ್ಲಿ ಹೇಳಿಕೊಂಡಿರುವನು ಇವನ ಗುರು ದೇವೇಂದ್ರಮುನಿಯು. ಅತನು ರಾಜಪೂಜಿತನೆಂದೂ, ಭಾರತೀಭಾಳಪಟ್ಟನೆಂದೂ ತಿಳಿದುಬರುತ್ತದೆ

ಪಂಪನ ಕಾಲವನ್ನು ಆದಿಪುರಾಣದ ಅವನ ಹೇಳಿಕೆಯೇ ಹೀಗೆ ತಿಳಿಸಿಕೊಳ್ಳುವುದು—

"ಶಕವರ್ಷವೆಂಟುನೂಱ । ರ್ಕೆಕಡೆಯೊಳಱುವತ್ತು ಮೂಱುಸಂದಂದು ಜಗ– ।
ತ್ಪ್ರಕಟಪ್ಲವಸಂವತ್ಸರ । ದ ಕಾರ್ತಿಕಂ ಮುದಮನೀಯೆ ನಂದೀಶ್ವರದೊಳ್ ॥
ಸಿತಪಕ್ಷದ ಪಂಚಮಿದಿನ । ಪತಿವಾರಂ ಶುಭದಮೂಲನಕ್ಷತ್ರದೊಳ ।
ನ್ನಿತವಾಗೆ ನೆಗಱು ದೀವು । ಕೃತಿಜಗದೊಳ್ ಪುದಿದು ಸಾಗರಾಂತಂ ಬರೆಗಂ" ।

ಈ ಪದ್ಯಗಳಿಂದ ಕಾವ್ಯವನ್ನು ಶಕ 863ನೆಯ ಪ್ಲವ ಸಂವತ್ಸರದಲ್ಲಿ ಎಂದರೆ ಕ್ರಿ ಶ (863+78) 941ರಲ್ಲಿ ಬರೆದಂತೆ ತಿಳಿದುಬರುವುದು ತಾನು ದುಂದುಭಿ ಸಂವತ್ಸರದಲ್ಲಿ ಹುಟ್ಟಿದಂತೆಯೇ ಹೇಳಿಕೊಂಡದ್ದರಿಂದ (941–39) ಪ್ಲವದಿಂದ ದುಂದುಭಿಯ ವರೆಗೆ ಹಿಂದಕ್ಕೆ ಲೆಕ್ಕಮಾಡಿದರೆ ಪಂಪನು ಕ್ರಿ ಶ 902ರಲ್ಲಿ ಹುಟ್ಟಿದನೆಂದು ತಿಳಿಯುವುದು ಗ್ರಂಥಬರೆದಾಗ ಆತನಿಗೆ 39 ವರ್ಷವಾಗಿದ್ದಿರಬೇಕು ಕವಿಯು ಪಂಪಭಾರತದಲ್ಲಿ ಬನವಾಸಿ ದೇಶವನ್ನು ವಿಶೇಷವಾಗಿ ಹೊಗಳಿಕೊಂಡುದರಿಂದ ಅದು ಆತನ ಹುಟ್ಟೂರಾಗಿದ್ದರೂ ಇರಬಹುದೆಂದು ವಿದ್ವಾಂಸರು ಊಹಿಸುತ್ತಿರುವರು

ಪಂಪನು ತನ್ನ ಭಾರತಕಾವ್ಯದ ಆದಿಯಲ್ಲಿ ವೇದವ್ಯಾಸನೊಬ್ಬನನ್ನಲ್ಲದೆ ಬೇರೆ ಯಾವ ಕವಿಗಳನ್ನೂ ಸ್ತುತಿಸಿಕೊಂಡಿಲ್ಲ ಇದರಿಂದ ಆತನಿಗೆ ತನ್ನ ವಿದ್ವತ್ತಿನಲ್ಲಿ ಅಪಾರವಾದ ನಂಬಿಕೆಯಿತ್ತೆಂಬುದನ್ನು ತೋರ್ಪಡಿಸಿಕೊಂಡಿರುವನೆಂದು ಭಾವಿಸಲಾಗುವುದು ಸಾಮಾನ್ಯವಾಗಿ ಮುಂದಣ ಜೈನ ಮಹಾಕವಿಗಳೆಲ್ಲರೂ ಈತನನ್ನು ಬೇರೆ ಬೇರೆ ರೀತಿಯಿಂದ ಹೊಗಳಿರುವರೆಂದರೆ ಅವನ ಮಹಿಮೆಯು ತಾನಾಗಿಯೇ ವ್ಯಕ್ತವಾಗುವುದು ಅವರಲ್ಲಿ ಕ್ರಿ ಶ ಸು. 1385ರಲ್ಲಿ ಇದ್ದಿರಬಹುದಾಗ ಮಧುರನು ಪಂಪನನ್ನು ಕುರಿತು—

"ಆದಿಕವಿಪಂಪನೆಂದನು । ವಾದಿಸಿ ವಾದಿಸಿ ವಿರೋಧಿ ವಿಪರೀತತೆಯಿಂ ।
ದೋದೆವಿಲೋಮದೆ ಪೆಸರಂ । ಮೇದಿನಿಯೊಳಗವನಪೆಸರೆ ಪೆಸರ್ವಡೆದೆಸೆಗುಂ"॥

ಎಂದು ಬಹುಚಮತ್ಕಾರವಾಗಿ ಶ್ಲಾಘಿಸಿರುವನು.

ಕವಿಯು ತನ್ನ ಗ್ರಂಥಗಳನ್ನು "ರಾಜದ್ರಾಜಕಮೆನಿಸಿದ ಸಾಜದ ಪುಲಿಗೆಱೆಯ ತಿರುಳ ಕನ್ನಡದೊಳ್" ಬರೆದಿರುವಂತೆ ಹೇಳಿಕೊಂಡಿರುವನು ಲಕ್ಷಣಗ್ರಂಥವಾದ

ಕವಿರಾಜಮಾರ್ಗದಲ್ಲಿ ನೃಪತುಂಗನು- ಕಿಸುವೊಳಲು, ಕೊಪಣನಗರ, ಪುಲಿಗೆಱೆ, ಒಂಕುಂದ—ಇವುಗಳ ನಡುವಣ ನಾಡೆ ನಾಡೆ ಕನ್ನಡದ ತಿರುಳ್ ಎಂದು ಹೇಳಿದ್ದಾನೆ ಕನ್ನಡ ವ್ಯಾಕರಣಗಾರರೆಲ್ಲರೂ ಪಂಪನ ಪದ್ಯಗಳನ್ನು ಉದಾಹರಿಸಿರುವರೆಂದರೆ ಭಾಷೆಯ ಶುದ್ಧತೆಗೆ ಅದಕ್ಕಿಂತ ಹೆಚ್ಚಿನ ಸಾಕ್ಷ್ಯವೇನೂ ಬೇಕಾಗಿಲ್ಲ ಪಂಪನ ಪದಜೋಡಣೆಯು ಕಿವಿಗಿಂಪಾಗಿ ಲಲಿತವೂ ಹೃದಯಂಗಮವೂ ಆಗಿರುವುದು ಮುತ್ತಿನ ಮಾಲೆಯಂತೆ ಪದಗಳು ಹೊಂದಿಕೊಂಡಾಗಿವೆ ಬಂಧವು ಗಂಭೀರವಾಗಿ ಭಾವಗರ್ಭಿತವಾಗಿದೆ ಇಂಗೋಲಿನಂತೆ ಜಗಿಯುವವನ ಶಕ್ತಿಗನುಸಾರವಾಗಿ ರಸವು ಒಸರುತ್ತಿರುವುದು ಇವನ ವಾಗ್ಧೋರಣೆಯು ಇತರ ಕನ್ನಡ ಕವಿಗಳಲ್ಲಿ ಪ್ರಾಯಶಃ ದೊರೆಯಲಾರದೆಂದು ಹೇಳಿದರೆ ಹೆಚ್ಚಾಗಲಾರದು

ಪಂಪನು ತನ್ನ ಭಾರತದಲ್ಲಿ ಪಾಂಡವರ ಜನನದಿಂದ ಕೌರವರ ವಧೆಯವರೆಗಣ ಕಥೆಯನ್ನು ಸಂಕ್ಷೇಪವಾಗಿ ಹೇಳಿರುವನು "ಒಂದೆ ಅನೇಕರು ಭಾರತಕಥೆಯನ್ನು ಬರೆದಿರುವರು ಆದರೆ ಯಾವ ಸಂಗತಿಯನ್ನೂ ಬಿಡದಂತೆ ಕ್ರಮವಾಗಿಯೂ ಮನೋಹರವಾಗಿಯೂ ಬರೆವುದಕ್ಕೆ ಇನ್ನಾರೂ ಸಮರ್ಥರಿಲ್ಲ' ಎಂದು ವಿದ್ವಾಂಸರು ಕೇಳಿಕೊಳ್ಳಲು "ಪೇೞಿರೊಡರ್ಚಿದೆನೀ ಪ್ರಬಂಧಮಂ' ಎಂದು ಮೊದಲುಮಾಡಿ ಲೋಕಪೂಜ್ಯವೆನಿಸುವ ಉದ್ಗ್ರಂಥವನ್ನು ಬರೆದು ತಾನು ಕರ್ಣಾಟಕ ಕವಿಕುಲ ಸಾರ್ವಭೌಮನೆನಿಸಿದನು

ಅಂತಹ ಮಹಾ ಕವಿಯ ಕಾವ್ಯವನ್ನು ಮನನಮಾಡುವುದು ಕನ್ನಡಿಗರೆಲ್ಲರ ಕರ್ತವ್ಯವು ಆ ಸೌಭಾಗ್ಯದಿಂದ ನಾವು ವಂಚಿತರಾದರೆ ನಮ್ಮ ಕರ್ತವ್ಯಕ್ಕೆ ಲೋಪ ತಂದುಕೊಂಡಂತೆಯೇ ಸರಿ ಆದರೆ ಮಾಡುವುದೇನು? ಅದು ಸುಶ್ರಾವ್ಯವಾದ ಮಧುರಪಾಕವಾದರೂ ಕಾರಣಾಂತರಗಳಿಂದ ನೀರಿಳಿಯದ ಗಂಟಲಲ್ಲಿ ಕಡುಬನ್ನು ತುರುಕುವುದಕ್ಕಿಂತಲೂ ಕಷ್ಟಕರವಾಗುತ್ತಿರುವುದು ಎಂದೂ ಪಂಪರನ್ನರ ಭಾಷೆಯು ಕೇವಲ ಪಂಡಿತರಿಗೆ ಮೀಸಲಾಗಿರುವುದೆಂದೂ ದೂರಿಕೊಳ್ಳುತ್ತಿರುವ ಕೋಲಾಹಲವೇ ಕೇಳಿಸುತ್ತಿರುವುದು ಪಂಪನ ಪ್ರಸಾದವು ಸರ್ವಜನರಿಗೂ ಸಾಮಾನ್ಯವಾಗಿರಬೇಕು ಅವನ ಕಾವ್ಯಮಾರ್ಗದಲ್ಲಿ ನಿರ್ಭಯವಾಗಿ ಎಲ್ಲರೂ ಸಂಚರಿಸಿದರೇನೇ ಅದು ರಾರಾಜಿಸುವ ರಾಜಮಾರ್ಗವಾಗುವುದು ತರುಣರಿಗೆ ಅದು ಸುಗಮವಾಗುವಂತೆ ಮಾಡುವುದು ಪ್ರತಿಯೊಬ್ಬ ಕನ್ನಡಿಗನಿಗೂ ಇರುವ ಹೊಣೆಗಾರಿಕೆಯು ಎಂಬ ವಿಚಾರದಿಂದ "ಪಂಪನು ತನ್ನ ಭಾರತದಲ್ಲಿ ಹುದುಗಿಸಿಟ್ಟಿರುವ ಬೇರೊಂದು ಕಾವ್ಯವೆಂಬಂತೆ ಭಾಸವಾಗುವ, ಮುಕ್ತಕಂಠವಾಗಿ "ಕರ್ಣರಸಾಯನ"ವೆಂದು ಕೊಂಡಾ

ಡಿದ ತನ್ನ ಅಚ್ಚುಮೆಚ್ಚಿನ ಕರ್ಣನ ಚರಿತ್ರೆಯನ್ನು ಪರಿಶೋಧಿಸಿ ಒಂಭತ್ತು ಗ್ರಾ
ಗಳನ್ನಾಗಿ ವಿಬಾಗಿಸಿಕೊಂಡು "ಯಥಾರ್ಥಬೋಧಿನಿ"ಯೆಂಬ ವ್ಯಾಖ್ಯಾನ ಬ
ಯುವ ಸಾಹಸ ಮಾಡಲಾಯಿತು ಈ ಕರ್ಣರಸಾಯನವು ತರುಣರ ಆಸ್ವಾದನೆ
ದೊರೆಯುವಂತಾಗಿ ಆ ನಾಡೋಜನ ಓಜಸ್ವಿತೆಯು ತಿಳಿದುಕೊಳ್ಳುವಂತಾದರೆ ನಮ
ಪರಿಶ್ರಮವು ಪರಿಹಾರವಾದಂತಾಗುವುದು.

—ಇಂತು ಬಿನ್ನಯಿಸುವ,

ಸಜ್ಜನ ವಿಧೇಯ,

**ಕೆ. ವಿ. ಕೃಷ್ಣಭಟ್ಟ ವಿದ್ವಾನ್**

ಬಿ. ಎ , ಬಿ. ಓ. ಎಲ್

ಕಾವೇರಿಕಾನ
ಎಡನಾಡು
೧೯೫೦



॥ ಶ್ರೀರಸ್ತು ॥

## ಪಂಪಭಾರತಮೆಂಬ
## 'ವಿಕ್ರಮಾರ್ಜುನವಿಜಯ'ದೊಳಗಣ

# ಕರ್ಣರಸಾಯನಂ

## ಪೀಠಿಕೆ.

"ನೆನೆಯದಿರಣ್ಣ ಭಾರತದೊಳಿಂ ಪೆಱರಾರುಮನೊಂದೆ ಚಿತ್ತದಿಂ ।
ನೆನೆವೊಡ ಕರ್ಣನಂ ನೆನೆಯ ಕರ್ಣನೊಳಾರ್ ದೊರೆ ಕರ್ಣನೇಱು ಕ-॥
ರ್ಣನ ಕಡುನನ್ನಿ ಕರ್ಣನಳವಂಕದ ಕರ್ಣನ ಚಾಗಮೆಂದು ಕ- ।
ರ್ಣನ ಪಡೆಮಾತಿನೊಳ್ ಪುದಿದು **ಕರ್ಣರಸಾಯನ**ಮಲ್ತೆ ಭಾರತಂ" ॥

---

॥ ಕರ್ಣಾಟಕಕರ್ಣರಸಾಯನಕ್ಕೆ ಯಥಾರ್ಥಬೋಧಿನಿ
ಎಂಬ ವ್ಯಾಖ್ಯೆಯನ್ನು ಬರೆವುದಕ್ಕೆ ಶುಭಮಸ್ತು ॥

ಕಂ ॥ ಶ್ರೀಗೌರೀಹೃದಯೇಶಂ
ವಾಗೀಶಾದ್ಯಖಿಲದಿವಿಜನುತವಿಶ್ವೇಶಂ ॥
ಶ್ರೀ ಗುರುರೂಪಮಹೇಶಂ
ರಾಗದಿನೆಮಗೀಗಭೀಷ್ಟಸಿದ್ಧಿಯನನಿಶಂ ॥

ಸ್ವಸ್ತಿ ॥ 'ಕಾವ್ಯಂ ಯಶಸೇಽರ್ಥಕೃತೇ ವ್ಯವಹಾರವಿದೇ ಶಿವೇತರಕ್ಷತಯೇ । ಸದ್ಯಃ ಪರನಿರ್ವೃತಯೇ ಕಾಂತಾಸಮ್ಮಿತತಯೋಪದೇಶಯುಜೇ' ಮತ್ತು 'ಪರಮ-ಪ್ರೀತಿನಿಮಿತ್ತಂ ನಿರತಿಶಯ ಯಶೋನಿದಾನಮಪ್ಪುದಱಿನಿಹಂ ಪರಮೆಂಬೆರಡರ್ಕಂ ಬಂಧುರಕಾವ್ಯನಿಬಂಧದಿಂ ಹಿತಂ ಪೆಱತುಂಟೇ'-ಇತ್ಯಾದಿ ಕವಿವಚನಕ್ಕನುಗುಣವಾಗಿ 'ಚಲದೊಳ್ ದುರ್ಯೋಧನಂ ನನ್ನಿಯೊಳಿನತನಯಂ ಗಂಡಿನೊಳ್ ಭೀಮಸೇನಂ ಬಲದೊಳ್ ಮದ್ರೇಶನತ್ಯುನ್ನತಿಯೊಳಮರಸಿಂಧೂದ್ಭವಂ ಚಾಪವಿದ್ಯಾಬಲದೊಳ್ ಕುಂಭೋದ್ಭವಂ ಸಾಹಸದ ಮಹಿಮೆಯೊಳ್ ಫಲ್ಗುಣಂ ಧರ್ಮದೊಳ್ ನಿರ್ಮಲಚಿತ್ತಂ ಧರ್ಮಪುತ್ರಂ

ಮಿಗಿಲೆ'ನಿಸಿದಿವರುಗಳಿಂದ ಲೋಕಪೂಜ್ಯವಾದ ಭಾರತದ 'ಕತೆ ಪಿರಿದಾದೊಡಂ ಕತೆಯು ಮೆಯ್ಗಿಡಲೀಯದೆ ಮುಂ ಸಮಸ್ತ ಭಾರತಮನಪೂರ್ವಮಾಗೆ ಸಲೆ ಪೇಳ್ದ ಕವೀಶ್ವರ ರಿಲ್ಲ'ದಿದ್ದುದರಿಂದ 'ವರ್ಣಕಂ ಕತೆಯೊಳೊಡಂಬಡಂ ಪಡೆಯೆ ಪೇಟ್ಟೊಡೆ ಪಂಪನೆ ಪೇಟ್ಗುಮೆಂದು ಪಂಡಿತರೆ ತಗುಳ್ದು ಬಿಚ್ಚಟಿಸೆ' 'ರಾಜದ್ರಾಜಕಮೆನಿಸಿದ ಸಾಜದ ಪುಲಿಗೆಱೆಯ ತಿರುಳ ಕನ್ನಡದೊಳ್' 'ಕರಮುಚ್ಚಿತರ್ಪ ಸಮಸ್ತ ಭಾರತ ಕಥಾ ಸಂಬಂಧ' ವನ್ನು 'ಸರಸ್ವತಿಗೆ ವಿಲಾಸಮುಂ ಪೊಸತು ಮಾಡುವ ವಾಗ್ವಿಲಾಸ'ದಿಂದ ಸರಸಕಾವ್ಯ ಪ್ರಬಂಧವಾಗಿ ಹೇಳಿದ 'ಕವಿತೆಯೊಳಗ್ಗಳ'ನೂ 'ಕವಿತಾಗುಣಾರ್ಣವ'ನೂ 'ಪಸರಿಪ ಕನ್ನಡಕ್ಕೊಡೆಯನೊರ್ವನೆ ಸತ್ಕವಿ'ಯೂ ಆದ ಪಂಪನ 'ನಿವ್ಯಾ೯ಜದಸಕದೊಳೆಪುದಿ ದೊಂದೋಜೆ ಬಲದಿನಿಯ ಕವಿತೆ'ಯ ಮಾಧುರ್ಯವನ್ನು ಸವಿಸವಿದು ಕೊಂಡುಕೊನೆಯದ ಕನ್ನಡಿಗರಿಲ್ಲವೆಂದರೆ ಅತಿಶಯೋಕ್ತಿಯಾಗದು. ಅಂತು ಅಖಂಡಕರ್ಣಾಟಲೋಕ ಪ್ರಿಯನೆನಿಸಿ ಕರ್ಣಾಟಕಕವೀಂದ್ರರಲ್ಲಿ ಅಗ್ರತಾಂಬೂಲಕ್ಕೆ ಅರ್ಹನಾದ ಆ ಆದಿಪಂಪ ಮಹಾ ಕವಿಯ 'ಪಂಪಭಾರತಂ' ಎಂದು ಹೆಸರುಗೊಂಡ 'ವಿಕ್ರಮಾರ್ಜುನವಿಜಯಂ' ಎಂಬ ಕಾವ್ಯಪ್ರಬಂಧದಲ್ಲಿ 'ಒಳ್ಪುಣಿಸನುಂಬೆಡೆಯಲ್ಲಿ ರಸಾಯನವೆಂತಂತೆ' ರಸಭರಿತ ವಾಗಿ ಮನಂಗೊಳಿಸುವ ಕರ್ಣಚರಿತವನ್ನು ಪಂಪನ ತಿರುಳ್ಗನ್ನಡದ ಸವಿನುಡಿಗಳಲ್ಲಿಯೆ 'ನಾತಿಸಂಕ್ಷೇಪವಿಸ್ತರ'ವಾಗಿ ಸಂಗ್ರಹಿಸಿ "ಕರ್ಣರಸಾಯನಂ" ಎಂಬ ಅನ್ವರ್ಥನಾಮ ವನ್ನಿಟ್ಟು—

ಕಂ ॥ ಜನನುತಪಂಪನ ವಾಗ್ವಿಲ—
ಸನಮಹಿಮೆಯಿನಿಂಪು ಪಸರಿಪಾ ಕರ್ಣರಸಾ- ॥
ಯನಮಂ ಯಥಾರ್ಥಬೋಧಿನಿ—
ಯೆನಿಪೀಸುವ್ಯಾಖ್ಯೆಯಿಂದೆ ವಿಸ್ತರಿಸಿದಪೆಂ ॥
ಕನ್ನಡಿಗರ್ಗಿದುವೆ ತಿರುಳ್—
ಗನ್ನಡದೊಂದೊಳ್ಪನರಿಯಲೊಪ್ಪುವ ನಲ್ಗ್ಯ— ॥
ಗನ್ನಡಿ ವಾಣಿಗೆ ಸರಸದ
ಮುನ್ನುಡಿಯೆನಲೊಪ್ಪವೊಪ್ಪುತಿರ್ಪುದು ತಪ್ಪೇ ॥

ಅದೆಂತೆಂದರೆ, —

ನೆನೆಯದಿರಣ್ಣ—ಇಂತೆಂದು ಪೀಠಿಕೆ ॥ ಮಹಾಕವಿ ಪಂಪನು, ಲೋಕಪೂಜ್ಯ ವಾದ ಸಮಸ್ತಭಾರತವು ಹೇಗೆ ಕರ್ಣರಸಾಯನವಾಗಿದೆಯೆಂಬುದನ್ನು 'ನೆನೆಯದಿ ರಣ್ಣ —' ಇಂತೆಂಬೀ ವೃತ್ತದಲ್ಲಿ ಸಮರ್ಥಿಸುತ್ತಾನೆ. ಮೂಲಗ್ರಂಥದಲ್ಲಿ ಇದು ಕರ್ಣಾ ವಸಾನಕಥನದ ಅನಂತರದಲ್ಲಿ ಹೇಳಿದ್ದರೂ, ಇದರಲ್ಲಿ ಕರ್ಣಚರಿತ್ರದ ಸರ್ವಾಂಗಸುಂದರ

ಗುಣೋತ್ಕರ್ಷವನ್ನು ಸಂಕ್ಷೇಪವಾಗಿ ಸೂಚಿಸಿರುವುದರಿಂದ, ಕರ್ಣರಸಾಯನವಾದ ಕರ್ಣ ಚರಿತಕ್ಕೆ ಇದು ಪೀಠಿಕೆಯಂತೊಪ್ಪಲು ಯೋಗ್ಯವಾಗಿರುವುದರಿಂದ, ಇದನ್ನು ಇಲ್ಲಿ 'ಪೀಠಿಕಾ' ಸ್ಥಾನದಲ್ಲಿ ಕೊಡಲಾಗಿದೆ ಕರ್ಣರಸಾಯನವೆಂದರೆ ಕಿವಿಗೆ ಇಂಪಾದ ಪದಾರ್ಥ (ಪದ ಮತ್ತು ಅರ್ಥ)ವೆಂದು ಒಂದರ್ಥವು, ಕರ್ಣನನ್ನು ಕುರಿತಾದ ಕಥಾ ಮೃತವನ್ನುಳ್ಳುದೆಂದು ಇನ್ನೊಂದರ್ಥವು. ಮಧುರರಸಭರಿತವಾದ ಪಾಕವು ರಸಾಯನವೆನಿ ಸುವುದು ಔತಣಗಳಲ್ಲಿ ಹಣ್ಣುಗಳ ರಸಾಯನವನ್ನು ಕಂಡರಿಯದವರೂ ಉಂಡರಿಯ ದವರೂ ಇರುವರೇ? ಶರೀರಪುಷ್ಟಿಕರವಾದ ಮದ್ದೆಂದು ವೈದ್ಯರು ಚ್ಯವನಪ್ರಾಶ ಇತ್ಯಾದಿ ರಸಾಯನವನ್ನು ಕೊಡುತ್ತಿರುವುದನ್ನು ಯಾರು ತಿಳಿದಿಲ್ಲ? ಅದರಂತೆ ನವರಸಭರಿತವಾದೀ ಕರ್ಣಚರಿತದಿಂದ ಸಮಸ್ತ ಭಾರತನ್ನೂ ಕನ್ನಡಿಗರೆಲ್ಲರಿಗೆ ಕರ್ಣರಸಾಯನವಾಗಿದೆಯೆಂದು ಕವಿಯ ಅಭಿಪ್ರಾಯವು ಆ ಅಭಿಪ್ರಾಯಸಮರ್ಥನೆಗಾಗಿಯೇ 'ನೆನೆಯದಿರಣ್ಣ — ಎಂದು ಹೇಳತೊಡಗುತ್ತಾನೆ ಅಣ್ಣ' = ಪ್ರಿಯವಾಚಕನೇ, [ಅಣ್ಣ = 'ಜ್ಯೇಷ್ಠಭ್ರಾತೃ' ಎಂಬ ಅರ್ಥವಿದ್ದರೂ ಇಲ್ಲಿ ಓದುಗನನ್ನುದ್ದೇಶಿಸಿ 'ಅಣ್ಣ' ಎಂದು ಕರೆದಿದ್ದಾನೆ ಅಣ್ಣ' ಎಂಬೀ ಶಬ್ದವು ಪ್ರೀತ್ಯರ್ಥಕವಾದುದು ಹಿಂದೀ ಭಾಷೆಯಲ್ಲಿ ಕಬೀರದಾಸರ ಹಾಡು ಗಳಲ್ಲಿ 'ಕಹತಕಬೀರಾ ಸುನೋಭಾಯಿಸಾಧೂ' = (ಕೇಳಣ್ಣ ಸಾಧು! ಪೇಳ್ದಪನೀ ಕಬೀ ರಂ) ಎಂದಿರುವುದನ್ನು ನೆನೆಯಬಹುದು. ಕನ್ನಡದಲ್ಲಿ ಅಣ್ಣನೆಂಬೀ ಪದವು ಹಿರಿಯನ ನ್ನಾಗಲೀ ಕಿರಿಯನನ್ನಾಗಲಿ ಪ್ರೀತಿಯಿಂದ ಸಂಬೋಧಿಸಿ ಮಾತನಾಡುವೆಡೆಯಲ್ಲಿಯೂ ಕುತ್ಸನೆಯನ್ನು ವ್ಯಂಗ್ಯವಾಗಿ ತೋರ್ಪಡಿಸುವೆಡೆಯಲ್ಲಿಯೂ ಪ್ರಯೋಗಿಸಲ್ಪಡುವು ದುಂಟು. ತಿರುಳ್ಗನ್ನಡಿಗನಾದ ನಮ್ಮ ಪಂಪನಿಗೆ ಈ ಪದಪ್ರಯೋಗವು ಬಹುಪ್ರಿಯ ವೆಂದು ತೋರುವುದು— ಪಂಪಭಾರತದಲ್ಲಿ, "ಅಱಿಯಿರೆ ನೀಮುಮಾಮುಮೊಡನೋ ದಿದೆವೆಂಬುದನಣ್ಣ?— ೨।೪೮, "ಜನಮೆಲ್ಲಂ ನೆರೆದಕ್ಕಟಣ್ಣ ರಿವರಿಂದೇವಂದರೇವೋದ ರೆಂಬಿನಮೇಂವೋಪಮೆ?" — ೩।೬೫, "ಸೊರ್ಕಿ ನೀಂ ನುಡಿಯದಿರಣ್ಣ" — ೪।೬, "ಕುಡುವಣ್ಣಂ ಕುಡುಗೆಮ" — ೬।೪೯, "ನೀನಾಗಳುಮಣ್ಣ ಬೇಡಿದಪೆ ಸಜ್ಜನದಂತೆ"— ೯।೪೬, ಈ ಕಲಹದೊಳಣ್ಣ ನಿಮ್ಮ ಕುಲವಾಕುಲಮುಂ ನಿಮಗುಂಟು ಮಾಡುಗುಂ"— ೧೦।೨೧, "ಏಕೆ ನೀಂ ಪಳಂಚಲೆದಪೆಯಣ್ಣ" — ೧೦।೨೩, "ಮುದುಪರ ಬಿಲ್ಬಲ್ಮೆಯು ಮಿಱಿವಡಟುಂಬಗೆವಾಗಳಣ್ಣನೆಂದಂತುಟೆ ತಪ್ಪದು" — ೧೦।೨೪, "ಪೋ ಮಾತು ಅೞ ಸಣ್ಣ ಸೆಟ್ಟಿಯ ಬಳ್ಳಂ ಕಿಱಿದೆಂಬುದೊಂದು ನುಡಿಯಂ ನೀಂ ನಿಕ್ಕುವಂಮಾಡಿ ದಯ್"—೧೨।೧೭೫, ಎಂಬಿವುಗಳನ್ನೂ, ಆದಿಪುರಾಣದಲ್ಲಿ 'ಪೆಂಪುವೆತ್ತತಪಃಪೋತದಿ ನಣ್ಣ ನೀಂ ತಡಿಯನೆಯ್ದು" — ೩।೫೬, ಎಂಬುದನ್ನೂ ನೋಡಬಹುದು.] ಭಾರತ ದೊಳ್ = ಸಮಸ್ತ ಭಾರತಕಥೆಯಲ್ಲಿ, ಪೆಱರಾರುಮಂ = ಬೇರೆ ಯಾರನ್ನೂ, ಇಂ =

ಇನ್ನು, ನೆನೆಯದಿರು = ಸ್ಮರಿಸಬೇಡ, ಒಂದೆ ಚಿತ್ತದಿಂ = ಒಂದೇ ಮನಸ್ಸಿನಿಂದ, ನೆನೆವೊಡೆ = ಸ್ಮರಿಸುವುದಾದರೆ, ಕರ್ಣನಂ ನೆನೆಯ = ಕರ್ಣನನ್ನು ಸ್ಮರಿಸು (ನೆನೆಯ– 'ನೆನೆ ಯೆಂಬ ಧಾತುಗೆ ವಿಧ್ಯರ್ಥದಲ್ಲಿ ಏಕವಚನದಲ್ಲಿ 'ಅ'ತ್ವವು "ಧಾತುಗೇಕವಚನದೊಳತ್ವಂ–ಶ. ಮ. ದ ಸೂತ್ರ ॥ ೧೨೫ ॥ ಮತ್ತು "ಅಯೋಃಲ್ಲುಪೌ"–ಕ. ಶಬ್ದಾನುಶಾಸನದ ಸೂತ್ರ ॥ ೪೬೮ ॥) ಕರ್ಣನೊಳ್‌ದೊರೆಆರ್? – ಕರ್ಣನಿಗೆ ಸಮಾನ ಯೋಗ್ಯತೆಯುಳ್ಳವರು ಯಾರು? (ಕರ್ಣನೆಣೆಗಂತೊಣೆಗಂ ನೃಪರಾರುಮಿಲ್ಲ"— ಪಂ ಭಾ ೧೨।೧೦೦ನ್ನು ನೋಡಿಕೊಳ್ಳಬಹುದು 'ಕರ್ಣನೊಳಾರ್‌ದೊರೆ'–'ಇಱಿವಬೆಡಂಗನೊಳಾರ್‌ದೊರೆ'–ಗದಾಯುದ್ಧದ ೧।೧೮ರೊಡನೆ ಹೋಲಿಸಿರಿ. 'ಶಶಭೃತ್ಕಾಂತಿಗೆ ಮಿಂಚುಂಬುಱು ಸಮನಕ್ಕುಮೊ ದೊರೆಗಮೊರೆಗಮೆಣೆಗಂ ತೊಣೆಗಂ'–ಶಾಂತಿ ಪುರಾಣ ೧೨।೬೭) ಕರ್ಣನ ಏಱು = ಕರ್ಣನ ಪೆಂಪು, ಉತ್ತರೋತ್ತರಾಭಿವೃದ್ಧಿಯ ಸಮಗ್ರತ್ವವು 'ಏಱು' ಎಂಬುದಕ್ಕೆ ಪೆಂಪು, ಸಮಗ್ರತ್ವ, ಉತ್ತರೋತ್ತರಾಭಿವೃದ್ಧಿ, ಅಭ್ಯುದಯ, ಹತ್ತುವುದು, ಏರುವುದು, ದಾಳದ ಏಸಾಟ, ಗಾಯ, ಹೊಡೆತ ಎಂಬ ಅರ್ಥಗಳುಂಟು ) ಕರ್ಣನ ಕಡುನನ್ನಿ = ಕರ್ಣನ ಕಠಿನ ಸತ್ಯವ್ರತಾಚರಣವು, ಕರ್ಣನ ಅಳವು = ಕರ್ಣನ ಸಾಮರ್ಥ್ಯವು (ಕಡುಗಲಿತನವು), ಅಂಕದ = ಪ್ರಸಿದ್ಧಿ ಪಡೆದ, ಕರ್ಣನ ಚಾಗಂ = ಕರ್ಣನ ತ್ಯಾಗಗುಣವು, ಕರ್ಣನ ದಾನಶೂರತ್ವವು, (ಅಂಕದ ಕರ್ಣನ ಚಾಗಂ' ಎಂದಾಗಲಿ, 'ಕರ್ಣನ ಅಂಕದ ಚಾಗಂ' ಎಂದಾಗಲಿ ಎರಡು ಬಗೆಯಿಂದ ಅರ್ಥ ಸಮನ್ವಯ ಮಾಡಬಹುದು ಕರ್ಣನ ತ್ಯಾಗವು ಲೋಕಪ್ರಸಿದ್ಧವಾಗಿದೆ, ಅಂತಹ ತ್ಯಾಗದಿಂದಲೇ ಆತನು ದಾನಶೂರಕರ್ಣನೆಂದು ವಿಖ್ಯಾತನಾಗಿದ್ದಾನೆ ಎಂಬುದರಿಂದ 'ಕರ್ಣನ ಚಾಗಂ ಅಂಕದ ಚಾಗಂ' ಎಂದು ಹೇಳುವುದರಲ್ಲಿಯೂ ಔಚಿತ್ಯವುಂಟು ) ಎಂದು = ಹೀಗೆಂಬುದಾಗಿ, ಕರ್ಣನ ಪಡೆಮಾತಿನೊಳ್‌ಪುದಿದು – ಕರ್ಣನನ್ನು ಕುರಿತ ಪ್ರಸಿದ್ಧಿಯಲ್ಲಿ ಸೇರಿಕೊಂಡು, ಕರ್ಣನ ಸಂಬಂಧವಾದ ವೃತ್ತಾಂತದಲ್ಲಿ ಸೇರಿಕೊಂಡು, (ಪಡೆಮಾತು = ವೃತ್ತಾಂತ, ವಾರ್ತೆ, ಹೆಚ್ಚುಮಾತು, ಪ್ರಸಿದ್ಧಿ, ಖ್ಯಾತಿ ಎಂಬ ಅರ್ಥಗಳು ವೃತ್ತಾಂತ, ವಾರ್ತೆ, ಸುದ್ದಿಯೆಂಬರ್ಥಗಳಲ್ಲಿ ಪಂಪಭಾರತದಲ್ಲಿಯ ಪ್ರಯೋಗಗಳು — "ಅಲ್ಲಿ ಪಾಂಡವರ ಪಡೆಮಾತಾವುದು" — ೩।೩೧ವ, "ಧನಂಜಯನ ಬರವಿನ ಸಂತಸದೊಸಗೆ ಪಡೆಮಾತಂ ಮುಂದುವರಿದಱಿಪುವಂತೆ" — ೪।೩೨ವ; "ನುಡಿಯಿಸಿ ಕೇಳ್ಗುಂ ಹರಿಗನ ಪಡೆಮಾತನೆ" — ೪।೫೬, "ವಿರಹದೊಳಾದ ಪಡೆಮಾತಂ ಕರ್ಣಪರಂಪರೆಯಿಂ ಕೇಳ್ದು" — ೫।೧೯, "ನಾಡಂ ದಯಿಗೆಯ್ದು ನೀಂ ಕುಡುವಿನಂ ಪೆಱತೇಪಡೆಮಾತೊ? (ಪಂ. ಭಾ ೯।೪೨) "ಅಱಿದಿರಲ್ ನಮಗಬ್ಬ ಮನೊಂದನಿದೊರ್ಡೇತಱ ಪಡೆಮಾತೊ ಮತ್ತಮಿರವೇಟ್ಟಿದು ಪನ್ನೆರಡಬ್ದಮಂ ಮನಂಮಱುಗೆ ಬನಂಗಳೊಳ್" ಪಂ. ಭಾ. ೮।೪೯, "ಆ ಪಡೆಮಾತನಿರ್ದರಿರ್ದಲ್ಲಿಯೆ ಕೇಳ್ದು" — ೮।೮೧ವ, 'ಕೀಚಕನ

ಪಡೆವಮಾತನೆ ನುಡಿಯೆ'—೬।೮೨೮, 'ಗುಡಿಗಂ ಬದ್ದವಣಕ್ಕವುಪ್ಪ ಪಡೆವಮಾತೇವಮಾತಿ ದಂಕೇಳ್ವೊಡೀಗಡೆವೆಚ್ಚೀಯಲೆವೇಟ್ಬ್ರುದು'—೬।೮೩ 'ಬಹಳ ಮಾತಿನಿಂದೇನು ? ಹೆಚ್ಚು ಹೇಳಲೇಕೆ ?' ಎಂದು ಕನ್ನಡದಲ್ಲಿಯೂ, 'ಅಲಮತಿ ವಿಸ್ತರೇಣ' 'ಕಿಂಬಹುನಾ' ಎಂದು ಸಂಸ್ಕೃತದಲ್ಲಿಯೂ ಇರುವ ಪ್ರಯೋಗಗಳಿಗೆ ಸಮಾನಾರ್ಥಕವಾಗಿಯೂ ಈ ಪದವು ಪ್ರಯೋಗಿಸಲ್ಪಟ್ಟಿದೆ ಪಂಪಭಾರತದಲ್ಲಿ—'ಪೆಱತೇಂ ಪಡೆವಮಾತೊ ನಿನ್ನದೀ ಮೇದಿನಿ ಪಟ್ಟಮುಂ ನಿನತೆ"—೯।೬೪, ನುಡಿಯೆನದಂ ನಿನ್ನಂಬಿಕೆ, ಪಡೆವಮಾತೇಂ. ಕೊಂತಿ'—೯।೭೮. ಪ್ರಸಿದ್ಧಿ, ಖ್ಯಾತಿ ಎಂಬರ್ಥದಲ್ಲಿ, ಪಂಪನ ಆದಿಪುರಾಣದಲ್ಲಿ, ಪ್ರಯೋಗವು—'ಕಡುಗಲಿತನಮುಂ ಚಾಗದ । ಪಡೆವಮಾತುಂ ವಿದ್ಯೆಯುಂಕುಱವೊರ್ವ ನೊಳೆಂತುಂ ॥ ನಡೆಯುವು ಭುವನಾಂತರದೊಳ್ । ನಿಡಿಯರ್ಗಂ ನಿಡಿಯರೊಳರಿದೇಂ ವಿಸ್ಮಯಮೋ'—೧೨।೧೦೪,) "ಕರ್ಣನೊಳಾರ್ ದೊರೆ? ಕರ್ಣನ ಏಱು, ಕರ್ಣನ ಕಡುನನ್ನಿ, ಕರ್ಣನ ಅಳವು, ಅಂಕದ ಕರ್ಣನ ಚಾಗಂ" ಎಂಬ ಈ ಪಡೆವಮಾತಿನಲ್ಲಿ ಕರ್ಣನ-ಕರ್ಣನ ಎಂದು ಕರ್ಣಪದದ ಪೌನರುಕ್ತ್ಯವು ನಿರ್ದೋಷವಾಗಿದೆಯೆಂದಷ್ಟು ಮಾತ್ರವಲ್ಲ ಕರ್ಣನ ಏಱೇ ಏಱು, ಉಳಿದವರ ಏಱು ಸಾಮಾನ್ಯದ ಏಱು, ಕರ್ಣನ ಕಡುನನ್ನಿಯೇನನ್ನಿ, ಕರ್ಣನ ಅಳವೇ ಅಳವು, ಕರ್ಣನ ಚಾಗವೇ ಚಾಗವು ಎಂದೀ ಬಗೆ ಯಾಗಿ ಕರ್ಣನ ಗುಣಾತಿಶಯವನ್ನೇ ವಿಶೇಷವಾಗಿ ಸಂಭಾವಿಸಿ ನುಡಿವುದರಿಂದ,— ಗುಣೋತ್ಕರ್ಷದ್ಯೋತಕವೂ ಆಗಿದೆ ಉದಾಹರಣೆಗಾಗಿ ನಾಗವರ್ಮನ ಕಾವ್ಯಾವಲೋ ಕನದಲ್ಲಿ ("ಮಾವಿನಕೊನೆ ಮಾವಿನನನೆ । ಮಾವಿನ ಪೂ ಮಾವಿನೆಳೆಯಮಿಡಿ ಮಾವಿನ ಕಾಯಂ ॥ ಮಾವಿನ ಪಣ್ಣೆಂದು ಜನಂ । ಭಾವಿಸೆ ಸರ್ವಾಂಗಸುಂದರಂ ಮಾವೆ ವಲಂ" ॥ ೪೮೭ ॥ ಎಂಬ ಪದ್ಯದೊಡನೆ ಹೋಲಿಸಿರಿ.) ಭಾರತಂ= ಸಮಸ್ತಭಾರತ ಕಥೆಯುಂ, ಕರ್ಣರಸಾಯನಂ— ಕರ್ಣರಸಾಯನವು, ರಸವತ್ತಾದ ಸುಶ್ರಾವ್ಯವಾದ ಕಾವ್ಯ ಪ್ರಬಂ ಧವು, ಅಲ್ತೆ= ಅಲ್ಲವೇ? ಅಹುದೆಂಬುದನ್ನು ಈ 'ಕರ್ಣರಸಾಯನ'ದ ನವಗ್ರಾಸಗಳ (ಒಂಭತ್ತು ತುತ್ತುಗಳ) ಸವಿನೋಡಿ ತಿಳಿದುಕೊಳ್ಳಬಹುದು (ಚಂಪಕಮಾಲಾವೃತ್ತವು. ಅದರ ಲಕ್ಷಣ—ನಜಭಜಜಂಜರಂಬಗೆಗೊಳುತ್ತಿರೆ ಚಂಪಕಮಾಲೆಯೆಂದಪರ್ ॥)

ಪ್ರಥಮಗ್ರಾಸಂ= 'ಮೊದಲನೆಯ ತುತ್ತು' ಈ ಸಂಗ್ರಹವನ್ನು ರಸಾಯನವೆಂದು ಕರೆದಿರುವುದರಿಂದ ಇದರಲ್ಲಿಯ ಪರಿಚ್ಛೇದಗಳನ್ನು ಗ್ರಾಸಗಳೆಂದು ವಿಶೇಷಿಸಿ ಹೇಳಲಾ ಗಿದೆ. ಪ್ರಥಮಗ್ರಾಸದಲ್ಲಿ 'ಕರ್ಣನಏಱು'ವನ್ನು ಸಮರ್ಥಿಸುವ ಕರ್ಣನ ಜನ್ಮವೃತ್ತಾಂತ, ಕರ್ಣನ ಶಸ್ತ್ರಶಾಸ್ತ್ರಪರಿಣತಿ, ಕರ್ಣನಕವಚಕುಂಡಲದಾನ, ಕರ್ಣನ ಇಷುವಿದ್ಯಾರ್ಜನೆ— ಎಂಬೀ ವಿಷಯಗಳು ಬಂದಿವೆ. ಪರಶುರಾಮನ ಶಾಪದ ದೆಸೆಯಿಂದ ಕರ್ಣನಿಗೆ ಉಂಟಾದ 'ಏಱು' (ಮನಃಕ್ಷತ)ವೂ ಹೇಳಲ್ಪಟ್ಟಿದೆ.

## ಪ್ರಥಮ ಗ್ರಾಸಂ

ಮತ್ತಿತ್ತ ನೆಗಟ್ಟೆಯ ಪುರು- ।
ಷೋತ್ತಮನ ಪಿತಾಮಹಂಗೆ ಶೂರಂಗೆ ಮಗಳ್ ॥
ಮತ್ತಗಜಗಮನೆ ಯದುವಂ- ।
ಶೋತ್ತಮೆಯೆನೆ ಕುಂತಿ ಕುಂತಿಭೋಜನ ಮನೆಯೊಳ್ ॥ ೧ ॥
ಬಳೆಯುತ್ತಿರ್ಪನ್ನೆಗಮಾ- ।
ನಳಿನಾಸ್ಯೆಯ ಗೆಯ್ದುದೊಂದು ಶುಶ್ರೂಷ ಮನಂ- ॥
ಗೊಳೆ ಕೊಟ್ಟಂ ದುರ್ವಾಸಂ ।
ವಿಳಸಿತಮಂತ್ರಾಕ್ಷರಂಗಳಂ ದಯೆಯಿಂದಂ ॥ ೨ ॥

---

ಅವತರಣಿಕೆ ॥ 'ಗಾಂಗೇಯಂ ಧೃತರಾಷ್ಟ್ರಂಗೆ ಗಾಂಧಾರರಾಜ ಸೌಬಲನ ಮಗಳಪ್ಪ ಗಾಂಧಾರಿಯುಂ ಶಕುನಿಯೊಡವುಟ್ಟಿದಳಂ ತಂದುಕೊಟ್ಟು' ಎಂಬಲ್ಲಿವರೆಗಿನ ಭಾರತದ ಆದಿಪರ್ವಾಂತರ್ಗತವಾದ ಕಥೆಯನ್ನು ಹೇಳಿ ಕುಂತೀಸ್ವಯಂವರ ವೃತ್ತಾಂತವನ್ನು ಹೇಳುವುದಕ್ಕೆ ಮುಂಚಿತವಾಗಿ, ಪಂಪನು ಕರ್ಣನ ಜನ್ಮವೃತ್ತಾಂತವನ್ನು 'ಮತ್ತಿತ್ತ ನೆಗಟ್ಟೆಯ ಪುರುಷೋತ್ತಮನ ಪಿತಾಮಹಂಗೆ' ಎಂದು ಹೇಳತೊಡಗುತ್ತಾನೆ

ಮತ್ತಿತ್ತ ..ಇಂತೆಂದು ॥ ಕಂದಂ ॥ ಮತ್ತೆ = (ಧೃತರಾಷ್ಟ್ರ ಗಾಂಧಾರಿಯರ ವಿವಾಹವೃತ್ತಾಂತದ) ಅನಂತರದಲ್ಲಿ, ಇತ್ತ = ಈ ಕಡೆ, ನೆಗಟ್ಟೆಯ ಪುರುಷೋತ್ತಮನ = ಪುರುಷೋತ್ತಮನೆಂದು ಪ್ರಸಿದ್ಧನಾದ ಶ್ರೀಕೃಷ್ಣನ ('ದೇವಕೀ ನಂದನಃ ಶೌರಿಃ ಶ್ರೀಪತಿಃ ಪುರುಷೋತ್ತಮಃ'—ಎಂದು ಅಮರವು,) ಪಿತಾಮಹಂಗೆ ಶೂರಂಗೆ = ಅಜ್ಜ (ತಂದೆಯ ತಂದೆ)ನಾದ ಶೂರನೆಂಬಾತನಿಗೆ, ಮಗಳ್ = ಮಗಳಾದ, ಕುಂತಿ = ಪೃಥೆಯೆಂಬ ಅಂಕಿತನಾಮವುಳ್ಳ ಕುಂತಿಯೆಂಬಾಕೆ (ಕನ್ನಡದಲ್ಲಿ 'ಕೊಂತಿ'ಯೆಂಬ ಪ್ರಯೋಗವೂ ಉಂಟು) ಮತ್ತಗಜಗಮನೆ = ಮದ್ದಾನೆಯ ನಡಿಗೆಯಂತೆ ನಡಿಗೆಯುಳ್ಳಾಕೆ,(ಮಂದಗಮನದ ಭಾಮಿನಿ), ಯದುವಂಶೋತ್ತಮೆಯೆನೆ = ಯದುಕುಲದ ಉತ್ತಮ ಕನ್ನಿಕೆಯೆಂಬಂತೆ; ಕುಂತಿಭೋಜನ ಮನೆಯೊಳ್ = ಯದುವಂಶದ ಕುಂತಿಯೆಂಬ ಜನಪದಕ್ಕಧಿಪತಿಯಾದ ಕುಂತಿಭೋಜನೆಂಬಾತನ ಮನೆಯಲ್ಲಿ; ಬಳೆಯುತ್ತಿರ್ಪನ್ನೆಗಂ= ಪ್ರವರ್ಧಮಾನಳಾಗುತ್ತಿರುವಲ್ಲಿ (ಬಳೆ (ಧಾತು)—ಪ್ರವೃದ್ಧೌ, ಬೆಳೆ (ಧಾತು)—ಸಸ್ಯವೃದ್ಧೌ "ಬೆಳೆಯೆಂಬ ಧಾತು ಸಸ್ಯಾವಳಿಯೊಳ್ । ಬಳೆಯೆಂಬ ಧಾತುಮಿಕ್ಕೆಡೆಯೊಳ್ ಸಂ- ॥ ಗಳಿಕುಂ, ತಿಳಿಯಲ್ಬಪ್ಪುದು । ಬೆಳೆಬಳವಿಗಳೆಂಬ ಭಾವವಚನದ್ವಯದೊಳ್"—ಶಬ್ದಮಣಿದರ್ಪಣಂ—ಸೂತ್ರಂ ॥ ೨೧೮ ॥) ಕುಂತಿಭೋಜನು ತನಗೆ ಮಕ್ಕಳಿಲ್ಲದುದರಿಂದ

ಶೂರನ ಮಗಳಾದ ಕುಂತಿಯನ್ನು ದತ್ತಕ್ಕೆ ತೆಗೆದುಕೊಂಡು ಸಾಕಿದನು, ಆ ನಳಿನಾಸ್ಯೆಯು= ಕಮಲಮುಖಿಯಾದ ಕುಂತಿಯು (ನಳಿನದಂತೆ ಎಂದರೆ ಕಮಲದಂತೆ ಸುಂದರವಾದ ಆಸ್ಯೆ ಎಂದರೆ ಮುಖವುಳ್ಳವಳು ನಳಿನಾಸ್ಯೆ), ಗೆಯ್ದುದೊಂದು ಶುಶ್ರೂಷೆ= ಮಾಡಿದ ಒಂದಾನೊಂದು ಸೇವೆಯು ('ನಳಿನಾಸ್ಯೆಯುಗೆಯ್ದುದು'— ವಿಭಕ್ತಿಪಲ್ಲಟವು, ಪ್ರಥಮೆಗೆ ಷಷ್ಠಿ. ಇಂತೀ ವೇಳ್ದ ವಿಭಕ್ತಿಗ- । ಳೆಂತುಂ ಪಲ್ಲಟಿಸುಗುಂ" — ಶ. ಮ. ದ. ಸೂ ॥ ೧೩೪ ॥) ಮನಂಗೊಳೆ= ಮನಸ್ಸು ಮೆಚ್ಚುವಂತಿರಲು, (ದುರ್ವಾಸಮುನಿಯ) ಮನಸ್ಸಿಗೆ ಮೆಚ್ಚುಗೆಯಾಗಿರಲು (ಮನಂಗೊಳ್ (ಧಾತು)— ಚಿತ್ತವಿಮೋಹನೇ); ದುರ್ವಾಸಂ= ದುರ್ವಾಸನೆಂಬ ಋಷಿಯು (ದುರ್ವಾಸನು ಅತ್ರಿಯೆಂಬ ಋಷಿಗೆ ಅನಸೂಯೆಯೆಂಬ ಪತ್ನಿಯಲ್ಲಿ ಜನಿಸಿದನು, ಅತಿಕೋಪಿಷ್ಠನೆಂದು ಪ್ರಸಿದ್ಧನಾದವನು. ಅನೇಕರು ಈತನ ಕೋಪಶಾಪಗಳಿಗೆ ಗುರಿಯಾದ ಕಥೆಗಳು ಪುರಾಣಗಳಲ್ಲಿವೆ ಅಭಿಜ್ಞಾನ ಶಾಕುಂತಲವೆಂಬ ನಾಟಕದಲ್ಲಿ "ಏಷದುರ್ವಾಸಾ ಸುಲಭಕೋಪೋ ಮಹರ್ಷಿಃ"— "ಈ ದುರ್ವಾಸನು ಸುಲಭಕೋಪನಾದ ಮಹರ್ಷಿ"ಯೆಂತೆಂದು ಈತನನ್ನು ವಿಶೇಷಿಸಿ ಹೇಳಿದ ಕಾಳಿದಾಸನು, ಈತನ ಶಾಪವೃತ್ತಾಂತಸಂಯೋಜನದಿಂದ ಆ ನಾಟಕದ ಕಥಾವಸ್ತುವಿಗೆ ವಿಶೇಷಪ್ರಯೋಜನವನ್ನು ಉಂಟುಮಾಡಿದ್ದಾನೆ), ವಿಳಸಿತಮಂತ್ರಾಕ್ಷರಂಗಳಂ= ಪ್ರಯೋಗಸಿದ್ಧಗಳಾಗಿ ಬಹುಪ್ರಭಾವವುಳ್ಳ ಐದು ಮಂತ್ರಾಕ್ಷರಗಳನ್ನು, ದಯೆಯಿಂದಂ ಕೊಟ್ಟಂ= ಕರುಣೆಯಿಂದ ಉಪದೇಶವಿತ್ತನು ("ಆ ನಳಿನಾಸ್ಯೆಯು.... ದಯೆಯಿಂದಂ ಕೊಟ್ಟಂ" ಎಂದು ಇಲ್ಲಿ ಸಂಕ್ಷೇಪವಾಗಿ ಸೂಚಿಸಿದ ವೃತ್ತಾಂತವನ್ನು ಕುಮಾರವ್ಯಾಸ ಕವಿಯು 'ಕನ್ನಡಭಾರತ'ದಲ್ಲಿ ಆದಿಪರ್ವದ ೩ನೆ ಸಂಧಿಯ ೧೩ನೆ, ೧೪ನೆ, ೧೫ನೆ ೧೬ನೆ ಪದ್ಯಗಳಲ್ಲಿ ಸ್ವಲ್ಪ ವಿಸ್ತರಿಸಿ ಹೇಳಿದ್ದಾನೆ.) "ಮತ್ತಿತ್ತ" ಮತ್ತು "ಒಳಿಯುತ್ತಿರ್ಪನ್ನೆಗಂ" ಎಂದಾರಂಭಿಸುವ ಈ ಎರಡು ಕಂದ ಪದ್ಯಗಳಿಗೂ 'ಕೊಟ್ಟಂ' ಎಂಬ ಸಂಪೂರ್ಣ ಕ್ರಿಯಾಪದವೊಂದೇ ಆದುದರಿಂದ ಒಟ್ಟಾಗಿಯೆ ಅನ್ವಯವು ಹೀಗಿರುವುದನ್ನು "ಕುಲಕ"ವೆಂದು ಹೇಳುವುದುಂಟು ಕಂದ ಪದ್ಯದ ಲಕ್ಷಣ-ಗಿರಿಶಂ, ಧೂರ್ಜಟಿ, ಶರ್ವಂ ಪುರಾರಿ, ಮಖರಿಪು ಎಂಬ ಮಾತ್ರಾಗಣಗಳಿಂದ ಕಂದವಾಗುವುದು ಒಂದನೆ ಮೂರನೇ ಪಾದಗಳಲ್ಲಿ ಮೂರು ಮೂರು ಗಣಗಳೂ, ಎರಡನೆ ನಾಲ್ಕನೆಯ ಪಾದಗಳಲ್ಲಿ ಗಣಗಳು ಐದೈದೂ ಇರಬೇಕು ಪದ್ಯಾರ್ಧಗಳ ವಿಷಮ ಸ್ಥಾನಗಳಲ್ಲಿ ಮಧ್ಯಗುರುವುಳ್ಳ ಪುರಾರಿ ಗಣವಿರಕೂಡದು ಆರನೆಯ ಸ್ಥಾನದಲ್ಲಿ ಪುರಾರಿ ಅಥವಾ ಮಖರಿಪುವಿದ್ದು ಮೊದಲ ಹ್ರಸ್ವದ ಮುಂದೆ ಯತಿಯಿರಬೇಕು ಅಂತ್ಯದವುಗುರುವುಳ್ಳವುಗಳಾಗಿರಬೇಕು ಸಂಸ್ಕೃತ 'ಆರ್ಯಾ' ವೃತ್ತಭೇದವಾದ ಕಂದವು ಕನ್ನಡದಲ್ಲಿ ವಿಶೇಷವಾಗಿ ಬಳಕೆಯಲ್ಲಿದೆ. ಕಂದ ಪದ್ಯವಿಲ್ಲದ ಹಳಗನ್ನಡ ಚಂಪೂಗ್ರಂಥಗಳಿಲ್ಲವೆಂದರೆ ಕನ್ನಡ ಕವಿಗಳು ಅದನ್ನು ಎಷ್ಟು ಮೆಚ್ಚಿರುವರೆಂದು ಬೇರೆ ಹೇಳಬೇಕಾಗಿಲ್ಲ ॥ ೧—೨ ॥

ವ ॥ ಅಂತು ಕೊಟ್ಟಯ್ದು ಮಂತ್ರಾಕ್ಷರಂಗಳನಾಹ್ವಾನಂಗೆಯ್ದು ನಿನ್ನ ಬಗೆಗೆ ಬಂದ ಪೋಲ್ವೆಯ ಮಕ್ಕಳಂ ಪಡೆವೆಯೆಂದು ಬೆಸಸಿದೊಡೊಂದು ದಿವಸಂ ಕೊಂತಿ–

ಪುಚ್ಚವಣಂ ನೋಡುವೆನೆ– ।
ನ್ನಿಚ್ಚೆಯೊಳೀ ಮುನಿಯ ವರದ ಮಹಿಮೆಯನೆನುತಂ– ॥
ದುಚ್ಚಸ್ತನಿ ಗಂಗೆಗೆ ಶಫ– ।
ರೋಚ್ಚಳಿತತರತ್ತರಂಗೆಗೊರ್ವಳೆ ಬಂದಳ್ ॥ ೩ ॥

ಬಂದು ಸುರನದಿಯ ನೀರೊಳ್ ।
ಮಿಂದಿನನಂ ನೋಡಿ ನಿನ್ನ ದೊರೆಯನೆ ಮಗನ– ॥
ಕ್ಕೆಂದಾಹ್ವಾನಂಗೆಯ್ಯಲೊ– ।
ಡಂ ದಲ್ ಧರೆಗಿಳಿದನಂದು ದಶಶತಕಿರಣಂ ॥ ೪ ॥

---

ಅಂತುಕೊಟ್ಟ .....ಇಂತೆಂದು ವಚನಂ ॥ ಅಂತುಕೊಟ್ಟ ಅಯ್ದು ಮಂತ್ರಾಕ್ಷರಂಗಳಂ= ಹಾಗೆ ಉಪದೇಶಕೊಟ್ಟ ಐದು ಮಂತ್ರಾಕ್ಷರಗಳನ್ನು (ಉಚ್ಚರಿಸಿ) ಆಹ್ವಾನಂಗೆಯ್ದು= (ಇಷ್ಟವುಳ್ಳ ದೇವತೆಗಳನ್ನು) ಆವಾಹನೆಮಾಡಿ, (ಆಹ್ವಾನಿಸಿ= ಸಮೀಪಕ್ಕೆ ಕರೆದು); ನಿನ್ನಬಗೆಗೆ ಬಂದ = ನಿನ್ನ ಮನಸ್ಸಿಗೊಪ್ಪಿದ, ಪೋಲ್ವೆಯ = ಹೋಲಿಕೆಯ (ಆವಾವ ದೇವತೆಗಳು ನಿನ್ನ ಬಗೆಗೆ ಬರುವರೋ ಆಯಾ ದೇವತೆಗಳನ್ನೇ ಹೋಲುವಂತಹ ಎಂದು ತಾತ್ಪರ್ಯವು, ಮಕ್ಕಳಂ ಪಡೆವೆಯೆಂದು, ಬೆಸಸಿದೊಡೆ= ಆಜ್ಞಾಪಿಸಲು, ಒಂದು ದಿವಸಂ= ಮತ್ತೆ ಒಂದಾನೊಂದು ದಿವಸದಲ್ಲಿ 'ಒಂದು ದಿವಸಂ'–ವಿಭಕ್ತಿ ಪಲ್ಲಟವು–ಸಪ್ತಮ್ಯರ್ಥದಲ್ಲಿ ಪ್ರಥಮೆ, ಕೊಂತಿ= ಕುಂತಿಯು.

ಪುಚ್ಚವಣಂ—ಇಂತೆಂದು ಕಂದಂ ॥ ಎನ್ನ ಇಚ್ಛೆಯೊಳ್= ಸ್ವೇಚ್ಛೆಯಿಂದ, ಈ ಮುನಿಯ ವರದ ಮಹಿಮೆಯುಂ, ಪುಚ್ಚವಣಂ ನೋಡುವೆನ್ ಎಂದು= ಪರೀಕ್ಷೆ ಮಾಡಿ ನೋಡುತ್ತೇನೆಂದು; ಉಚ್ಚಸ್ತನಿ= ಉನ್ನತ ಸ್ತನಗಳುಳ್ಳಾಕೆ (ಈ ವಿಶೇಷಣದಲ್ಲಿ ಕುಂತಿಯ ತಾರುಣ್ಯ ಶೋಭೆಯು ಧ್ವನಿಯಿದೆ), ಶಫರೋಚ್ಚಳಿತ ತರತ್ತರಂಗೆಗೆ = ಹೊಳೆವ ಮೀನುಗಳ ಚಲನದಿಂದ ಕಂಗೊಳಿಸುವ ತೆರೆಗಳುಳ್ಳಂತಹ ('ಗಂಗೆಗೆ'ಯೆಂಬ ಮುಂದಿನ ಪದಕ್ಕೆ ವಿಶೇಷಣವಿದು), ಗಂಗೆಗೆ= ಗಂಗಾನದಿಗೆ, ಒರ್ವಳೆ ಬಂದಳ್ = ಒಬ್ಬಳೇ ಬಂದಳು ॥ ೩ ॥

ಬಂದು—ಇಂತೆಂದು ಕಂದಂ ॥ ಬಂದು, ಸುರನದಿಯ ನೀರೊಳ್ = ದೇವನದಿಯೆನಿಸಿದ ಗಂಗೆಯ ನೀರಲ್ಲಿ, ಮಿಂದು; ಇನನಂ= ಸೂರ್ಯನನ್ನು, ನೋಡಿ; 'ನಿನ್ನ

ವ ॥ ಅಂತು ನಭೋಭಾಗದಿಂ ಭೂಮಿಭಾಗಕ್ಕಿೞಿದು ತನ್ನ ಮುಂದೆ ನಿಂದರವಿಂದಬಾಂಧವನಂ ನೋಡಿ ನೋಡಿ, ಕೊಡಗೂಸುತನದ ಭಯದಿಂ ನಡುಗುವ ಕನ್ನಿಕೆಯ ಮನದ ಶಂಕೆಯುಮಂ ನಡುಗುವ ಮೆಯ್ಯ ನಡುಕಮುಮಂ ಕಿಡನುಡಿದಿಂತೆಂದಂ–

ಬರಿಸಿದ ಕಾರಣಮಾವುದೊ ।
ತರುಣಿ ಮುನೀಶ್ವರನ ಮಂತ್ರಮೇದೊರೆಯೆಂದಾಂ ॥
ಮರುಳಿಯೆನೆಯಱಿದುಮಱಿಯದೆ ।
ಬರಿಸಿದೆನಿನ್ನೇೞಿಮೆಂದೊಡಾಗದು ಪೋಗಲ್ ॥ ೫ ॥
ಮುಂ ಬೇಡಿದ ವರಮಂ ಕುಡ– ।
ದಂಬುಜಮುಖಿ ಪುತ್ರನೆನ್ನ ದೊರೆಯಂ ನಿನಗ– ।
ಕ್ಕೆಂಬುದುಮೊದವಿದ ಗರ್ಭದೊ– ।
ಳಂಬುಜಮಿತ್ರನನೆ ಪೋಲ್ವ ಮಗನೊಗೆತಂದಂ ॥ ೬ ॥

---

ದೊರೆಯನೆ ಮಗನ್ ಅಕ್ಕೆ' ಎಂದು = 'ನಿನ್ನ ಸರಿಸಮಾನನಾದಂತಹನೇ ಮಗನು ಆಗಲಿ' ಎಂದು, ಆಹ್ವಾನಂಗೆಯ್ಯಲೊಡಂ = ಆವಾಹನೆ ಮಾಡಿದ ಕೂಡಲೇ, ಅಂದು, ದಶಶತಕಿರಣಂ = ಸಹಸ್ರಕಿರಣನೆನಿಸಿದ ಸೂರ್ಯನು, ಧರೆಗೆ ಇೞಿದಂ ದಲ್ = ನಿಶ್ಚಯವಾಗಿಯೂ ಭೂಮಿಗೆ ಇಳಿದು ಬಂದನು. (ದಲ್–ನಿಶ್ಚಯಾರ್ಥದ ಅವ್ಯಯವು)॥ ೪ ॥

ಅಂತು — ಇಂತೆಂದು ವಚನಂ ॥ ಅಂತು, ನಭೋಭಾಗದಿಂ = ಆಕಾಶದತ್ತಣಿಂದ ಭೂಮಿಭಾಗಕ್ಕೆ ಇೞಿದ ಅರವಿಂದ ಬಾಂಧವನಂ = ಸೂರ್ಯನನ್ನು [ಸೂರ್ಯೋದಯವಾದಾಗ ಅರವಿಂದ (ಕಮಲ)ಗಳು ಅರಳುವುದರಿಂದ ಸೂರ್ಯನು ಅರವಿಂದಗಳಿಗೆ ಬಾಂಧವ (ಬಂಧು, ಮಿತ್ರ)ನು] ನೋಡಿ ನೋಡಿ = ಚೆನ್ನಾಗಿ ನೋಡಿ (ಅಭೀಕ್ಷ್ಣದಲ್ಲಿ ದ್ವಿರುಕ್ತಿ ಶ. ಮ. ದ–ಸೂ ॥ ೧೯೫ ॥ "ದೂರಾಭೀಕ್ಷ್ಣವಿಪ್ಸೋ । ದಾರಾನುಕೃತಿ ಕ್ರಿಯಾಸಮಭಿಹಾರ ಸಮಿಾ– ॥ ಪೋರುತರ ಚಾಪಳಾದಿಗೆ । ಸಾರಂಬುಧರಿಂ ಪದಕ್ಕೆಯುಗಳೋಚ್ಚರಣಂ ॥") ಕೊಡುಗೂಸುತನದ = ಕನ್ಯಾಭಾವದ (ಕೊಡುಗೂಸು-ಮದುವೆಮಾಡಿ ಕೊಡಲಿರುವ ಕೂಸು, ಕನ್ನಿಕೆ ಕೊಡುಗೂಸಿನ ಭಾವವು ಕೊಡುಗೂಸುತನವು) ಭಯದಿಂ ನಡುಗುವ = ಅಂಜಿಕೆಯಿಂದ ನಡುಗುತ್ತಿರುವ (ಈ ತೆರನಾದ ಭಯಕ್ಕೆ ಸಂಸ್ಕೃತದಲ್ಲಿ 'ಸಾಧ್ವಸ'ವೆನ್ನುವರು) ಆಕೆಯ; ಮನದ ಶಂಕೆಯುಮಂ = ಮನಸ್ಸಿನ ಸಂಶಯವನ್ನೂ, ನಡುಗುವ ಮೈಯ ನಡುಕಮುಮಂ, ಕಿಡೆನುಡಿದು = ಹೋಗಾಡುವಂತೆ ಮಾತಾಡಿ; ಇಂತೆಂದಂ = ಹೀಗೆಂದನು — ॥

ಬರಿಸಿದ–ಮತ್ತು ಮುಂಬೇಡಿದ–ಇಂತೆಂದು ಕಂದಂಗಳ್ ॥ ತರುಣಿ = ಎಲಾ

ಒಡವುಟ್ಟಿದ ಮಣಿಕುಂಡಲ ।
ಮೊಡವುಟ್ಟಿದ ವಜ್ರಕವಚಮಮರ್ದುಂ* ತನ್ನೊಳ್ ॥
ತೊಡರ್ದಿರೆಯುಂ ಬಂದಾತಂ ।
ನಡುಕಮನೊಡರಿಸಿದನಾಗಳಾ ಬಾಲಿಕೆಯಾ ॥ ೭ ॥

---

ತರುಣಿಯೇ 'ಬರಿಸಿದ ಕಾರಣಂ ಆವುದೊ''= ನನ್ನನ್ನು ಇಲ್ಲಿ ಬರಮಾಡಿದಕಾರಣವೇನು? (ಎಂದುಸೂರ್ಯನು ಕೇಳಲು) ಮುನಿಯ ಮಂತ್ರಂಏದೊರೆಯೆಂದು= ಮುನಿಯ ಮಂತ್ರೋಪದೇಶವು ಎಷ್ಟು ಮಹಿಮೆಯುಳ್ಳದ್ದೆಂಬುದನ್ನು ಪರೀಕ್ಷಿಸುವುದಕ್ಕೆಂದು, ಆಂ= ನಾನು, ಮರುಳಿಯೆನೆ= ಹುಚ್ಚಿಯೋಪಾದಿಯಲ್ಲಿ, ಅಱಿದುಂ ಅಱಿಯದ ಬರಿಸಿದಂ= ತಿಳಿದೂ ತಿಳಿಯದವಳಂತೆ ಬರಮಾಡಿದೆನು. ಇನ್ನೇಟಿಂ= ಇನ್ನು ಹೋಗಿರಿ, ಎಂದೊಡೆ= ಇಂತೆಂದು (ಕುಂತಿ ಹೇಳಿದಾಗ), ಅಂಬುಜಮುಖಿ= ಎಲೌ ಕಮಲಾನನೆ (ಸುಂದರಿಯೆ), ಮುಂ ಬೇಡಿದ ವರಮಂ ಕುಡದೆ= ಮೊದಲು (ನೀನು) ಬೇಡಿದವರವನು ಕೊಡದೆ, ಪೋಗಲ್ ಆಗದು= (ನಾನು) ಹೋಗುವುದು ಸರಿಯಲ್ಲ ನಿನಗೆ ಎನ್ನ ದೊರೆಯಂ ಪುತ್ರಂ= ನನ್ನ ಸರಿಸಮಾನನಾದ ಮಗನು, ಅಕ್ಕೆ= ಆಗಲಿ, ಆಗು—ಧಾತುಗೆ ವಿಧ್ಯರ್ಥವರವಾದಾಗ ಅಕ್ ಆದೇಶವಾಗಿ ಬಂದ ರೂಪವಿದು ಎಂಬುದುಂ= ಎಂದು (ಸೂರ್ಯನ) ಹೇಳಿದಾಗಳೆ, ಒದವಿದ ಗರ್ಭದೊಳ್ = ಉಂಟಾದ ದಿವ್ಯ ಗರ್ಭದಿಂದ, ಅಂಬುಜಮಿತ್ರನನೆ ಪೋಲ್ವ ಮಗಂ= ಕಮಲಮಿತ್ರನೆನಿಸಿದ ಸೂರ್ಯನನ್ನೆ ಹೋಲುವ ಮಗನು, ಒಗೆತಂದಂ= ಹುಟ್ಟಿದನು. (ಓಲೆಯಪ್ರತಿಗಳಲ್ಲಿಯ 'ಮುನಿಯ ಮಂತ್ರಮೇ ದೊರೆಯೆಂದಾ ॥ ಮರುಳಿಯೆನೆ" ಎಂಬ ಪಾಠವೂ ಒಂದು ಬಗೆಯಿಂದ ಸರಿಯೆನ್ನಬಹುದು ಹೇಗೆಂದರೆ, -"ಮುನಿಯಮಂತ್ರಂ ಏದೊರೆಯೆಂದಾ? ಮರುಳಿ'"= ಮುನಿಯ ಮಂತ್ರವು ಎಷ್ಟು ಪ್ರಭಾವವುಳ್ಳುದೆಂದೇನೋ ಅಲ್ಲವೇ ಆ! ಮರುಳಿ!, ಎನೆ= ಎಂದು ಸೂರ್ಯನು ಹೇಳಲು, ಕುಂತಿಯು "ಅಱಿದುಮಱಿಯದೆ ಬರಿಸಿದೆನಿನ್ನೇಟಿಂ ಎಂದೊಡೆ" — ಹೀಗೆಂದೂ ಅರ್ಥಮಾಡುವಲ್ಲಿ "ಏದೊರೆಯೆಂದಾ? ಮರುಳಿ?" ಎಂಬಲ್ಲಿ, ಆ! ಮರುಳಿ—ಅಯ್ಯೋ ಹುಚ್ಚೀ' ಎಂಬ ವಿಸ್ಮಯೋಕ್ತಿಯಿರುವುದರಿಂದ ಸೊಗಸುಳ್ಳದಾಗಿದೆ ) ॥ ೫—೬ ॥

ಒಡವುಟ್ಟಿದ— ಇಂತೆಂದು ಕಂದಂ ॥ ಒಡವುಟ್ಟಿದ= ಜತೆಯಲ್ಲಿಯೇ ಹುಟ್ಟಿದ, ಮಣಿಕುಂಡಲಂ= ರನ್ನದ ಕಿವಿದುಡುಗೆಯು, ಒಡವುಟ್ಟಿದ, ವಜ್ರಕವಚಂ= ವಜ್ರಕವಚವು, ಅಮರ್ದುಂ= ಅಮರಿಕೊಂಡು, ಚೆನ್ನಾಗಿ ಅಂಟಿಕೊಂಡು, ತನ್ನೊಳ್= ತನ್ನ ಶರೀರದಲ್ಲಿ; ತೊಡರ್ದಿರೆಯುಂ= ಹೊಂದಿಕೊಂಡಿದ್ದರೂ, ಬಂದಾತಂ= ಹುಟ್ಟಿಬಂದಾ ಬಾಲಕನು, ಆಗಳ್, ಆ ಬಾಲಿಕೆಯೂ (ಬಾಲಿಕೆಯೂ= ಬಾಲಿಕೆಯ, ಷಷ್ಠೀವಿಭಕ್ತಿಯ 'ಅ'ಕಾರಕ್ಕೆ ದೀರ್ಘಾದೇಶವು ಶ.ಮ ದ ಸೂತ್ರಂ ॥ ೧೧೭ ॥ "ಆದರಿಪರ್ ಕೆಲ

ವ ॥ ಅಂತು ನಡನಡನಡುಗಿ ಜಲದೇವತೆಗಳಪ್ಪೊಡಂ ಮನಗಾಣ್ಬರೆಂದು ನಿಧಾನಮನೀಡಾಡುವಂತೆ ಕೂಸಂ ಗಂಗೆಯೊಳೀಡಾಡಿ ಬಂದಳಿತ್ತ ಗಂಗಾದೇವಿಯುಮಾ ಕೂಸಂ ಮುಳುಗಲೀಯದೆ ತನ್ನ ತೆರೆಗಳೆಂಬ ನಳಿತೋಳ್ಗಳಿನೊಯ್ಯನೊಯ್ಯನ ತಳ್ಕೈಸಿ ತರೆ ಗಂಗಾತೀರದೊಳಿರ್ಪ ಸೂತನೆಂಬವಂ ಕಂಡು-

ಬಾಳದಿನೇಶಬಿಂಬದ ನೆಳಲ್ ಜಲದೊಳ್ ನೆಲಸಿತ್ತೊ ಮೇಣ್ ಫಣೀಂ- ।
ದ್ರಾಳಯದಿಂದಮುರ್ಚಿದ ಫಣಾಮಣಿಮಂಗಳರಶ್ಮಿಯೋ ಕರಂ ॥
ಮೋಳಿಸಿದಪ್ಪುದೆನ್ನ*ದೆಯನೆಂದು ಬೆಡಂಗಿನ ಮಾಯೆ ನೀರೊಳಾ ।
ಬಾಳನನಾದರದೆ ಕಂಡೊಸೆದಂ ಸಧಿಗಂಡನಂತವೋಲ್ ॥ ೮ ॥

ಬರ್ ದಿ । ಘೋರ್ದೆಶನುನಗ್ರದಲ್ಲಿ ಷಷ್ಠಿಯುಕಾರಕ್ಕೆ-") ನಡುಕವುಂ = ನಡುಕವನ್ನು, ಒಡರಿಸಿದಂ = ಉಂಟುಮಾಡಿದನು ಒಡರಿಸು (ಧಾ) —(ವಜ್ರಕವಚ ಸಹಜಕುಂಡಲ ಸಮೇತನಾಗಿ ಜನನಕ್ಕೆ ಬಂದಾ ಬಾಲಕನು ಆ ಸಹಜವಾದ ಭೂಷಣಗಳಿಂದಲೂ ಕಾಂತಿಯುಕ್ತನಾದ ದಿವ್ಯಾಕೃತಿಯಿಂದಲೂ ಕಂಗೊಳಿಸುತ್ತ ತನ್ನ ಮನಸ್ಸಿಗೆ ಮೋಹವನ್ನುಂಟುಮಾಡುತ್ತಿದ್ದರೂ ಕೂಡ ಕುಂತಿಯು ವಿವಾಹಕ್ಕೆ ಮುಂಚಿತವಾಗಿ ತನಗೆ ಪುತ್ರೋತ್ಪತ್ತಿಯಾದುದನ್ನು ಕಂಡು ಲೋಕಾಪವಾದಕ್ಕೆ ಹೆದರಿದಳು ) ॥ ೭ ॥

ಅಂತುನಡನಡನಡುಗಿ — ಇಂತೆಂದು ವಚನಂ ॥ ಅಂತು, ನಡನಡನಡುಗಿ = ಚೆನ್ನಾಗಿ ನಡುಕವೆತ್ತಿ ('ನಡನಡ' — ತರಳಾರ್ಥದಲ್ಲಿ ಅನುಕರಣಶಬ್ದವು 'ನೆತ್ತರ್ ಪನಪನಪರಿಯೆ',) ಜಲದೇವತೆಗಳಪ್ಪೊಡಂ = ಜಲದೇವತೆಗಳಾದರೂ, ಮನಂಗಾಣ್ಬರ್ ಎಂದು = ಪ್ರೀತಿ ತೋರಿಸುವರೆಂದು, ನಿಧಾನಮುಂ = ದ್ರವ್ಯನಿಕ್ಷೇಪವನ್ನು, ಈಡಾಡುವಂತೆ = ಲಕ್ಷ್ಯವಿಲ್ಲದೆ ಬಿಸಾಡುವ ಹಾಗೆ, ಕೂಸಂ = ಶಿಶುವನ್ನು, ಗಂಗೆಯೊಳ್ ಈಡಾಡಿ ಬಂದಳ್, ಇತ್ತ ಗಂಗಾದೇವಿಯುಂ = ಗಂಗಾದೇವಿಯಾದರೂ, ಆ ಕೂಸಂ, ಮುಳುಗಲೀಯದೆ = ಮುಳುಗಲಿಕ್ಕೆ ಬಿಡದೆ, ತನ್ನ ತೆರೆಗಳೆಂಬ, ನಳಿತೋಳ್ಗಳಿಂದೆ = ಕೋಮಲವಾದ ತೋಳುಗಳಿಂದ, ತಳ್ಕೈಸಿ = ಆಲಿಂಗಿಸಿಕೊಂಡು, ಅಪ್ಪಿಕೊಂಡು, ತರೆ = ತರುತ್ತಿರುವಲ್ಲಿ (ತರೆ ಸತಿಸಪ್ತಮಿ), ಗಂಗಾತೀರದೊಳ್ ಇರ್ಪ = ಗಂಗೆಯ ತಡಿಯಲ್ಲಿ ವಾಸವಾಗಿದ್ದ, ಸೂತನೆಂಬವಂ ಕಂಡು = ಸೂತನೆಂಬ ಹೆಸರಿನ ಬೆಸ್ತರವನು ನೋಡಿದವನಾಗಿ,—

ಬಾಳದಿನೇಶಬಿಂಬದ— ಇಂತೆಂದು ಉತ್ಪಲಮಾಲಾವೃತ್ತಂ ॥ ಬಾಳದಿನೇಶಬಿಂಬದ = ಉದಯಕಾಲದ ಸೂರ್ಯನ ಬಿಂಬದ, ನೆಳಲ್ = ಪ್ರತಿಬಿಂಬವು, (ಪ್ರತಿಚ್ಛಾಯೆ,

ನೆರಳು; ಜಲದೊಳ್ ನೆಲಸಿತ್ತೊ = ನೀರಲ್ಲಿ ನೆಲಸಿತೋ ? ಮೇಣ್ = ಇಲ್ಲವೆ, ಫಣೀಂದ್ರಾಲಯದಿಂದ = ಪಾತಾಳದತ್ತಣಿಂದ (ಫಣೀಂದ್ರ)-ಫಣಿ-ನಾಗಗಳಿಗೆಲ್ಲಾ, ಇಂದ್ರ ಒಡೆಯನಾದ ವಾಸುಕಿಯು, ಆಲಯದಿಂದ-ವಾಸಸ್ಥಾನದತ್ತಣಿಂದ ಎಂದರೆ ನಾಗಲೋಕದ ಅಥವಾ ಪಾತಾಳದ ಕಡೆಯಿಂದ) ಉರ್ಚಿದ = ಮೇಲಕ್ಕೆ ಸೂಸಿದ, ಫಣಾಮಣಿಮಂಗಳ ರಶ್ಮಿಯೋ = ಹೆಡೆವಣಿಯ ಶುಭಕರವಾದ ಕಿರಣವೋ? (ಹೀಗೆಂಬ ಸಂಶಯದಿಂದ) ಎನ್ನ ಎರ್ದೆಯಂ = ನನ್ನ ಅಂತರಂಗವನ್ನು, (ಎರ್ದೆ—ಸಹಜಶಿಥಿಲವು, ಶ.ಮ ದ.ಸೂತ್ರಂ ॥ ೪೫ ॥ ಕರಂ = ಅಧಿಕವಾಗಿ (ಕರಂ-ಅಧಿಕಾರ್ಥಬೋಧನೆಯ ಅವ್ಯಯವು); ಮೋಳಿಸಿದಪ್ಪುದು = ಸೆಳೆಯುತ್ತಿರುವುದು (ಹೊಂದಿಸುತ್ತಿರ್ಪುದು) ಎನ್ನೆರ್ದೆಯಂಕರಂ ಮೋಳಿಸಿದಪ್ಪುದು = ನನ್ನ ಹೃದಯವನ್ನು ವಿಶೇಷವಾಗಿ ಆಕರ್ಷಿಸುತ್ತಿರುವುದು ಎಂದು ತಾತ್ಪರ್ಯವು ) ಎಂದು = ಹೀಗೆಂದು ಭಾವಿಸಿದವನಾಗಿ, ಬೊದಿಲ್ಲೆನೆ ನೀರೊಳ್ಪಾಯ್ದು = ಬೊದಿಲ್ಲೆಂದು ನೀರಲ್ಲಿ ಧುಮ್ಮಿಕ್ಕಿ (ಬೊದಿಲ್ಲೆನೆ—ಬೊದಿಲ್—ಅನುಕರಣಶಬ್ದವು ಧಪ್ಪುರಿಧಟ್ಟಿಂ ಪೊಟ್ಟೆನೆ ಧೊಪ್ಪಧೊಗಪ್ಪೆನೆ ದಿಧಿಲ್ ಬೊಧಿಲ್ಲೆನೆ ಗದೆಗಳ್ — ರನ್ನನ ಗದಾಯುದ್ಧಂ ೮।೧೧ ॥) ಆ ಬಾಳನಂ = ಆ ಬಾಲಕನನ್ನು, ನಿಧಿಗಂಡನಂತೆವೋಲ್ = (ನಿಧಿಯಂ ಕಂಡನಂತೆವೋಲ್—ನಿಧಿಗಂಡನಂತೆವೋಲ್) ಹಠಾತ್ತಾಗಿ ನಿಕ್ಷೇಪವನ್ನು ಕಂಡವನ ಹಾಗೆ, ಆದಂ = ಅಧಿಕವಾದ (ಆದಂ—ಅಧಿಕಾರ್ಥ ಬೋಧನೆಯ ಅವ್ಯಯವು) ಆದರದೆ ಕಂಡೊಸೆದಂ = ಆದರದಿಂದ ಕಂಡು ಸಂತೋಷಪಟ್ಟನು (ಎಳೆ ಸೂರ್ಯಬಿಂಬದ ಕಾಂತಿಯು, ಮಧ್ಯಾಹ್ನದ ಸೂರ್ಯಬಿಂಬದ ತೀಕ್ಷ್ಣ ಕಿರಣಗಳ ಕಾಂತಿಗಿಂತ ಅಧಿಕಮನೋಹರವಾಗಿದೆ, ಆದುದರಿಂದ ಬಾಲನ ಸುಂದರ ಕಾಂತಿಪೂರ್ಣವಾದ ಮೃದುಲಶರೀರವು ಬಾಲದಿನೇಶಬಿಂಬದ ನೆಟಿಲಂತೆ ತೋರುವುದು ಸಹಜವಾಗಿದೆ. ತರುಣ ತರಣಿಯ ತೇಜಸ್ಸುಳ್ಳ ತನಯನು ತರತ್ತರಂಗಗಳಿಂದ ತಳ್ಳಿಸಲ್ಪಟ್ಟು ತೇಲುತ್ತ ತೊಳಗುತ್ತಿರುವಾಗ, ಸೂತನ ಮುಂಗಡೆ ಕಂಗೊಳಿಸಿದಾ ದೃಶ್ಯವನ್ನು ಕವಿಯು ಇಲ್ಲಿ ಎಷ್ಟು ಹೃದಯಂಗಮವಾಗಿ ವರ್ಣಿಸಿದ್ದಾನೆ, ನೋಡಿರಿ. ಸ್ವಚ್ಛದರ್ಪಣದಂತೆ ಪ್ರತಿಬಿಂಬವನ್ನು ಕಾಣಿಸುವ ನಿರ್ಮಲಗಂಗಾಜಲದಲ್ಲಿ, ಮೇಗಣಿಂದ ಬಂದು ನೆಲಸಿದ ಬಾಲಸೂರ್ಯಬಿಂಬದ ಪಡಿನೆಳಲೋ? ಇಲ್ಲವೆ, ಕೆಳಗಣಪಾತಾಳಲೋಕದತ್ತಣಿಂದ ಹೊರಸೂಸಿದ ವಾಸುಕಿಯ ಹೆಡೆವಣಿಯ ಮಂಗಳರಶ್ಮಿಯೋ ಇವೆರಡರಲ್ಲಿ ಆವುದಿರಬಹುದೆಂಬ ಸಂಶಯವನ್ನೂ ಚಿತ್ತಾಕರ್ಷಣವನ್ನೂ ಉಂಟುಮಾಡುತ್ತ ಸೂತನು ನೀರಲ್ಲಿ ಧುಮ್ಮಿಕ್ಕಿದಾಗ, ಅದು ಬಾಲದಿನೇಶಬಿಂಬದ ನೆಳಲೂ ಅಲ್ಲ, ಫಣೀಂದ್ರಾಲಯದಿಂದಮುರ್ಚಿದ ಫಣಾಮಣಿ ಮಂಗಳರಶ್ಮಿಯೂ ಅಲ್ಲ, ಅದು ತೇಜೋಮೂರ್ತಿಯಾದೊಂದು ಶಿಶು, ಹೀಗೆ ಹಠಾತ್ತಾಗಿ ಕಂಡುದರಿಂದ, ಅನಿರೀಕ್ಷಿತವಾಗಿ ನಿಧಿಯನ್ನು ಕಂಡವನ ಹಾಗೆ ಆತನು ಆ ಬಾಳನಂ ಆದಂ ಆದರದೆ ಕಂಡೊಸೆದನು.) ಪೂರ್ವಾರ್ಧದಲ್ಲಿ ಸಂದೇಹಾಲಂಕಾರವು;

ವ ॥ ಅಂತು ಕಂಡು ಮನಂಗೊಂಡೆತ್ತಿಕೊಂಡು ಮನೆಗೆ ತಂದು ರಾಧೆ-
ಯೆಂಬ ತನ್ನ ನಲ್ಲಳ ಸೋಂಕಿಲೊಳ್ ಕೂಸನಿಟ್ಟೊಡಾಕೆ ರಾಗಿಸಿ
ಸುತನಸೂತಕಮಂ ಕೊಂಡಾಡ-

*
ಅಗುಟ್ದಿರಲಾ ಕುಟಿಯೊಳ್ ತೊ- ।
ಟ್ಟನೆ ನಿಧಿಗಂಡಂತೆ ವಸುಧೆಗಸದಳಮಾಯ್ತು- ॥
ಮಗನಂದಮೆಂದು ಲೋಗರ್ ।
ಬಗೆದಿರೆ ವಸುಷೇಣನೆಂಬ ಪೆಸರಾಯ್ತಾಗಳ್ ॥ ೯ ॥

ಅಂತು ವಸುಷೇಣನಾಲೋ- ।
ಕಾಂತಂಬರಮಳವಿ ಬಳೆಯೆ ಬಳೆದೆಸಕಮುದೋ- ॥
ರಂತೆ ಜನಜನಿತಕರ್ಣೋ- ।
ಪಾಂತದೊಳೊಗೆದೆಸೆಯೆ ಕರ್ಣನೆಂಬನುಮಾದಂ ॥ ೧೦ ॥

---

'ಆ ಬಾಳನಂ ನಿಧಿಗಂಡನಂತೆವೋಲ್ ಆದಮಾದರದೆ ಕಂಡೊಸೆದಂ' — ಎಂಬಲ್ಲಿ ಉಪಮಾಲಂಕಾರವು ॥ ವೃತ್ತದ ಲಕ್ಷಣ- ಉತ್ಪಲಮಾಲೆಯಪ್ಪುದು ಭರಂನಭಭಂರಲಗಂ ನೆಗಟ್ದಿರಲ್ ॥ ೮ ॥

ಅಂತುಕಂಡು — ಇಂತೆಂಬು ವಚನಂ ॥ ಅಂತುಕಂಡು, ಮನಂಗೊಂಡು = ಪ್ರೀತಿದೋರಿ, ಎತ್ತಿಕೊಂಡು ಮನೆಗೆ ತಂದು; ರಾಧೆಯೆಂಬ ತನ್ನ ನಲ್ಲಳ = ರಾಧೆಯೆಂಬ ತನ್ನ ಮನೋವಲ್ಲಭೆಯು, ಸೋಂಕಿಲೊಳ್ = ತೊಡೆಯಲ್ಲಿ, ಕೂಸಂ ಇಟ್ಟೊಡೆ = ಮಗುವನ್ನು ಇರಿಸಿದಾಗ, ಆಕೆ = ಅವಳು, ರಾಗಿಸಿ – ಪ್ರೀತಿಯಿಂದ; ಸುತನ ಸೂತಕಮಂ ಕೊಂಡಾಡೆ = ಪುತ್ರೋತ್ಸವವಾಯಿತೆಂಬ ಸಡಗರದಿಂದಿರುತ್ತಿರಲು — ॥

ಅಗುಟ್ದಿರಲಾಕುಟಿಯೊಳ್ — ಇಂತೆಂದು ಕಂದಂ ॥ ಇದರಲ್ಲಿ ಮತ್ತು ಮುಂದಣ ಕಂದ ಪದ್ಯದಲ್ಲಿ ರಾಧೆಯು ಸಾಕಿದ ಆ ಮಗುವಿಗೆ ಕ್ರಮವಾಗಿ ವಸುಷೇಣ ಕರ್ಣ ಎಂಬ ನಾಮಧೇಯಗಳು ಹೇಗುಂಟಾದುವೆಂಬುದನ್ನು ಹೇಳುತ್ತಾನೆ ಅಗುಟ್ದಿರಲ್ ಆ ಕುಟಿಯೊಳ್ = ಗೆದಿದ್ದ ಆ ಹೊಂಡದಲ್ಲಿಯೇ (ಆಗುಟ್ದು–ಶಿಥಿಲದ್ವಿತ್ವವು) ತೊಟ್ಟಗೆ= ಧಟ್ಟನೆ (ತೊಟ್ಟಗೆ–ತೊಟ್ಟನೆ–ಇವೆರಡೂ ಸಮಾನಾರ್ಥಕಗಳು–ಶೀಘ್ರಾರ್ಥ ಬೋಧಕ ಅವ್ಯಯ, ನಕಾರಕ್ಕೆ ವಿಕಲ್ಪದಿಂಗಕಾರಂ), ನಿಧಿಗಂಡಂತೆ = ನಿಕ್ಷೇಪವನ್ನು ಕಂಡ ಹಾಗೆ, ಆ ಮಗನ ಅಂದಂ= ಆ ಮಗುವಿನ ಜನನದ ಕಾಲದಲ್ಲಿದ್ದ ರೀತಿಯು ವಸುಧೆಗೆ= ಲೋಕಕ್ಕೆಲ್ಲಾ, ಅಸದಳಂ ಆಯ್ತು= ಅಸದೃಶವೆನಿಸಿತು, ಎಂದು ಲೋಗರ್ ಬಗೆದಿರೆ= ಎಂದು ಸಮಸ್ತಜನರೂಯೋಚಿಸುತ್ತಿರಲು, ಆಗ ವಸುಷೇಣನೆಂಬ ಪೆಸರ್ ಆಯ್ತು ॥ ೯ ॥

ಅಂತು ವಸುಷೇಣ -- ಇಂತೆಂದು ಕಂದಂ ॥ ಅಂತು ವಸುಷೇಣಂ, ಆಲೋಕಾಂತಂಬರಂ= ಆ ಲೋಕಾಂತದ ವರೆಗೆ, ಸಮಸ್ತ ದಿಗಂತದ ವರೆಗೂ, (ಪ್ರಸಿದ್ಧವಾಗ

ವ ॥ ಆಗಿಯಾತಂ ಶಸ್ತ್ರಶಾಸ್ತ್ರವಿದ್ಯೆಯೊಳತಿಪರಿಣತನಾಗಿನವಯೌವನಾರಂಭದೊಳ್ —

ಪೊಡೆದುದು ಬಿಲ್ಲ ಜೇವೊಡೆಯೆ ಮಿಾಱುವ ವೈರಿನರೇಂದ್ರರಂ ಸಿಡಿ- ।
ಲ್ಪೊಡೆದವೊಲಟ್ಟಿಮುಟ್ಟಿ ಕಡಿದಿಕ್ಕಿದುದಾದೆಡರಂ ನಿರಂತರಂ ॥
ಕಡಿಕಡಿದಿತ್ತ ಪೊನ್ನೆ ಬುಧಮಾಗಧವಂದಿಜನಕ್ಕೆ ಕೊಟ್ಟ ಕೋ- ।
ಡೆಡರದೆ ಬೇಡಿವೋಡಿಮಿದು ಚಾಗದ ಬೀರದ ಮಾತು ಕರ್ಣನಾ ॥ ೧೧ ॥

---

ವಂತೆ) ಅಳವಿ = ಪರಾಕ್ರಮ, ಸಾಮರ್ಥ್ಯವು, ಬಳೆಯೆ = ವೃದ್ಧಿಯಾಗುತ್ತಿರಲು, ಒಳದ ಎಸಕಂ = ಶಕ್ತಿ, ಸಾಮರ್ಥ್ಯದ ಪ್ರಸಿದ್ಧಿಯು; ಅದು ಓರಂತೆ = ಅದೊಂದೇ ಸವನೆ, ಜನಂಗಳ ಕರ್ಣಾವಕಾಶಾಂತದೊಳ್ = ಜನರ ಕಿವಿಯ ಸವಿಾಪದಲ್ಲ, ಒಗೆದು ಎಸೆಯೆ = ಹುಟ್ಟಿ ಪಸರಿಸಿ ಶೋಭಿಸುತ್ತಿರಲು, ಕರ್ಣನೆಂಬನುಂ ಆದಂ = ಕರ್ಣನೆಂಬ ಹೆಸರಿನವನೂ ಆದನು. ಕರ್ಣನು ಬಾಲ್ಯದಲ್ಲಿಯೇ ತನ್ನ ಪರಾಕ್ರಮ ಪ್ರಭಾವವನ್ನು ಪ್ರಕಟಿಸಿದ ವೃತ್ತಾಂತವನ್ನು ಜನರು ಕರ್ಣಾಕರ್ಣಿಯಾಗಿ ಕೇಳಿ ವಿಸ್ಮಯಗೊಂಡುದರಿಂದ ಆತನಿಗೆ ಕರ್ಣನೆಂಬ ಅಭಿಧಾನವಾಯ್ತು ॥ ೧೦ ॥

ಆಗಿ — ಇಂತೆಂದು ವಚನಂ ॥ ಆಗಿ = ಹೀಗೆ ವಸುಷೇಣ ಮತ್ತು ಕರ್ಣ ಎಂಬ ಹೆಸರುಗಳನ್ನು ಪಡೆದವನಾಗಿ, ಆತಂ = ಆ ಬಾಲಕನು, ಶಸ್ತ್ರಶಾಸ್ತ್ರವಿದ್ಯೆಯೊಳ್ = ಶಸ್ತ್ರವಿದ್ಯೆ (ಧನುರ್ವಿದ್ಯೆ)ಯಲ್ಲಿಯೂ, ಶಾಸ್ತ್ರಾಭ್ಯಾಸದಲ್ಲಿಯೂ, ಅತಿ ಪರಿಣತನಾಗಿ = ಬಹು ನೈಪುಣ್ಯವನ್ನುಳ್ಳವನಾಗಿ, ನವಯೌವನಾರಂಭದೊಳ್ = ಹೊಸ ಜವ್ವನದ ಪ್ರಾಪ್ತಿಕಾಲದಲ್ಲಿ ॥

ಪೊಡೆದುದು — ಇಂತೆಂದು ಚಂ. ಮಾ. ವೃತ್ತಂ ॥ ಕರ್ಣನು ಪರಾಕ್ರಮದಲ್ಲಿ ಅದ್ವಿತೀಯನೂ, ತ್ಯಾಗದಲ್ಲಿ ಅಸಮಾನನೂ ಎನಿಸಿ ಲೋಕದಲ್ಲಿ ಪೊಗಟ್ತೆಯನ್ನೂ ನೆಗಟ್ತೆಯನ್ನೂ ಪಡೆದ ರೀತಿಯನ್ನು ಕವಿಯು ಈ ವೃತ್ತದಲ್ಲಿ ಬಹು ಚಮತ್ಕಾರವಾಗಿ ವರ್ಣಿಸುತ್ತಾನೆ ಹೇಗೆಂದರೆ–ಬಿಲ್ಲಜೇವೊಡೆಯೆ = ಧನುಷ್ಟಂಕಾರ ಮಾತ್ರವೇ (ಬಿಲ್ಲಿನ ಹಗ್ಗವನ್ನೆಳೆದುದರಿಂದುಂಟಾದ ಧ್ವನಿಯೊಂದೇ) ಮೀಱುವ = ಅತಿಕ್ರಮಿಸುವ, ವೈರಿನರೇಂದ್ರರಂ = ಶತ್ರುರಾಜರನ್ನು; ಸಿಡಿಲ್ಪೊಡೆದವೊಲ್ = (ಸಿಡಿಲ್ + ಪೊಡೆದವೊಲ್) ಸಿಡಿಲು ಬಡಿದ ಹಾಗೆ, ಅಟ್ಟಿಮುಟ್ಟಿ = ಓಡಿಸಿ ಮೇಲೆ ಬಿದ್ದು, ("ಅಱಿಯಟ್ಟಿಮುಟ್ಟಿ ಪಿಡಿತಂದು"–ಗದಾಯುದ್ಧಂ ೧।೧೯); ಪೊಡೆದುದು = ಹೊಡೆದು ಹಾಕಿತು ಬಿಲ್ಲನ್ನು ಜೇವೊಡೆದ ಮಾತ್ರದಿಂದಲೇ ಶತ್ರುರಾಜರು ನಿರ್ವೀರ್ಯರಾಗುತ್ತಿರುವಲ್ಲಿ, ಬಾಣಗಳ ಏಸಾಟಕ್ಕೆ ಮೆಯ್ಯೊಡ್ಡುವ ಹಗೆಗಳೇ ಇರಲಿಲ್ಲವೆಂದು ಬೇರೆ ಹೇಳಬೇಕೆ ? ಅನಾಯಾಸದಿಂದ ಶತ್ರುನಿಬರ್ಹಣವಾಯ್ತೆಂದು ತಾತ್ಪರ್ಯವು "ಕಾ ಕಥಾ ಬಾಣಸಂಧಾನೇ ಜ್ಯಾಶಬ್ದೇ

ನ್ನೈವ ದೂರ ! । ಶುಂಕಾರೇಣೇವ ಧನುಷಃ ಸಹಿ ವಿಘ್ನಾನಪೋಹತಿ”–ಕಾಳಿದಾಸನ ಅಭಿಜ್ಞಾನ ಶಾಕುಂತಲಂ–ತೃತೀಯಾಂಕ–ಶ್ಲೋಕ ೧ ) ಆದೆಡರಂ = (ಆದ+ಎಡರಂ) ಉಂಟಾದ ವಿಘ್ನಗಳನ್ನು (ಸಂಕಷ್ಟಗಳನ್ನು, ಬಡತನವನ್ನು ಎಂಬ ಅರ್ಥವೂ ಆಗುವುದು ) ನಿರಂತರಂ ಕಡಿಕಡಿದು = ಎಡೆಬಿಡದೆ ಕಡಿದುಹಾಕಿ (ನಿರ್ಮೂಲ ಮಾಡಿ) ಇತ್ತ ಪೊನ್ನೆ = ಕೊಟ್ಟಂತಹ ಸುವರ್ಣವೇ, ಬುಧವಾಗಧವಂದಿ ಜನಕ್ಕೆ = ವಿದ್ವಾಂಸರಿಗೂ ಹೊಗಳುಭಟ್ಟರಿಗೂ, ಸ್ತುತಿಪಾಠಕರಿಗೂ ಕೊಟ್ಟ ಕೊಡು = ಕೊಟ್ಟಂತಹ ದಾನವಾಗಿರಲು, ಅಂತಹ ತ್ಯಾಗವು. (ಅಥವಾ = ನಿರಂತರಂ ಕಡಿಕಡಿದು ಇತ್ತಪೊನ್ನೆ, ಬುಧವಾಗಧ ವಂದಿ ಜನಕ್ಕೆ ಕೊಟ್ಟಕೊಡು (ಆಗಿ) ಆದೆಡರಂ ಕಡಿದಿಕ್ಕಿದುದು' ಎಂದೂ ಅನ್ವಯಮಾಡಿ ಹೇಳಬಹುದು, ಆದುದರಿಂದ) ಆದಎಡರಂ = ಉಂಟಾದ ಬಡತನವನ್ನು ಕಡಿದಿಕ್ಕಿದುದು = ಕಡಿದು ಹಾಕಿತು ನಿರಂತರವೂ ಬುಧವಾಗಧವಂದಿ ಜನಕ್ಕೆ ಕಡಿಕಡಿದು ಕೊಟ್ಟ ಸುವರ್ಣವೇ ಆತನಕೊಟ್ಟ ದಾನವಾಗಿರಲು, ಅಂತಹ ಆ ದಾನವು ಆಶ್ರಿತಜನರ ಸಂಕಷ್ಟಗಳನ್ನೂ ದಾರಿದ್ರ್ಯವನ್ನೂ ಹೋಗಾಡಿಸಿತು ಕರ್ಣನ ಬಿಲ್ಲಜೇವೊಡೆಯ ಮೊಳಗುವ ವೈರಿ ನರೇಂದ್ರರಿಗೆ ಕೊಟ್ಟಕೊಡು (ಜಯ) ಮತ್ತು ಆತನು, ನಿರಂತರಂ ಕಡಿಕಡಿದಿತ್ತ ಪೊನ್ನೆ ಬುಧವಾಗಧವಂದಿಜನಕ್ಕೆ ಕೊಟ್ಟ ಕೊಡು (ದಾನ) ಆಗಿರಲು ಪ್ರಸಿದ್ಧಿಯನ್ನು ಪಡೆದನಾದುದರಿಂದಲೇ, “ಎಡರದೆ ಬೇಡಿಂ ಓಡಿಂ ಇದು ಕರ್ಣನಾಚಾಗದ ಬೀರದ ಮಾತು” ಎಡರದೆ ಬೇಡಿರಿ-ಇದು ಕರ್ಣನಾಚಾಗದ ಮಾತು, ಎಡರದೆ ಓಡಿಂ — ಇದು ಕರ್ಣನಾ ಬೀರದ ಮಾತು” ಎಂಬ ಪೊಗಟ್ಟೆಯೂ ನೆಗಟ್ಟೆಯೂ ಲೋಕದಲ್ಲಿ ಹರಡಿದುವು. ಎಡರದೆ = ಏನೂ ಅಡ್ಡಿಯಿಲ್ಲದೆ, ಬೇಡಿಂ = ಬೇಡಿರಿ ಇದು = ಇಂತೆಂಬುದು, ಕರ್ಣನ ಚಾಗದ ಮಾತು, ಎಡರದೆ = ಏನೂ ಅಡ್ಡಿ ತಂದೊಡ್ಡದೆ, ವಿಘ್ನಗಳನ್ನುಂಟುಮಾಡದೆ, ಓಡಿಂ = ಓಡಿಹೋಗಿರಿ, ಇದು = ಇಂತೆಂಬುದು ಕರ್ಣನ ಬೀರದ ಮಾತು) ಇದು ಕರ್ಣನ ಚಾಗದ ಮತ್ತು ಬೀರದ ಕುರಿತುಂಟಾದ ಪಡೆಮಾತು ಯಾರು ಬಂದು ಬೇಡಿದರೂ ಸರಿ, ಕರ್ಣನು ನಿರಾತಂಕವಾಗಿ ಬೇಡಿಕೊಳ್ಳಿರಿ, ಬೇಡಿದುದನ್ನೆಲ್ಲಾ ನಾನು ಕೊಡುವಂತಹನೇ” ಎಂದು ಬೇಡಿದವರಿಗೆ ದಯವನ್ನೂ ಯಾವ ಶತ್ರುಗಳು ಇದಿರೊಡ್ಡಿದರೂ ಸರಿ, ಅಂತಹರಿಗೆ ಆತನು “ಯಾವ ವಿಘ್ನಗಳನ್ನೂ ಉಂಟುಮಾಡದೆ ಓಡಿರಿ” ಎಂಬಂತೆ ಭಯವನ್ನೂ ಉಂಟುಮಾಡುತ್ತಿದ್ದನು ಎಂದು ಭಾವವು ‘ಎಡರದೆ ಬೇಡಿ ಮೋಡಿಮಿದು ಚಾಗದ ಬೀರದ ಮಾತು ಕರ್ಣನಾ’ ಈ ಯೊಂದು ಚಿಕ್ಕಮಾತಿನಲ್ಲಿ ಕರ್ಣನ ದಾನಶೂರತ್ವವನ್ನೂ ಪರಾಕ್ರಮವನ್ನೂ ಎಷ್ಟು ಚಮತ್ಕಾರವಾಗಿ ಷ್ಟು ಹೃದಯಂಗಮವಾಗಿ ಹೇಳಿರುವನು ನೋಡಿರಿ ಪಂಪನಂತಹ ಕವಿಶ್ರೇಷ್ಠರಿಗೇ ಇದು ಸಾಧ್ಯವು ಸಿಡಿಲ್ ವೊಡೆದವೊಲಟ್ಟಿ ಮುಟ್ಟಿಪೊಡೆದುದು” ಎಂಬಲ್ಲಿ ಉಪಮಾಲಂಕಾರವು. ವೃತ್ತದ ಪೂರ್ವಾರ್ಧದಲ್ಲಿ ಉತ್ಪ್ರೇಕ್ಷಾಲಂಕಾರವೂ ಇದೆ ಚಂಪಕಮಾಲಾವೃತ್ತವು ॥ ೧೧ ॥

ವ ॥ ಅಂತು ಭುವನಭವನಕ್ಕೆಲ್ಲಂ ನೆಗಟ್ಟ ಕರ್ಣನ ಪೊಗೞ್ತೆಯುಂ ನೆಗಟ್ತೆಯುಮನಿಂದ್ರಂ ಕೇಳ್ದು ಮುಂದೆ ತನ್ನಂಶದೊಳ್ ಪುಟ್ಟುವಜ್ರ್ಜುನಂಗಮಾತಂಗಂ ದ್ವಂದ್ವಯುದ್ಧಮುಂಟೆಂಬುದಂ ತನ್ನ ದಿವ್ಯಜ್ಞಾನದಿಂದಮಱಿದುವಿಂತಲ್ಲದೀತನನಾತಂ ಗೆಲಲ್ಬಾರದೆಂದು—

ಬೇಡಿದೊಡೆ ಬಲದ ಬರಿಯುಮ—।
ನೀಡಾಡುಗುಮುಗಿದು ಕರ್ಣನೆಂದಾಗಳೆ ಕೈ— ॥
ಗೂಡಿದ ವಟುವಾಕೃತಿಯೊಳೆ ।
ಬೇಡಿದನಾ ಸಹಜಕವಚಮಂ ಕುಂಡಳಮಂ ॥ ೧೨ ॥

---

ಅಂತು— ಇಂತೆಂದು ವಚನಂ ॥ ಅಂತು ಭುವನ ಭವನಕ್ಕೆಲ್ಲಂ= ಹಾಗೆ ಸಮಸ್ತ ಲೋಕಕ್ಕೂ (ಭುವನಭವನ—'ಲೋಕ ಮಂದಿರ' ಎಂದಷ್ಟೇ ನಿಷ್ಕೃಷ್ಟಶಬ್ದಾರ್ಥವಿದ್ದರೂ 'ಸಮಸ್ತಲೋಕ' ಎಂಬರ್ಥದಲ್ಲಿ ಪಂಪನು 'ಭುವನಭವನ' 'ಭೂಭುವನ' ಎಂದು ಹಲವೆಡೆ ಪ್ರಯೋಗಿಸಿದ್ದಾನೆ) ನೆಗಟ್ಟಕರ್ಣನ= ಪ್ರಸಿದ್ಧನಾದ ಕರ್ಣನ, ನೆಗಟ್ತೆಯುಂ ಪೊಗೞ್ತೆಯುಮಂ= ಖ್ಯಾತಿಯನ್ನೂ ಹೊಗಳಿಕೆಯನ್ನೂ('ಪೊಗೞ್ತೆಯುಂ' ಸಮುಚ್ಚಯದ 'ಉಂ'ಗೆ ಅಧ್ಯಾರೋಪವು), ಇಂದ್ರಂ ಕೇಳ್ದು ಮುಂದೆ ತನ್ನ ಅಂಶದೊಳ್ ಪುಟ್ಟುವ ಅಜ್ರ್ಜುನಂಗಂ= ಮುಂದೆ ತನ್ನಂಶದಿಂದ ಹುಟ್ಟುವಂತಹ ಅರ್ಜುನನಿಗೂ, ಆತಂಗಂ= ಆತನಿಗೂ (ಕರ್ಣನಿಗೂ), ದ್ವಂದ್ವಯುದ್ಧಂ ಉಂಟು ಎಂಬುದಂ ತನ್ನ ದಿವ್ಯಜ್ಞಾನದಿಂದಂ ಅಱಿದು= ದ್ವಂದ್ವಯುದ್ಧವಾಗುವುದುಂಟೆಂಬುದನ್ನು ತನ್ನ ದಿವ್ಯಜ್ಞಾನದಿಂದ ತಿಳಿದು, (ಮುಂದೆ ನಡೆಯುಲಿರುವ ಸಂಗತಿಗಳನ್ನು ದೇವತೆಗಳು ಮುಂಚಿತವಾಗಿ ತಿಳಿಯುವ ಜ್ಞಾನಶಕ್ತಿಯುಳ್ಳವರೆಂದು ಪ್ರಸಿದ್ಧಿ ಅಂತಹ ಶಕ್ತಿಯೇ ದಿವ್ಯಜ್ಞಾನವು;) ಇಂತಲ್ಲದೆ= ಈ ರೀತಿಯಲ್ಲಿ ಅಲ್ಲದೆ, ತಾನು ಯೋಚಿಸಿ ನಿರ್ಣಯಿಸುವೀತೆರನಾಗಿಯಲ್ಲದೆ, (ಅಱಿದು+ಇಂತಲ್ಲದೆ— ಇಲ್ಲಿ ವ್ಯಾಕರಣ ದೃಷ್ಟಿಯಿಂದ 'ಅಱಿದಿಂತಲ್ಲದೆ' ಎಂದು ಕನ್ನಡ ಲೋಪಸಂಧಿಯಾಗಬೇಕಿದ್ದಿತು. ಅಥವಾ ಅಱಿದುಂ+ಇಂತಲ್ಲದೆ 'ತಿಳಿದೂ ಹೀಗಲ್ಲದೆ' ಎಂದು ವಿಂಗಡಿಸಿ ಅರ್ಥಮಾಡಿ, 'ಅಱಿದುಮಿಂತಲ್ಲದೆ' ಎಂಬ ಸಂಧಿಯಲ್ಲಿ ಸಹಜಮಕಾರಕ್ಕೆ ವಕಾರಾದೇಶವನ್ನು ಹೇಳಬೇಕು. ಅಥವಾ 'ಅಱಿದು+ಇಂತಲ್ಲದೆ' ಎಂಬುದನ್ನೇ ಇಟ್ಟುಕೊಂಡು, ಕನ್ನಡ ವಕಾರಾಗಮ ಸಂಧಿಯು ವಿಕಲ್ಪವೆಂದು ಹೇಳಿ 'ಅಱಿದುವಿಂತಲ್ಲದೆ' ಎಂದು ಸಮರ್ಥಿಸಬಹುದು.) ಈತನಂ ಆತಂ ಈ ಕರ್ಣನನ್ನು ಆ ಅರ್ಜುನನು, ಗೆಲಲ್ ಬಾರದು ಎಂದು= ಜಯಿಸಲಸಾಧ್ಯವೆಂಬುದಾಗಿ ॥

ಬೇಡಿದೊಡೆ— ಇಂತೆಂದು ಕಂದಂ ॥ ಬೇಡಿದೊಡೆ= ಬೇಡಿದ್ದೇ ಆದರೆ ಕರ್ಣಂ ಬಲದ ಬರಿಯುಮಂ= ಕರ್ಣನು ತನ್ನ ಬಲಭಾಗದ ಪಕ್ಕೆಯೆಲುಬನ್ನೂ ಕೂಡ,

ಬೇಡಿದುದನರಿದುಕೊಳ್ಳೆನೆ ।
ಬೇಡಿದುದಂ ಮುಟ್ಟಲಾಗದೆನಗೆನೆ ನೆಗಟ್ದ- ॥
ಲ್ಲಾಡದೆ ಕೊಳ್ಳೆಂದರಿದೀ- ।
ಡಾಡಿದನಿಂದ್ರಂಗೆ ಕವಚಮಂ ರಾಧೇಯಂ ॥ ೧೩ ॥

---

ಉಗಿದು = ಸೀಳಿ, ಈಡಾಡುಗುಂ ಎಂದು = ಲಕ್ಷ್ಯವಿಲ್ಲದೆ ಕೊಟ್ಟುಬಿಡುವನೆಂಬುದನ್ನು ತಿಳಿದದ್ದು; ಆಗಳೆ ಕೈಗೂಡಿದ ವಟುವಾಕೃತಿಯೊಳೆ= ತತ್‌ಕ್ಷಣವೇ ತಾಳಿದ ವಟು ರೂಪದಲ್ಲಿ (ಕೂಡಲೇ ಬ್ರಹ್ಮಚಾರಿಯ ವೇಷದಲ್ಲಿ ಬಂದು ಎಂಬ ತಾತ್ಪರ್ಯವು 'ವಟು ವಾಕೃತಿ' ಎಂಬುದರ ಸ್ಥಾನದಲ್ಲಿ ವಟು+ಆಕೃತಿ 'ವಟ್ವಾಕೃತಿ' ಎಂದು ಸಂಸ್ಕೃತ ಗುಣ ಸಂಧಿಯನ್ನು ನಿರೀಕ್ಷಿಸಬೇಕಾಗಿದೆ; ಒಂದು ವೇಳೆ, ವಟುವ ಆಕೃತಿಯೆಂದು ವಿಂಗಡಿಸಿ 'ವಟುವ'—'ವಟುವಿನ' ಎಂದರ್ಥ ಹೇಳಬೇಕು ) ಆ ಸಹಜ ಕವಚಮುಂಕುಂಡಲ ಮಂ =ಹುಟ್ಟುವಾಗಲೇ ಬಂದಿದ್ದು ಪ್ರಸಿದ್ಧವಾದ ಆ ವಜ್ರಕವಚವನ್ನೂ ರತ್ನಕುಂಡಲ ವನ್ನೂ; ಬೇಡಿದಂ = ಯಾಚಿಸಿದನು. ಇಲ್ಲಿ ಈ ಕಥಾಸಂದರ್ಭದಲ್ಲಿ ಇಂದ್ರನು ಕರ್ಣನ ಕವಚಕುಂಡಲಗಳನ್ನು ಬೇಡಿದ ಪ್ರಸ್ತಾಪವು ಕುಮಾರವ್ಯಾಸಭಾರತದಲ್ಲಿ ಇಲ್ಲ— ಅದರಲ್ಲಿ ಶ್ರೀಕೃಷ್ಣನು ಕರ್ಣಾರ್ಜುನರ ಕಾಳಗದ ಮಧ್ಯದಲ್ಲಿ ವಿಪ್ರವೇಷದಿಂದ ಒಂದು ಬೇಡಿದನೆಂದು ಕಥೆಯಿದೆ.) ಇಲ್ಲಿ ಉದಾತ್ತಾಲಂಕಾರವು ॥ ೧೨ ॥

ಬೇಡಿದುದನರಿದು — ಇಂತೆಂದು ಕಂದಂ ॥ ಕರ್ಣನು ಇಂದ್ರನಿಗೆ ತನ್ನ ಸಹಜ ಕವಚವನ್ನು ಕತ್ತರಿಸಿಕೊಟ್ಟದನ್ನು ಕವಿಯು ಈ ಪದ್ಯದಲ್ಲಿ ವರ್ಣಿಸುತ್ತಾನೆ. ಕುಂಡಲ ಗಳನ್ನು ನಿರಾಯಾಸವಾಗಿಯೇ ಕೊಟ್ಟನೆಂದೂಹಿಸಿಕೊಳ್ಳಬೇಕು. ಬೇಡಿದುದಂ ಅರಿದು ಕೊಳ್ = ನೀನು ಬೇಡಿದಂತಹ ಈ ಕವಚವನ್ನು ಕತ್ತರಿಸಿಕೋ [ಅರಿ–(ಧಾತು) ಕತ್ತರಿಸು–ಕೃಂತನೇ–ಅಜ಼ಿ = ತಿಳಿ]; ಎನೆ= (ಎಂದು ಕರ್ಣನು) ಹೇಳಲು; ಬೇಡಿ ದುದಂ = ಬೇಡಿದ ವಸ್ತುವನ್ನು; ಎನಗೆ ಮುಟ್ಟಲಾಗದು ಎನೆ = ನಾನು ಮುಟ್ಟಕೂಡದು ಎಂದು ಹೇಳುವ ಹಾಗೆಯೇ; ರಾಧೇಯಂ= ಕರ್ಣನು (ರಾಧೆಯು ಸಾಕಿ–ಬಳೆಯಿಸಿದು ದರಿಂದ ಕರ್ಣನು 'ರಾಧೇಯ'ನೆನಿಸಿದನು), ನೆಗಟ್ದು = ಪ್ರಸಿದ್ಧವಾಗಿಯೆಂತಂತೆ; ಅಲ್ಲಾಡದೆ= ಒಂದಿಷ್ಟಾದರೂ ಅಲುಗಾಡದೆ (ಧೈರ್ಯಕೆಡದೆ); ಸ್ಥೈರ್ಯದಿಂದ; 'ಕೊಳ್' ಎಂದು =ಇಕೋ, ತೆಗೆದುಕೋ ಎಂದು ಹೇಳುತ್ತ; ಕವಚವಂ= ಶರೀರಕ್ಕೆ ಅಂಟಿ ಕೊಂಡಿದ್ದ ಕವಚವನ್ನು, ಅರಿದು = ಕತ್ತರಿಸಿ; ಈಡಾಡಿದಂ = ನಿರ್ಲಕ್ಷ್ಯವಾಗಿ ಕೊಟ್ಟು ಬಿಟ್ಟನು. ॥ ೧೩ ॥

ಎಂದುಂ ಪೋಗೆಂದನೆ ಮಾ- ।
ಣೆಂದನೆ ಪೆಱತೊಂದನೀವೆನೆಂದನೆ ನೊಂದಃ ॥
ಎಂದನೆ ಸೆರಗಿಲ್ಲದೆ ಪಿಡಿ ।
ಯೆಂದನಿದೇಂ ಕಲಿಯೊ ಚಾಗಿಯೋ ರವಿತನಯಂ ॥ ೧೪ ॥

ವ ॥ ಅಂತು ತನ್ನ ಸಹಜಕವಚಮಂ ನೆತ್ತರ್ ಪನಪನಪರಿಯೆ ತಿದಿಯುಗಿವಂತುಗಿದು ಕೊಟ್ಟೊಡಿಂದ್ರನಾತನ ಕಲಿತನಕ್ಕೆ ಮೆಚ್ಚಿ ಶಕ್ತಿಯನಿತ್ತಂ- ಅಂತಿಂದ್ರನಿತ್ತ ಶಕ್ತಿಯಂ ಕೆಯ್ಕೊಂಡು ನಿಜಭುಜಶಕ್ತಿಯಂ ಪ್ರಕಟಂ ಮಾಡಲೆಂದು ರೇಣುಕಾನಂದನನಲ್ಲಿಗೆ ಪೋಗಿ—

---

ಎಂದುಂ ಪೋಗೆಂದನೆ— ಇಂತೆಂದು ಕಂದಂ ॥ [ಈ ಪದ್ಯದಲ್ಲಿ ಕರ್ಣನ ಕಲಿತನದ ಮತ್ತು ಚಾಗದ ಪೆಂಪನ್ನು ಪಂಪನು ಬಲು ಅಂದವಾಗಿ ಹೇಳಿದ್ದಾನೆ. ಪಂಪನ ಅತ್ಯುತ್ತಮವಾದ ಕಂದಪದ್ಯಗಳಲ್ಲಿ ಇದೂ ಒಂದಾಗಿದೆ. 'ಇದೇಂ ಕಲಿಯೊ ಚಾಗಿಯೋ ರವಿತನಯಂ'— ಸೂರ್ಯಪುತ್ರನಾದ ಕರ್ಣನು ಅದೆಂತಹ ವೀರನೋ ಅದೆಂತಹ ದಾನಿಯೋ! ಎಂದು ಆಶ್ಚರ್ಯ ಪಡುವಷ್ಟು ಆತನು ದಾನಶೂರನಾಗಿದ್ದಾನೆಂದು ಭಾವವು] ಎಂದುಂ= ಎಂದಾದರೂ (ಯಾವಾಗಳಾದರೂ ಬೇಡಿದವರನ್ನು ಕುರಿತು) 'ಪೋಗು' ಎಂದನೆ= ಹೋಗು,'ಕೊಡುವುದಿಲ್ಲ, ನಡೆಯೆಂದು ಹೇಳಿದನೇ? (ಇಲ್ಲ); ಮಾಣ್ ಎಂದನೆ= ಬೇಡ, ತಡೆ, ಎಂದು ಹೇಳಿದನೇ? (ಇಲ್ಲ), ಪೆಱತುಒಂದಂ ಈವೆಂ ಎಂದನೆ = ಬೇರೆಯೊಂದು ವಸ್ತುವನ್ನು ಕೊಡುತ್ತೇನೆಂದು ಹೇಳಿದನೇ? (ಇಲ್ಲ); ನೊಂದು= ಮನಸ್ಸಿನಲ್ಲಿ ವ್ಯಥೆಪಟ್ಟು, ಅಃ ಎಂದನೆ= ಅಃ ಎಂದು ನಿಟ್ಟುಸಿರುಬಿಟ್ಟನೆ? (ಇಲ್ಲ); ('ಅಃ' ಎಂಬುದು ವ್ಯಥೆಯಂ ಥಟ್ಟನೆ ಸ್ಫುರಿಸುವ ಭಾವಮಂ ಪೇಟ್ವುದು. "ಪರಿವಿಡಿಯಿಂದಾಃ ಅಃ ಎಂಬೆರಡುಂ ವಿಸ್ಮಯವಿಡಂಬನ ವ್ಯಸನ ಸುಖಸ್ಫುರಿತಾರ್ಥದೊಳ್"— ಶ. ಮ. ದ. ಸೂ. ॥ ೩೧೦ ॥ 'ಅಃ ಎಂದನೆ'- ಇಲ್ಲಿ ಸಂಧಿಯಿಲ್ಲ. ಶ ಮ ದ. ಸೂ. ॥ ೫೭ ॥) ಸೆರಗಿಲ್ಲದೆ= ಭಯವಿಲ್ಲದೆ, 'ಪಿಡಿ' ಎಂದಂ= 'ಹಿಡಿ, ತೆಕ್ಕೋ' ಎಂದು ಹೇಳಿದನು. ಆದುದರಿಂದ, ರವಿತನಯಂ= ಕರ್ಣನು; ಇದೇಂ ಕಲಿಯೊ ಚಾಗಿಯೋ= ಅವನೆಂತಹ ಶೂರನೋ! ಅವನೆಂತಹ ತ್ಯಾಗಿಯೋ! ಹಿಂದೆ ಹೇಳಿದ್ದ 'ಎಡರದೆ ಬೇಡಿ ಪೋಡಿಮಿಡುಕ್ಕು ಚಾಗದ ಬೀರದ ಪೊಸತು ಕರ್ಣನಾ' ಎಂಬುದನ್ನು ಈ ಪದ್ಯವು ಚೆನ್ನಾಗಿ ಸಮರ್ಥಿಸುತ್ತದೆ. ಇಲ್ಲಿ ವಾಕ್ಯಾರ್ಥಹೇತುಕವಾದ ಕಾವ್ಯಲಿಂಗಾಲಂಕಾರವು ॥ ೧೪ ॥

ಅಂತು— ಇಂತೆಂದು ವಚನಂ ॥ ಅಂತು ತನ್ನ ಸಹಜಕವಚಮಂ; ನೆತ್ತರ್ ಪನಪನಪರಿಯೆ= ನೆತ್ತರು ಪನಪನ ಹರಿಯುತ್ತಿರಲು ('ಪನಪನ'- ಅನುಕರಣ ಶಬ್ದವು;) ತಿದಿಯುಗಿವಂತೆ= ಚರ್ಮದ ತಿದಿಯನ್ನು ಸುಲಿದುಕೊಳ್ಳುವ ಹಾಗೆ [ತಿದಿ- (ಸಂಸ್ಕೃತ) ದೃತಿ- ಚರ್ಮಪ್ರಸೇವಕ] ಉಗಿದು ಕೊಟ್ಟೊಡೆ= ಸೀಳಿ ಕೊಟ್ಟಾಗ

ಕೂರಿಸೆ ಗುರು ಶುಶ್ರೂಷೆಯೊ ।
ಳಾರಾಮನನುಗ್ರಪರಶುಪಾಟಿತರಿಪುವಂ- ॥
ಶಾರಾಮನನಿಷುವಿದ್ಯಾ- ।
ಪಾರಗನೆನಿಸಿದುದು ಬಲ್ಮೆ ವೈಕರ್ತನನಾ ॥ ೧೫ ॥

---

[ಉಗಿ-(ಧಾತು)-ಆಕರ್ಷಣೇ-ಸೀಳು]' ಇಂದ್ರಂ ಆತನ ಕಲಿತನಕ್ಕೆ ಮೆಚ್ಚಿ, ಶಕ್ತಿಯಂ ಇತ್ತಂ= ಶಕ್ತ್ಯಾಯುಧವನ್ನು ಕೊಟ್ಟನು. ಅಂತು ಇಂದ್ರಂ ಇತ್ತ ಶಕ್ತಿಯಂ, ಕೈಕೊಂಡು= ಸ್ವೀಕರಿಸಿ, ನಿಜಭುಜಶಕ್ತಿಯಂ= ತನ್ನ ಬಾಹುಬಲವನ್ನು, ತೋಳ್ಬಲವನ್ನು ಪ್ರಕಟಂ ಮಾಡಲೆಂದು= ಪ್ರಕಟಿಸುವ ಉದ್ದೇಶದಿಂದ,ರೇಣುಕಾನಂದನನಲ್ಲಿಗೆ ಪೋಗಿ= ರೇಣುಕಾದೇವಿಯ ಪುತ್ರನಾದ ಪರಶುರಾಮನಲ್ಲಿಗೆ ಹೋಗಿ, (ಜಮದಗ್ನಿ ಎಂಬ ಬ್ರಹ್ಮ ಋಷಿಗೆ ಪತ್ನಿಯಾದ ರೇಣುಕಾದೇವಿಯಲ್ಲಿ ಪರಶುರಾಮನು ಹುಟ್ಟಿದನು. ಆತನು ವಿಷ್ಣುವಿನ ದಶಾವತಾರಗಳಲ್ಲಿ ಆರನೆಯವನೆಂದು ಹಿಂದುಗಳು ನಂಬುತ್ತಾರೆ. ॥

ಕೂರಿಸೆ— ಇಂತೆಂದು ಕಂದಂ ॥ ಉಗ್ರಪರಶುಪಾಟಿತರಿಪುವಂಶಾರಾಮನಂ— (ಉಗ್ರ-ತೀಕ್ಷ್ಣವಾದ, ಪರಶು-ಕೊಡಲಿಯಿಂದ, ಪಾಟಿತ-ಕಡಹಲ್ಪಟ್ಟ, ರಿಪು-ಶತ್ರುಗಳೆಂಬ, ವಂಶಾರಾಮನಂ-ಬಿದಿರುಹಿಂಡಲುಳ್ಳಂತಹನನ್ನು) ಶತ್ರುಗಳೆಂಬ ಬಿದಿರಿನ ಹಿಂಡಲುಗಳನ್ನು ಹರಿತವಾದ ಕೊಡಲಿಯಿಂದ ಕಡಿದುಹಾಕಿದಂತಹನನ್ನು— ಇಲ್ಲಿ 'ಶತ್ರು'ಗಳೆಂದರೆ ಕ್ಷತ್ರಿಯ ರಾಜರು, ಆರಾಮನಂ=ಪ್ರಸಿದ್ಧನಾದ ಪರಶುರಾಮನನ್ನು ('ರಾಮನಂ'-'ರಾಮನಂ' ಎಂಬಲ್ಲಿ ಯಮಕ-ಶಬ್ದಾಲಂಕಾರವು) ಪುರಾಣ ಕಥೆಗಳಲ್ಲಿ 'ರಾಮ' ಎಂಬ ಹೆಸರಿನವರು ಅನೇಕರು ಇರುವರು. ಒಬ್ಬನು ದಶರಥ ಪುತ್ರನಾದ ಸೀತಾರಾಮನು. ಇನ್ನೊಬ್ಬನು ಜಮದಗ್ನಿ ಪುತ್ರನಾದ ಪರಶುರಾಮನು; ಮತ್ತೊಬ್ಬನು ವಸುದೇವ ಪುತ್ರನಾದ ಬಲರಾಮನು ಇಲ್ಲಿ ಪರಶುರಾಮನೆಂದು ಪ್ರತ್ಯೇಕಿಸಿ ಹೇಳುವುದಕ್ಕಾಗಿಯೇ 'ಆ ರಾಮನಂ' ಎಂಬುದಕ್ಕೆ 'ಉಗ್ರಪರಶುಪಾಟಿತ ರಿಪುವಂಶಾರಾಮನಂ' ಎಂಬ ವಿಶೇಷಣವನ್ನು ಹೇಳಿರುದು 'ವಂಶ' ಎಂಬುದಕ್ಕೆ 'ಕುಲ' 'ಬಿದಿರು' ಎಂದು ಅನೇಕಾರ್ಥ. ಆರಾಮ-ವಿಶ್ರಾಂತಿಸ್ಥಾನ, ಹಿಂಡಲು, ತೋಪು-ಎಂದು ಅನೇಕಾರ್ಥ-ವಂಶಾರಾಮ-ಬಿದಿರಹಿಂಡಲು), ಗುರುಶುಶ್ರೂಷೆಯೊಳ್=ಗುರುಸೇವೆಯಿಂದ ಕೂರಿಸೆ=ಮೆಚ್ಚಿಸಲು [ಕೂರಿಸು (ಧಾತು)-ಪ್ರೀತಿಯಾಗುವಂತೆ ಮಾಡು; ವೈಕರ್ತನನಾ=ಕರ್ಣನ ('ವಿಕರ್ತನ'ನೆಂದರೆ ಸೂರ್ಯನು; 'ವಿಕರ್ತನಾರ್ಕ ಮಾರ್ತಂಡ ಮಿಹಿರಾರುಣಪೂಷಣಃ' ಎಂದು ಅಮರವು. ವಿಕರ್ತನನ ಪುತ್ರನು ವೈಕರ್ತನನು. ವೈಕರ್ತನನಾ— ಷಷ್ಠಿಯಲ್ಲಿ ದೀರ್ಘಾದೇಶವು); ಬಲ್ಮೆ=ಶಕ್ತಿ; ಸಾಮರ್ಥ್ಯವು; ಇಷುವಿದ್ಯಾಪಾರಗಂ ಎನಿಸಿದುದು=ಅಸ್ತ್ರವಿದ್ಯೆಯಲ್ಲಿ ಪಾರಂಗತನೆನಿಸಿತು. (ಕರ್ಣನು ಪರಶುರಾಮನೊಡನೆ ತಾನು ಬ್ರಾಹ್ಮಣನೆಂದು ಸುಳ್ಳು ಹೇಳಿ ಶಿಷ್ಯವೃತ್ತಿಯನ್ನು ಕೈಕೊಂಡು ಗುರು ಶುಶ್ರೂಷೆಯಿಂದಾತನನ್ನೊಲಿಸಿಕೊಂಡು ಪಡೆದ ಅಸ್ತ್ರವಿದ್ಯೆಯಲ್ಲಿ ಸ್ವಸಾಮರ್ಥ್ಯದಿಂದ ಅತೀವ ನಿಪುಣನೆನಿಸಿಕೊಂ

ವ ॥ ಅಂತು ಧನುರ್ಧರಾಗ್ರಗಣ್ಯನಾಗಿರ್ದೊಂದುದಿವಸಂ ತನ್ನ ತೊಡೆಯ ಮೇಲೆ ತಲೆಯನಿಟ್ಟು ಪರಶುರಾಮಂ ಮಱಿದೊಱಗಿದಾಪ್ರಸ್ತಾವ ದೊಳಾ ಮುನಿಗೆ ಮುನಿಸಂ ಮಾಡಲೆಂದಿಂದ್ರನುಪಾಯದೊಳಟ್ಟಿದ ವಜ್ರಕೀಟಂಗಳ್ ಕರ್ಣನೆರಡುಂ ತೊಡೆಯುಮನುಳಿಯನೂಱಿ ಕೊಡಂತಿಯೊಳ್ ಬೆಟ್ಟಿದಂತತ್ತಮಿತ್ತಮುರ್ಚಿಪೋಗೆಯುಮದನಱಿ ಯದಂತೆ ಗುರುಗೆ ನಿದ್ರಾಭಿಘಾತಮಕ್ಕುಮೆಂದು ತಲೆಯನುಗುರಿಸು-ತ್ತುಮಿರೆಯಿರೆ—

---

ಡನು. ಗುರು ಶುಶ್ರೂಷೆಯಿಂದಲೂ, ಪುಷ್ಕಲಧನಸಮರ್ಪಣದಿಂದಲೂ, ವಿದ್ಯೆಯನ್ನು ವಿನಿಮಯವಾಗಿ ಕೊಡುವುದರಿಂದಲೂ—ಹೀಗೆ ಮೂರು ವಿಧಗಳಿಂದ ವಿದ್ಯಾರ್ಜನೆ ಮಾಡುವ ಸಂಪ್ರದಾಯವು ಪೂರ್ವಕಾಲದಲ್ಲಿತ್ತು. 'ಗುರುಶುಶ್ರೂಷಯಾ ವಿದ್ಯಾ ಪುಷ್ಕಲೇನ ಧನೇನವಾ । ಅಥವಾ ವಿದ್ಯಯಾ ವಿದ್ಯಾ ಚತುರ್ಥೀನೋಪಲಭ್ಯತೇ' ॥ (ಸುಭಾಷಿತ ಶ್ಲೋಕವು) ॥ ೧೪ ॥

ಅಂತು—ಇಂತೆಂದು ವಚನಂ ॥ ಅಂತು, ಧನುರ್ಧರಾಗ್ರಗಣ್ಯಂ ಆಗಿರ್ದು= ಧನುರ್ಧರರಲ್ಲಿ ಬಿಲ್ಗಾರರಾದ ವೀರರಲ್ಲಿ, ಅಗ್ರಗಣ್ಯನಾಗಿರ್ದು-ಮೊದಲನೆಯವನೆನಿಸಿದ್ದು, ಒಂದು ದಿವಸಂ ಪರಶುರಾಮಂ ತನ್ನ ತೊಡೆಯ ಮೇಲೆ ತಲೆಯನಿಟ್ಟು ಮಱಿದೊಱಗಿದಾ ಪ್ರಸ್ತಾವದೊಳ್= ಒಂದಾನೊಂದು ದಿವಸ ಪರಶುರಾಮನು ತನ್ನ ತೊಡೆಯ ಮೇಲೆ ತಲೆಯನ್ನಿಟ್ಟು ನಿದ್ರಿಸುತ್ತಿದ್ದಾ ಸಮಯದಲ್ಲಿ, ಆ ಮುನಿಗೆ= ಪರಶುರಾಮನೆಂಬ ಆ ಮುನಿಗೆ, ಮುನಿಸಂ ಮಾಡಲೆಂದು= ಕೋಪವನ್ನುಂಟುಮಾಡಬೇಕೆಂದು; ಇಂದ್ರಂ ಉಪಾಯದೊಳ್ ಅಟ್ಟಿದ= ದೇವೇಂದ್ರನು ಕುಹಕೋಪಾಯದಿಂದ ಕಳುಹಿಸಿದ, ವಜ್ರಕೀಟಂಗಳ್= ವಜ್ರಕೀಟಗಳು (ವಜ್ರಕೀಟ= ವಜ್ರತುಂಬಿ, ಜೀರುಂಡೆ, ಕೊರುವಾಯಿ; ಕರ್ಣನ ಎರಡುಂ ತೊಡೆಯುಮಂ= ಕರ್ಣನ ಎರಡೂ ತೊಡೆಗಳನ್ನು ಉಳಿಯನೂಱಿ ಕೊಡಂತಿಯೊಳ್ ಬೆಟ್ಟಿದಂತೆ= ಉಳಿಯನ್ನೂರಿ ಕೊಡತಿಯಿಂದ ಹೊಡೆದ ಹಾಗೆ [ಬೆಟ್ಟು (ಧಾತು)-ಗಾಢಪ್ರವೇಶೇ-ಚೆನ್ನಾಗಿ ಊರುವಂತೆ ಹೊಡೆ; ಅತ್ತಂ ಇತ್ತಂ ಉರ್ಚಿಪೋಗೆಯುಂ= ಅತ್ತಿತ್ತ ಎಳೆದು ಗಾಯಪಡಿಸಿ ಹೋದರೂ, ಅದಂ ಅಱಿಯದಂತೆ= ಅದನ್ನು ತಿಳಿಯದ ಹಾಗೆ, ಗುರುಗೆ= ಗುರುವಾದ ಪರಶುರಾಮ ಮುನಿಗೆ, ನಿದ್ರಾಭಿಘಾತಂ= ನಿದ್ರಾ+ಅಭಿಘಾತಂ) ನಿದ್ರಾಭಂಗವು; ಅಕ್ಕುಂ ಎಂದು= ಆಗುವುದೆಂದು, ತಲೆಯಂ ಉಗುರಿಸುತ್ತುಂ ಇರೆಯಿರೆ= ತನ್ನ ತಲೆಯನ್ನು **ಉಗುರಿನಿಂದ ಕೆರೆದುಕೊಳ್ಳುತ್ತಾ ಇರಲು** ॥

ಅತಿವಿಶದವಿಶಾಲೋರು- ।
ಕ್ಷತದಿಂದೊಱಿದಸಿತು ಜಡೆಯುಮಂ ನಾಂದಿ ಮನಃ ॥
ಕ್ಷತದೊಡನೆಚ್ಚಿರಿಸಿದುದು- ।
ತ್ಥಿತಮಾವಂದಸ್ರಮಿಶ್ರಗಂಧಂ ಮುನಿಯಂ ॥ ೧೬ ॥

ವ ॥ ಅಂತೆಚ್ಚಿತ್ತು ನೆತ್ತರ ಪೊನಲೊಳ್ ನಾಂದು ನನೆದ ಮೆಯ್ಯುಮಂ ತೊಯ್ದು ತಳ್ಪೊಯ್ದ ಜಡೆಯುಮಂ ಕಂಡೀ ಧೈರ್ಯಂ ಕ್ಷತ್ರಿಯಂಗಲ್ಲದಾಗದು ಪಾರ್ವನಂದೆನ್ನೊಳ್ ಪುಸಿದು ವಿದ್ದೆಯಂ ಕೈಕೊಂಡುದರ್ಕೆ ದಂಡಂ ಪೆಱತಿಲ್ಲ. ನಿನಗಾನಿತ್ತ ಬ್ರಹ್ಮಾಸ್ತ್ರಮೆಂಬ ದಿವ್ಯಾಸ್ತ್ರಮವಸಾನಕಾಲದೊಳ್ ಬೆಸಕೆಯ್ಯದಿರ್ಕೆಂದು ಶಾಪಮನಿತ್ತನಂತು ಕರ್ಣನುಂ ಶಾಪಹತನಾಗಿ ಮಗುೞ್ದು ಬಂದು ಸೂತನ ಮನೆಯೊಳಿರ್ದಂ ॥

---

ಅತಿವಿಶದ — ಇತೆಂದು ಕಂದಂ ಅತಿವಿಶದವಿಶಾಲೋರುಕ್ಷತದಿಂದೆ = (ಅತಿವಿಶದ - ಅತ್ಯಂತ ಸ್ಪಷ್ಟವೂ, ವಿಶಾಲ - ವಿಸ್ತೃತವೂ, ಆದ, ಉರುಕ್ಷತದಿಂದೆ-ದೊಡ್ಡ ಗಾಯದಿಂದ) ಬಹಳ ಆಳವೂ ಅಗಲವೂ ಆಗಿದ್ದ ದೊಡ್ಡ ಗಾಯದಿಂದ, ಒಱಿದು = ಹರಿದು, ಸ್ರವಿಸಿ, [ಒಱಿ (ಧಾತು)–ಸ್ರವಣೇ. ಒರೆ (ಧಾತು)–ಕರ್ಷಣೇ] ಅಸಿತು ಜಡೆಯುಮಂ = ಜಡೆಯುಷ್ಟನ್ನೂ (ಮುನಿಯ ಜಡೆಯೆಲ್ಲವನ್ನೂ) [ಜಡೆ–(ಸಂ) ಜಟಾ], ನಾಂದಿ = ಒದ್ದೆಯಾಗಿಸಿ [ನಾಂದು (ಧಾತು)–ದ್ರವೀಕರಣೇ] ಉತ್ಥಿತಂ = ಹೊರಸೂಸಿ, ಆವಂದ = ಆ ಬಂದ (ಹಾಗೆ ಬಂದಂತಹ), ('ಆವಂದ'–'ಆ ಸಂದರ್ಭದಲ್ಲಿ' ಎಂಬುದಾಗಿಯೂ ಹೇಳಬಹುದು) ಅಸ್ರಮಿಶ್ರಗಂಧಂ = ನೆತ್ತರಿಂದ ಕೂಡಿದ ವಾಸನೆಯು, ಮನಃಕ್ಷತದೊಡನೆ = ಮನೋವ್ಯಥೆಯನ್ನುಂಟುಮಾಡುವುದರೊಂದಿಗೆ (ಮನಸ್ಸಿಗೆ ವ್ಯಥೆಯನ್ನುಂಟುಮಾಡಿ), ಮುನಿಯಂ ಎಚ್ಚಿರಿಸಿದುದು = ಮುನಿಯನ್ನು ಎಚ್ಚರಗೊಳಿಸಿತು. (ರಕ್ತ ಸಮ್ಮಿಶ್ರಿತವಾದ ಸೊಗಡುವಾಸನೆಯಿಂದಾಗಿ ಪರಶುರಾಮುನಿಗೆ ಎಚ್ಚರವಾಗುವುದರೊಂದಿಗೆ ಮನಃಕ್ಷತವೂ ಉಂಟಾಯ್ತೆಂದು ತಾತ್ಪರ್ಯವು-ಸಹೋಕ್ತ್ಯಲಂಕಾರವು. ॥೧೬॥

ಅಂತೆಚ್ಚಿತ್ತು — ಇತೆಂದು ವಚನಂ ॥ ಅಂತು ಎಚ್ಚಿತ್ತು = ಹಾಗೆ ಎಚ್ಚರಗೊಂಡು, ನೆತ್ತರ ಪೊನಲೊಳ್ = ನೆತ್ತರಿನ ಪ್ರವಾಹದಲ್ಲಿ, ನಾಂದು ನನೆದ = ಹಸೆಯಾಗಿ ಒದ್ದೆಯಾದ (ಚೆನ್ನಾಗಿ ಒದ್ದೆಯಾದ) [ನಾನ್ (ಧಾತು)–ಆರ್ದ್ರಭಾವೇ. ನನೆ (ಧಾತು)–ಆರ್ದ್ರಭಾವೇ 'ನಾಂದುನನೆದ' ಎಂಬುದು ಒಂದೇ ಅರ್ಥದ ಜವಳಿನುಡಿ. ಸ್ಪಷ್ಟಾರ್ಥದಲ್ಲಿ ಪ್ರಯೋಗಿಸಲ್ಪಟ್ಟಿದೆಂದು ತಿಳಿಯಬೇಕು. ಆದುದರಿಂದ 'ಚೆನ್ನಾಗಿ ಒದ್ದೆಯಾದ' ಎಂಬರ್ಥವನ್ನು ಹೇಳಿದುದು], ಮೆಯ್ಯುಮಂ = ಮೆಯ್ಯನ್ನೂ, ತೊಯ್ದು ತಳ್ಪೊಯ್ದ = ಒದ್ದೆಯಾಗಿ ಮುದ್ದೆಗಟ್ಟಿದ [ತೊಯ್ (ಧಾತು)–ಸಾರ್ದ್ರತ್ವೇ; ತಳ್

ಪೊಯ್ (ಧಾತು)–ಪ್ರತಿಹತೇ]; ಜಡೆಯುಮಂ= ಜಡೆಯನ್ನೂ; ಕಂಡು; ಈ ಧೈರ್ಯಂ ಕ್ಷತ್ರಿಯಂಗಲ್ಲದೆ ಆಗದು= ಇಂತಹ ಧೈರ್ಯವು ಕ್ಷತ್ರಿಯನಿಗಲ್ಲದೆ ಬೇರೊಬ್ಬನಿಗೆ ಇರಲಿಕ್ಕಿಲ್ಲ; ಪಾರ್ವಂ ಎಂದು =(ತಾನು) ಬ್ರಾಹ್ಮಣನೆಂಬುದಾಗಿ: ಎನ್ನೊಳ್ ಪುಸಿದು = ನನ್ನಲ್ಲಿ ಸುಳ್ಳಾಡಿ, [ಪುಸಿ (ಧಾತು)–ಸುಳ್ಳು ಹೇಳು,] ಕರ್ಣನು ತಾನು ಬ್ರಾಹ್ಮಣನೆಂದು ಸುಳ್ಳುಹೇಳಿ ಪರಶುರಾಮನಿಂದ ಅಸ್ತ್ರವಿದ್ಯೆಯನ್ನು ಪಡೆದನು. ಪರಶುರಾಮನು ಬ್ರಾಹ್ಮಣರಲ್ಲದವರಿಗೆ ಮಂತ್ರಾಸ್ತ್ರವಿದ್ಯೆಯನ್ನು ಉಪದೇಶಿಸುತ್ತಿದ್ದಿಲ್ಲವಾದುದರಿಂದ, ಕರ್ಣನು ಹಾಗೆ ಮಾಡಬೇಕಾಯ್ತು, ಅದಕ್ಕೆ ತಕ್ಕ ಶಾಪರೂಪವಾದ ಫಲವನ್ನೂ ಅನುಭವಿಸಬೇಕಾಯ್ತು. ವಿದ್ದೆಯಂ ಕೈಕೊಂಡುದರ್ಕೆ= ವಿದ್ಯೆಯನ್ನು ಪಡೆದ ತಪ್ಪಿತಕ್ಕೆ [ವಿದ್ದೆ–(ಸಂಸ್ಕೃತ) ವಿದ್ಯೆ ಈಗ 'ಬಿಜ್ಜೆ' ಎಂಬ ರೂಪವೇ ರೂಢವಾದ 'ತದ್ಭವ' ವಾಗಿದೆ] ದಂಡಂ ಪೆಱತು ಇಲ್ಲ= ದಂಡನೆ ಬೇರೊಂದಿಲ್ಲ, ನಿನಗೆ ಆನ್ ಇತ್ತ =ನಿನಗೆ ನಾನು ಕೊಟ್ಟ, ಬ್ರಹ್ಮಾಸ್ತ್ರಂ ಎಂಬ ದಿವ್ಯಾಸ್ತ್ರಂ =ಬ್ರಹ್ಮಾಸ್ತ್ರವೆಂಬ ಉತ್ತಮವಾದ ಮಂತ್ರಾಸ್ತ್ರವು, ಅವಸಾನ ಕಾಲದೊಳ್ – ನಿನ್ನ ಕೊನೆಗಾಲದಲ್ಲಿ, ಬೆಸಕೆಯ್ಯದೆ ಇರ್ಕೆ ಎಂದು = ನಿನ್ನ ಆಜ್ಞೆಯಂತೆ ನಡೆಯದಿರಲಿ. ಎಂಬುದಾಗಿ [ಬೆಸಕೆಯ್ (ಧಾತು)-ಆಜ್ಞೆಯಂತೆ ನಡೆದುಕೊಳ್ಳು], ಶಾಪಮಂ ಇತ್ತಂ= ಶಾಪವನ್ನು ಕೊಟ್ಟನು ಅಂತು ಕರ್ಣನುಂ; ಕರ್ಣನಾದರೂ ಹಾಗೆ, ಶಾಪಹತನಾಗಿ= ಶಾಪದಿಂದ ಹೊಡೆಯಲ್ಪಟ್ಟವನಾಗಿ; ಶಾಪಗೊಂಡು ಸತ್ತ್ವಹೀನನಾಗಿ; ಮಗುಟ್ದು ಬಂದು = ಹಿಂತಿರುಗಿ ಬಂದು ಸೂತನ ಮನೆಯೊಳ್ ಇರ್ದಂ= ಸೂತನ ಮನೆಯಲ್ಲಿ ಇದ್ದನು.

ಎಂಬಲ್ಲಿಗೆ ಕರ್ಣರಸಾಯನದ ಪ್ರಥಮಗ್ರಾಸವು
ಮುಗಿದುದು.



## ದ್ವಿತೀಯಗ್ರಾಸಂ

ವ ॥ ದ್ರೋಣಾಚಾರ್ಯನಾಚಾರ್ಯಪದವಿಯಂ ಕೈಕೊಂಡು ಪಾಂಡವ ಕೌರವರ್ಗ್ಗೆ ಚತುರಂಗಧನುರ್ವೇದಮುಮಂ ದಿವ್ಯಾಸ್ತ್ರಂಗಳುಮಂ ಶಕ್ತಿತೋಮರಮುಸಲಮುಸುಂಡಿಭಿಂಡಿವಾಳಮುದ್ಗರಗದಾದಿ ವಿವಿಧಾಯುಧಂಗಳುಮಂ ಗಜರಥತುರಗಪದಾತಿಯುದ್ಧಂಗಳುಮನುಪದೇಶಂಗೆಯ್ಯುತ್ತುಮಿರೆಯಿರೆ—

---

ಅವತರಣಿಕೆ —ದ್ರೋಣನು ಆಚಾರ್ಯನಾಗಿ ಪಾಂಡವ ಕೌರವರಿಗೆ ಧನುರ್ವೇದವನ್ನು ಕಲಿಸುತ್ತಿದ್ದಾಗ ಕರ್ಣನು ಬಂದು ಆತನಲ್ಲಿ ಬಿಲ್ಗಲ್ತು ಅರ್ಜುನನೊಡನೆ ಮತ್ಸರಿಸಿದುದು, ವ್ಯಾಯಾಮರಂಗದಲ್ಲಿ ಕರ್ಣಾರ್ಜುನರ ಮಾತ್ಸರ್ಯ ಪ್ರಕಟಣೆ, ಮತ್ತು ಕರ್ಣನಿಗೆ ದುರ್ಯೋಧನನು ಅಂಗರಾಜ್ಯಾಧಿಪತ್ಯವನ್ನು ಕೊಟ್ಟುದು—ಈ ಸಂಗತಿಗಳು ಈ ದ್ವಿತೀಯಗ್ರಾಸದಲ್ಲಿ ಬಂದಿವೆ. ಇಲ್ಲಿ ಕರ್ಣನ ಅಳವು ಮತ್ತು ಕರ್ಣನಪಿಜು (ಅಭ್ಯುದಯವು) ವಿಶೇಷವಾಗಿ ವರ್ಣಿತವಾಗಿವೆ.

ದ್ರೋಣಾಚಾರ್ಯಂ—ಇಂತೆಂದು ವಚನಂ ॥ ದ್ರೋಣಾಚಾರ್ಯಂ ಆಚಾರ್ಯಪದವಿಯಂ ಕೆಯ್ಕೊಂಡು= ದ್ರೋಣಾಚಾರ್ಯನು (ಭೀಷ್ಮನ ಅಪೇಕ್ಷೆಯಂತೆ ಪಾಂಡವ ಕೌರವರಿಗೆ) ಉಪಾಧ್ಯಾಯನ ಸ್ಥಾನವನ್ನು ಸ್ವೀಕರಿಸಿ, (ಆಚಾರ್ಯನ ಲಕ್ಷಣವನ್ನು ಮನುಸ್ಮೃತಿಯಲ್ಲಿ ಹೀಗೆ ಹೇಳಿದೆ—'ಉಪನೀಯ ತು ಯಃ ಶಿಷ್ಯಂ ವೇದಮಧ್ಯಾಪಯೇ ದ್ವಿಜಃ । ಸಾಂಗಂ ಚ ಸರಹಸ್ಯಂ ಚ ತಮಾಚಾರ್ಯಂ ಪ್ರಚಕ್ಷತೇ'. ಶಿಷ್ಯನಿಗೆ ಉಪನಯನವನ್ನು ಮಾಡಿ ಆತನಿಗೆ ವೇದವನ್ನು ಸಾಂಗವಾಗಿ ಅಧ್ಯಯನ ಮಾಡಿಸುವ ದ್ವಿಜನನ್ನು ಆಚಾರ್ಯನೆಂದೆನ್ನುವರು) ಪಾಂಡವ ಕೌರವರ್ಗೆ = ಪಾಂಡವರಿಗೂ ಕೌರವರಿಗೂ, (ಪಾಂಡವ ಕೌರವರೆಲ್ಲರೂ ಕುರುವಂಶ ಸಂಭೂತರೇ ಆಗಿದ್ದರೂ ಪಾಂಡು ಪುತ್ರರಾದ ಯುಧಿಷ್ಠಿರಾದ್ಯರನ್ನು ಪಾಂಡವರೆಂದೂ, ಧೃತರಾಷ್ಟ್ರ ಸುತರಾದ ದುರ್ಯೋಧನಾದ್ಯರನ್ನು ಕೌರವರೆಂದೂ, ಅವರಲ್ಲಿ ದುರ್ಯೋಧನನನ್ನೇ ಪ್ರಸಿದ್ಧವಾಗಿ ಕೌರವನೆನ್ನುವುದೂ ರೂಢಿ ) ಚತುರಂಗ ಧನುರ್ವೇದಮುಮಂ= ಗಜಕಲ್ಪ, ಅಶ್ವಹೃದಯ, ರಥಕಲ್ಪ ಶಸ್ತ್ರಾಸ್ತ್ರ ಪ್ರಯೋಗ ಎಂಬ ನಾಲ್ಕು ಅಂಗಗಳುಳ್ಳ ಶಸ್ತ್ರವಿದ್ಯೆಯನ್ನೂ (ಶಸ್ತ್ರ ವಿದ್ಯೆಯು ನಾಲ್ಕು ತೆರನಾಗಿದೆಯೆಂದು ನಾಗವರ್ಮನ ಅಭಿಧಾನ ರತ್ನಮಾಲಾಟೀಕೆಯಲ್ಲಿ ಹೀಗೆ ಹೇಳಿದೆ— "ಆಕೆಯುದ್ಧ ಮುಕ್ತಾಮುಕ್ತಂ ಅಮುಕ್ತಂ ಕರಮುಕ್ತಂ ಯಂತ್ರಮುಕ್ತಮೆಂದು ನಾಲ್ಕು ತೆಱನಕ್ಕುಂ. ಬಿಟ್ಟೇಱು ಮೊದಲಾದುದು ಕೆಯ್ಯಿಂ ಬಿಡಲ್ಪಡುವುದು ಕರಮುಕ್ತಮೆಂಬುದು; ಸುರಿಗೆ ಮೊದಲಾದುದು ಕೆಯ್ಯಿಂಬಿಡಲ್ಪಾರದುದು ಅಮುಕ್ತಮೆಂಬುದು;

ಯಾದವವಂಶಜರುಂ ನಾ- ।
ನಾದೇಶನರೇಂದ್ರರುಂ ಘಟೋದ್ಭವನ ಧನು- ॥
ರ್ವೇದಮನೆ ಕಲಲ್ ಒಂದಾ- ।
ಳಾದರ್ ವಿದ್ಯಾಪ್ರಭಾವಮಾದೊರೆತೆ ವಲಂ ॥ ೧ ॥

---

ಇಟ್ಟಿ ಮೊದಲಾದುದು ಮುಕ್ತವೆಂಬುದು, ಅಂಬು ಮೊದಲಾದುದು ಯಂತ್ರ ಮುಕ್ತವೆಂಬುದು."—ಇದೇ ಚತುರಂಗ ಧನುರ್ವೇದವಾಗಿರಬಹುದು) ದಿವ್ಯಾಸ್ತ್ರಂಗಳುಮಂ= ಉತ್ತಮ ಮಂತ್ರಾಸ್ತ್ರ ಪ್ರಯೋಗಗಳನ್ನೂ; ಶಕ್ತಿ-ತೋಮರ-ಮುಸಲ-ಮುಸುಂಡಿ- ಭಿಂಡಿವಾಳ- ಮುದ್ಗರ- ಗದಾದಿ ವಿವಿಧಾಯುಧಂಗಳುಮಂ= ಶಕ್ತಿ ತೋಮರ .......ಗದೆ. ಮುಂತಾದ ಕೆಲವು ಕೆಯ್ದುಗಳ ಅಭ್ಯಾಸವನ್ನೂ (ಶಕ್ತಿ, ತೋಮರ, ಮುಸಲ, ಮುಸುಂಡಿ, ಭಿಂಡಿವಾಳ, ಮುದ್ಗರ, ಗದೆ—ಇವು ಬೇರೆ ಬೇರೆ ಆಯುಧಗಳ ಹೆಸರುಗಳು. ತೋಮರ= ಕೊಡತಿಯಂತಿರುವ ಕೆಯ್ದು; ಚಾವಳಿ?; ಮುಸಲ= ಒನಕೆಯಂತಿರುವ ಆಯುಧವು, ಭಿಂಡಿವಾಳ= ಭಿಂಡಿಪಾಲ= 'ಅಶ್ಮಪ್ರಕ್ಷೇಪ ಸಾಧನಂ' ಕಲ್ಲೊಡೆಯುವ ಮುಟ್ಟಿಯಂತಿರುವ ಆಯುಧವು. ಮುದ್ಗರ=ಡಂಗೆ,) ಗಜ ರಥ ತುರಗ ಪದಾತಿ ಯುದ್ಧಂಗಳುಮಂ= ಆನೆ- ತೇರು- ಕುದುರೆ- ಕಾಲಾಳುಗಳೊಡನೆ ಕಾದುವ ತೆರನನ್ನೂ, ಉಪದೇಶಂಗೆಯ್ಯುತ್ತುಂ ಇರೆಯಿರೆ= ಉಪದೇಶಿಸುತ್ತಾ ಇರುವ ಸಮಯದಲ್ಲಿ ॥

ಯಾದವ— ಇಂತೆಂದು ಕಂದಂ॥ ಯಾದವ ವಂಶಜರುಂ= ಯದುವಂಶದಲ್ಲಿ ಹುಟ್ಟಿದ ರಾಜಕುಮಾರರೂ; ಯದುವಿನ ವಂಶದಲ್ಲಿ ಹುಟ್ಟಿದವರು ಯಾದವರು, ಯಾದವ ವಂಶದಲ್ಲಿ ಹುಟ್ಟಿದವರು 'ಯಾದವ ವಂಶಜ'ರು 'ಯದು'ವೆಂಬುದು ಚಂದ್ರವಂಶದ ರಾಜನೊಬ್ಬನ ಹೆಸರು), ನಾನಾದೇಶನರೇಂದ್ರರುಂ= ಹಲವು ದೇಶಗಳ ಅರಸರೂ; ಘಟೋದ್ಭವನ= ದ್ರೋಣಾಚಾರ್ಯನ [ದ್ರೋಣಾಚಾರ್ಯನು ಘಟ (ಕುಂಭ, ಮಡಕೆ)ದಲ್ಲಿ 'ಉದ್ಭವಿ'ಸಿದುದರಿಂದ, ಘಟೋದ್ಭವನು, ಕುಂಭೋದ್ಭವನು, ಕುಂಭಸಂಭವನು ಇತ್ಯಾದಿಯಾಗಿ ನಿರ್ದೇಶಿಸಲ್ಪಟ್ಟಿದ್ದಾನೆ ಗಂಗಾದ್ವಾರದಲ್ಲಿ ಭರದ್ವಾಜನೆಂಬ ಬ್ರಹ್ಮರ್ಷಿ ಅಮೃತಾಬ್ಧಿಯೆಂಬ ಅಪ್ಸರ ಸ್ತ್ರೀಯನ್ನು ಕಂಡು ಮೋಹಿಸಿ ಕಾಮವಶನಾದಾಗ 'ಮಾಣದೆ ಸೋರ್ವಿಂದ್ರಿಯಮಂ ದ್ರೋಣದೊಳಾಂತಲ್ಲಿಯೊಗೆದ ಶಿಶುವಂ ಕಂಡೀ ದ್ರೋಣದೊಳೆ ಪುಟ್ಟಿದೀತಂ ದ್ರೋಣನೆ ಪೋಗೆಂದು ಪೆಸರನಿಟ್ಟಂ ಮುನಿಪಂ'. ದ್ರೋಣನೂ ಪಾಂಚಾಲ ರಾಜನಾದ ದ್ರುಪದನೂ ಯಜ್ಞಸೇನನೆಂಬ ಋಷಿಯ ಪಕ್ಕದಲ್ಲಿ ಸಹಪಾಠಿಗಳಾಗಿ ಬಿಲ್ವಿದ್ಯೆಯಂ ಕಲ್ತರು. ಭರದ್ವಾಜಂ ದ್ರೋಣಂಗೆ ಕೃಪನ ತಂಗೆಯಪ್ಪ ಶಾರದ್ವತೆಯಂ ತಂದು ಮದುವೆಯಂ ಮಾಡಿದೊಡೆ ಆತಂಗಂ ಆಕೆಗಂ ತ್ರಿಣೇತ್ರನಂಶದೊಳೊರ್ವಮಗಂ ಅಶ್ವತ್ಥಾಮನೆಂಬಂ ಪುಟ್ಟಿದಂ. ಬಳಿಕ ದ್ರೋಣಂಗೆ ಬಡತನವಡಸಿದುದರಿಂದ, ಅಶ್ವತ್ಥಾಮನನ್ನು ಒಡಗೊಂಡು

ದ್ರೋಣಂ ಗಡಮಿಷುವಿದ್ಯೆಗೆ ।
ಜಾಣಂ ಗಡಮೆಂದು ಕೇಳ್ದು ಕೌರವರ್ಗೆಲ್ಲಂ* ॥
ಪ್ರಾಣಂ ಬರ್ಪಾಕೃತಿಯೊಳೆ ।
ಬಾಣಾಸನ ಬಾಣಪಾಣಿ ಕರ್ಣಂ ಬಂದಂ ॥ ೨ ॥

---

ನಾಡುನಾಡು ಸುತ್ತುತ್ತಾ ಪರಶುರಾಮನಲ್ಲಿಗೆ ಬಂದು ಆತನಿಂದ ದಿವ್ಯಾಸ್ತ್ರಂಗಳನ್ನು ಪಡೆದು, ದ್ರುಪದನ ಓಲಗದಲ್ಲಿ ಅಪಮಾನಿತನಾಗಿ, ಹಸ್ತಿನಾಪುರಕ್ಕೆ ಬಂದು ತನ್ನ ಭಾವನಾದ ಕೃಪನ ಮನೆಯಲ್ಲಿದ್ದನು ಅಲ್ಲಿ ಭೀಷ್ಮನು (ದ್ರೋಣನಿಗೆ ಬೞಿಯನಟ್ಟಿ ಬರಿಸಿ ಪಾಂಡವಕೌರವರೆಂಬ ನೂಱಯ್ವರ್ ಕುಮಾರರುಮಂ ಇದಿರೊಳಿಟ್ಟು 'ಈ ಕೂಸುಗಳ್ ಯೋಗ್ಯರಪ್ಪುದನಿನ್ನೊಲ್ದೊಡೆ ಶಸ್ತ್ರವಿದ್ಯೆಗೊವಜಂ ನೀನಾಗು ಕುಂಭೋದ್ಭವಾ' ಎಂದಾಗ ಸಮ್ಮತಿಸಿ, ದ್ರೋಣನು ಆಚಾರ್ಯಪದವಿಯಂ ಕೈಕೊಂಡನು) ಧನುರ್ವೇದಮನೆ= ಶಸ್ತ್ರವಿದ್ಯೆಯನ್ನೇ (ಆ ಕಾಲದಲ್ಲಿ ದ್ರೋಣಾಚಾರ್ಯನೇ ಬಿಲ್ಲುವಿದ್ಯೆಯಲ್ಲಿ ಉಳಿದೆಲ್ಲಾ ಆಚಾರ್ಯರಿಗಿಂತ ಮೇಲೆನಿಸಿದ್ದುದರಿಂದ, ಆತನ ಧನುರ್ವೇದವನ್ನೇ ಕಲಿಯಲಿಕ್ಕೆ ಬಂದರು ಎಂಬುದರಿಂದ ಇಲ್ಲಿ ಅವಧಾರಣದ 'ಎ'ಕಾರವು ಸಾರ್ಥಕವು) ಕಲಲ್ ಬಂದು = ಕಲಿಯುವುದಕ್ಕೋಸ್ಕರ ಬಂದು. [ಕಲ್ (ಧಾತು)- ಕಲಿಯು ಅಧ್ಯಯನೇ-ಭಾವನಾಮ 'ಕಲ್ಕೆ'] ಆಳಾದರ್ = ಶಿಷ್ಯ ವೃತ್ತಿಯನ್ನು ಕೈಕೊಂಡರು ಏಕೆ? ಕಾರಣವಿಷ್ಟೇ—'ವಿದ್ಯಾಪ್ರಭಾವಂ ಆದೊರೆತೆ ವಲಂ = ವಿದ್ಯೆಯ ಮಹಿಮೆಯು ನಿಜವಾಗಿಯೂ ಅಷ್ಟು ಯೋಗ್ಯತೆಯುಳ್ಳದೇ ಆಗಿದೆ. 'ಆ ದೊರೆತು' ಎಂಬುದಕ್ಕೆ ಅವಧಾರಣಾರ್ಥದಲ್ಲಿ 'ಎ' ಕಾರಾಗಮವಾಗಿ, 'ಆ ದೊರೆತೆ' ಎಂದಾಯ್ತು (ಆ ದೊರೆತು= ಅಂಥಾ ಯೋಗ್ಯತೆಯುಳ್ಳುದು. 'ವಲಂ'-ನಿಶ್ಚಯಾರ್ಥಕ ಅವ್ಯಯವು ದ್ರೋಣಾಚಾರ್ಯನ ವಿದ್ಯಾಪ್ರಭಾವವು, ಹಲವು ದೇಶಗಳ ರಾಜಕುಮಾರರು ಬಂದು ಶಿಷ್ಯವೃತ್ತಿಯನ್ನು ಕೈಕೊಳ್ಳುವಷ್ಟು ಯೋಗ್ಯತೆಯುಳ್ಳುದಾಗಿತ್ತೆಂದು ತಾತ್ಪರ್ಯವು. 'ವಿದ್ಯಾಪ್ರಭಾವಮಾದೊರೆತೆ ವಲಂ'—ಅರ್ಥಾಂತರನ್ಯಾಸಾಲಂಕಾರವು. ॥ ೧ ॥

ದ್ರೋಣಂಗಡಂ— ಇಂತೆಂದು ಕಂದಂ ॥ ದ್ರೋಣಂಗಡಂ = ದ್ರೋಣನಂತೆ! ಇಷುವಿದ್ಯೆಗೆ ಜಾಣಂ ಗಡಂ= ಧನುರ್ವಿದ್ಯೆಯಲ್ಲಿ ಜಾಣನಂತೆ! ('ಗಡಂ'-ಉಪಚಿತ ವಾರ್ತೆಯಲ್ಲಿಯೂ ಉಚಿತ ಸಂಭಾಷಣೆಯಲ್ಲಿಯೂ ಪ್ರಯೋಗಿಸಲ್ಪಡುವ ಅವ್ಯಯವು. "ರಂಜಿಪುವು 'ಗಡ-ಗಳ-ಗಡಂ'ಗಳವುಪಚಿತವಾರ್ತೆಯೊಳಮುಚಿತ ಸಂಭಾಷಣೆಯೊಳ್"- ಶ. ಮ. ದ. ಸೂ ॥ ೩೧೬ ॥ ಹೊಸಗನ್ನಡದಲ್ಲಿ 'ಹಾಗಂತೆ, ಹೀಗಂತೆ' ಎಂಬ ಪ್ರಯೋಗಗಳಿರುವ ಹಾಗೆ), ಎಂದು ಕೇಳು = ಎಂಬ ವಾರ್ತೆಯನ್ನು ಕೇಳಿ; ಕೌರವ

ವ ॥ ಅಂತು ಬಂದು ವೈರಿಗಜಘಟಾವಿಘಟನನೊಳ್ ವಿಘಟಿಸಿ ಬಿಲ್ಗಲ್ತು-

ಕೆಳೆಯುಂ ಗುಱಿಯುಂ ಗೊಟ್ಟಿಯು- ।
ಮಳವಿಗೆ ಪಿರಿದಾಗೆ ತನಗೆ ದುರ್ಯೋಧನನೊಳ್ ॥
ಮುಳಿಸುಂ ನೋವುಂ ಕಲುಷಮು- ।
ಮಳುಂಬಮೆನೆ ತನಗರಾತಿಕಾಳಾನಳನೊಳ್ ॥ ೩ ॥

---

ರ್ಗೆಲ್ಲಂ = ಕೌರವರಿಗೆಲ್ಲಾ; ಎಲ್ಲಾ ಕೌರವರಿಗೂ (ಕೌರವರ್ಗೆ + ಎಲ್ಲಂ = ಕೌರವರ್ಗೆಲ್ಲಂ–ಸಂಧಿಯಾದಲ್ಲಿ ಇಲ್ಲಿ ದ್ವಿತ್ವವು ಶಿಥಿಲವಾಗಿದೆ) ಪ್ರಾಣಂ ಬರ್ಪ ಆಕೃತಿಯೊಳೆ= ಜೀವಬರುವ ಮಾದರಿಯಲ್ಲಿ ('ಆಕೃತಿಯೊಳೆ' ಎಂಬ ಪದದಲ್ಲಿ ಅವಧಾರಣಾರ್ಥದ 'ಎ'ಕಾರವು ಅಷ್ಟೊಂದು ಆವಶ್ಯಕವಲ್ಲವೆಂದು ತೋರುವುದು ಅಥವಾ 'ಜೀವ ಬರುವ ರೀತಿಯಲ್ಲೇ' ಎಂದು ಅವಧಾರಣಾರ್ಥದ ಪ್ರಯೋಜನವನ್ನೂ ಮಾಡಿಕೊಳ ಬಹುದು. 'ಪ್ರಾಣಂಬರ್ಪಾಕೃತಿಯೊಳ್' ಎಂದಿಷ್ಟೇ ಇದ್ದಿದ್ದರೂ, ಛಂದೋಭಂಗ ವಿಲ್ಲ); ಬಾಣಾಸನ ಬಾಣಪಾಣಿ = ಕೈಯಲ್ಲಿ ಬಿಲ್ಲುಬಾಣಗಳನ್ನು ಧರಿಸಿದವನಾದ (ಬಾಣಾಸನ-ಬಿಲ್ಲೂ, ಬಾಣ-ಅಸ್ತ್ರವೂ ಉಳ್ಳಂತಹ ಪಾಣಿ = ಕೈಯುಳ್ಳವನಾಗಿ), ಕರ್ಣಂ ಬಂದಂ = ಕರ್ಣನು ಬಂದನು. ಉತ್ಪ್ರೇಕ್ಷೆ ॥ ೨ ॥

ಅಂತು ಬಂದು — ಇತೆಂದು ವಚನಂ ॥ ಅಂತು ಬಂದು, ವೈರಿಗಜಘಟಾವಿಘಟನನೊಳ್ = ಶತ್ರುಗಳ ಆನೆಯೊಡ್ಡನ್ನು ಒಡೆವ ಪರಾಕ್ರಮವುಳ್ಳ ವಿಕ್ರಮಾರ್ಜುನನಲ್ಲಿ ['ವೈರಿಗಜಘಟಾವಿಘಟನಂ' ಎಂಬುದು ವಿಕ್ರಮಾರ್ಜುನನಿಗೆ ವಿಶೇಷಣವು. ಪಂಪನು 'ಅರ್ಜುನ'ನನ್ನು ಹೇಳುವೆಡೆಗಳಲ್ಲೆಲ್ಲ, ತನ್ನ ಪ್ರಭುವಾದ 'ಅರಿಕೇಸರಿ'ಯ ಬಿರುದುಗಳನ್ನೋ 'ವಿಶೇಷಣಗಳನ್ನೋ ತನ್ನಿಷ್ಟ ಒಂದಂತೆ ಅಭೇದಪ್ರತಿಪತ್ತಿಯಿಂದ ಪ್ರಯೋಗಿಸಿದ್ದಾನೆ. 'ವಿಕ್ರಮಾರ್ಜುನನೆಂಬ ಹೆಸರು ಅರ್ಜುನನನ್ನು ನಿರ್ದೇಶಿಸುತ್ತಿದೆ ಯೆಂಬುದನ್ನು ಸುಲಭವಾಗಿ ಗ್ರಹಿಸಲಾಗುತ್ತದೆ. "ಅರಾತಿ ಗಜ ಘಟೆಗಳೆನಿತು ಬಂದೊಡ್ಡೆಯುಂ ತನ್ನೊಂದಮುಂದಧ್ವನಿಗೆ ಒಡ್ಡೊಡೆದೋಡುವುದಱಿಂದೆ ವೈರಿಗಜ ಘಟಾ ವಿಘಟನನುಂ"—(ಪಂಪಭಾರತಂ–೧೪।೩೭ ವಚನಂ) ಈ ವಾಕ್ಯದಲ್ಲಿ ಪಂಪನು 'ವಿಕ್ರಮಾರ್ಜುನನ ಈ ವಿಶೇಷಣಕ್ಕೆ ಕಾರಣವನ್ನು ಹೇಳಿದಾನೆ ಹೀಗೆ ಇನ್ನೂ ಹಲವು ವಿಶೇಷಣಗಳು (ಬಿರುದುಗಳು ?) ಬಂದುದಕ್ಕೆ ಅದೇ ವಚನದಲ್ಲಿ ಕಾರಣಗಳನ್ನು ಹೇಳಿ ಸಮರ್ಥಿಸಿದ್ದಾನೆ. ಆದರೆ ಕೇವಲ ಭಾರತಕಥೆಯ ಅರ್ಜುನನಿಗೇ ಈಯೆಲ್ಲಾ ವಿಶೇಷಣ ಗಳನ್ನು ಅನ್ವಯಿಸುವಲ್ಲಿ ಅರ್ಥಾಭಾಸವಾಗುವುದು ] ವಿಘಟಿಸಿ = ಎದುರೊಡ್ಡಿ; ಬಿಲ್ಗಲ್ತು = ಧನುರ್ವಿದ್ಯೆಯನ್ನು ಅಭ್ಯಾಸಿಸಿ, ॥

ಕೆಳೆಯುಂ — ಇಂತೆಂದು ಕಂದಂ ॥ ತನಗೆ = ಕರ್ಣನಿಗೆ; ದುರ್ಯೋಧನನೊಳ್ ಕೆಳೆಯುಂ ಗುಱಿಯುಂ ಗೊಟ್ಟಿಯುಂ = ದುರ್ಯೋಧನನೊಡನೆ ಗೆಳೆತನವೂ, ಒಂದೇ

ವ ॥ ಅಂತು ಕರ್ಣಂ ಗುಣಾರ್ಣವನೊಳ್ ಸೆಣಸಿ ಪಗೆಯನಭ್ಯಾಸಂಗೆಯ್ವಂತೆ ವಿದ್ಯಾಭ್ಯಾಸಂಗೆಯ್ಯೆ, ಭಾರದ್ವಾಜನಾಗಾಮಿಕಸಂಗ್ರಾಮರಂಗಕ್ಕೆ ಪಾತ್ರಂಗಳಂ ಸಮೆಯಿಸುವ ಸೂತ್ರಧಾರನಂತೆ ಶಸ್ತ್ರವಿದ್ಯಾಭ್ಯಾಸಂಗೆಯ್ಸುತ್ತಿರೆಯೊರ್ಮೆ ಪಾಂಡವಕೌರವರ್ಕಳ ಮೆಯ್ಯೊಳೆ ವಿದ್ಯೆಯಂ ನೆಱೆಯೆ ಸಂಕ್ರಮಿಸಿದ ತನ್ನ ವಿದ್ಯಾಮಹಿಮೆಯಂ ಮೆಱೆಯಲ್ಕೆಂದು ಬಾಹ್ಲೀಕಭೂರಿಶ್ರವಸ್ಸೋಮದತ್ತಗಾಂಗೇಯಧೃತರಾಷ್ಟ್ರವಿದುರರ್ಕಳ ನೊಡಂಬಡಿಸಿ ಹಸ್ತಿನಪುರದ ಪೆಱವೊೞಲೊಳುತ್ತರದಿಶಾಭಾಗದೊಳ್ ಸಮಚತುರಸ್ರಮಾಗೆ ಸಮೆದ ವ್ಯಾಯಾಮರಂಗಕ್ಕೆ ಗಾಂಗೇಯ ಧೃತರಾಷ್ಟ್ರವಿದುರಸೋಮದತ್ತಬಾಹ್ಲೀಕಭೂರಿಶ್ರವಾದಿ ಕುಲವೃದ್ಧರುಂ ಕುಂತಿಗಾಂಧಾರಿಗಳುಂ ವೆರಸು ಬಂದು ಕುಳ್ಳಿರೆ—ಧರ್ಮಪುತ್ರನಂ ಮುಂತಿಟ್ಟು ಭೀಮಾರ್ಜುನನಕುಲಸಹದೇವರುಂ ದುರ್ಯೋಧನನಂ ಮುಂತಿಟ್ಟು ಯುಯುತ್ಸುದುಶ್ಶಾಸನಾದಿಗಳ್ ಮೊದಲಾಗಿ ನೂರ್ವರುಂ ಬಂದು,—

---

ಲಕ್ಷ್ಯವೂ (ಉದ್ದೇಶ್ಯವೂ) ಒಂದೇ ಒಡನಾಟವೂ [ಗೊಟ್ಟಿ–(ಸಂಸ್ಕೃತ) ಗೋಷ್ಠೀ] ಅಳವಿಗೆ ಪಿರಿದಾಗೆ = ಪ್ರಮಾಣಕ್ಕೆ ಅಧಿಕವಾಗುತ್ತಿರಲು, ತನಗೆ, ಆರಾತಿಕಾಳಾನಳನೊಳ್ = ಶತ್ರುಗಳಿಗೆ ಪ್ರಳಯಾಗ್ನಿಯಂತಿರುವ ವಿಕ್ರಮಾರ್ಜುನನಲ್ಲಿ (ಅರಾತಿವನಗಹನಮಂ ಅೞುರ್ದುಕೊಳ್ವುದಱಿಂದಂ ಅರಾತಿಕಾಳಾನಳನುಂ"— ಪಂ. ಭಾ. ೧೪।೩೭ವ.) ಮುಳಿಸುಂ = ಕೋಪವೂ ನೋವುಂ = ಮನಸ್ತಾಪವೂ, ಕಲುಷಮುಂ = ಕೇಡೂ; ಹೊಟ್ಟೆಕಿಚ್ಚೂ, ಅಳುಂಬಂ ಎನೆ = ಹೆಚ್ಚೆಂಬ ಹಾಗೆ ('ಆಯ್ತು' ಎಂಬ ಕ್ರಿಯಾಪದವನ್ನು ಯೋಜಿಸಿಕೊಳ್ಳಬೇಕು. ಇದು ಪಂಪನ 'ಪೂರ್ಣ ಕ್ರಿಯಾಪದವಿಲ್ಲದ ವಾಕ್ಯಪ್ರಯೋಗವಿಶೇಷಗಳಲ್ಲಿ ಒಂದಾಗಿದೆ) 'ಅಳುಂಬಂ'–ಅಧಿಕಾರ್ಥದ ಅವ್ಯಯವು. ಅರಾತಿಕಾಳಾನಳವೆಂಬಲ್ಲಿ ರೂಪಕಾಲಂಕಾರವು. ॥ ೩ ॥

ಅಂತು ಕರ್ಣಂ — ಇಂತೆಂದು ವಚನಂ ॥ ಅಂತು ಕರ್ಣಂ, ಗುಣಾರ್ಣವನೊಳ್ = ಗುಣಾರ್ಣವನೆಂಬ ಬಿರುದುಳ್ಳ ವಿಕ್ರಮಾರ್ಜುನನಲ್ಲಿ ("ಗುಣಾರ್ಣವಂ" ಎಂಬುದ ಪಂಪನ ಸ್ವಾಮಿಯಾದ ಅರಿಕೇಸರಿಯ ಅತ್ಯಂತ ಪ್ರಿಯವಾದ ಬಿರುದುಗಳಲ್ಲೊಂದು. 'ಅರಿಕೇಸರಿ' ರಾಜನು 'ಗುಣಾರ್ಣವ'ನು; ಪಂಪನು 'ಕವಿತಾ ಗುಣಾರ್ಣವ'ನು. "ನೆಗೞ್ತೆವೆತ್ತ ಸತ್ಕವಿಗಳ ಷೋಡಶಾವನಿಪರೋಳಿಯೊಳಂ ಕವಿತಾಗುಣಾರ್ಣವಂ ಕವಿತೆಯೊಳಗ್ಗಳಂ ಗುಣದೊಳಗ್ಗಳಮೆಲ್ಲಿಯುಂ ಮಹಾಗುಣಾರ್ಣವಂ" (ಪಂ. ಭಾ. ೧।೧೦) ಎಂಬುದನ್ನು ನೋಡಿರಿ.) ಸೆಣಸಿ = ಮತ್ಸರಿಸಿ [ಸೆಣಸು (ಧಾತು)–ಈರ್ಷ್ಯಾಯಾಂ];

ಪಗೆಯುಂ ಅಭ್ಯಾಸಂ ಗೆಯ್ವಂತೆ = ಹಗೆತನವನ್ನು ಅಭ್ಯಾಸ ಮಾಡುವ ಹಾಗೆ, ವಿದ್ಯಾಭ್ಯಾಸಂಗೆಯ್ಕೆ; ಭಾರದ್ವಾಜಂ = ದ್ರೋಣನು (ಭರದ್ವಾಜನ ಮಗನು ಭಾರದ್ವಾಜನು) ಆಗಾಮಿಕಸಂಗ್ರಾಮರಂಗಕ್ಕೆ = ಮುಂದೆ ನೆರವೇರಲಿರುವ ಭಾರತ ಯುದ್ಧರಂಗಕ್ಕೆ ('ಯುದ್ಧರಂಗ'ವನ್ನು ಯುದ್ಧದ 'ರಂಗಭೂಮಿ'ಯೆಂದು ಇಲ್ಲಿ ನಿರೂಪಿಸಿರುವುದಾಗಿ ತಿಳಿದುಕೊಳ್ಳಬೇಕು. ಹಾಗೆ ರಂಗಭೂಮಿಯೆಂದೂ ರೂಪಿಸಿದುದರಿಂದಲೇ) ಪಾತ್ರಂಗಳಂ ಸಮೆಯಿಸುವ ಸೂತ್ರಧಾರನಂತೆ = ನಟರನ್ನು ಸಿದ್ಧಗೊಳಿಸುವ (ನಾಟಕದ) ಸೂತ್ರಧಾರನ ಹಾಗೆ, (ಸಂಗ್ರಾಮವನ್ನು ನಾಟಕವೆಂದೂ, ಪಾಂಡವ ಕೌರವರೇ ಮೊದಲಾದ ವೀರಯೋಧರನ್ನು ಪಾತ್ರಗಳೆಂದೂ, ದ್ರೋಣಾಚಾರ್ಯನನ್ನು ಸೂತ್ರಧಾರನೆಂದೂ ಹೇಳಿರುವುದಾಗಿ ಭಾವವು) 'ಸಂಗ್ರಾಮರಂಗಕ್ಕೆ ಪಾತ್ರಂಗಳಂ ಸಮೆಯಿಸುವ ಸೂತ್ರಧಾರನಂತೆ' ಎಂಬಲ್ಲಿ ಉಪಮಾಲಂಕಾರವು, 'ಸೂತ್ರಧಾರ'ನ ಲಕ್ಷಣ — ನಾಟ್ಯಸ್ಯ ಯದನುಷ್ಠಾನಂ ತತ್ಸೂತ್ರಂ ಸ್ಯಾತ್ ಸಬೀಜಕಮ್ । ರಂಗದೈವತ ಪೂಜಾಕೃತ್ ಸೂತ್ರಧಾರ ಇತಿಸ್ಮೃತಃ ॥ ಶಸ್ತ್ರವಿದ್ಯಾಭ್ಯಾಸಂ ಗೆಯ್ಸುತ್ತಿರಲ್ = ಧನುರ್ವಿದ್ಯೆಯನ್ನು ಕಲಿಸುತ್ತಾ ಇರಲು, ('ಗೆಯ್ಸು' ಎಂಬುದು ವ್ಯಾಕರಣದ ದೃಷ್ಟಿಯಿಂದ 'ಗೆಯಿಸು' ಎಂದಾಗಬೇಕು. ಅಂತು ದ್ರೋಣಾಚಾರ್ಯನು ಮಾಡಿಸಿದ ಶಸ್ತ್ರವಿದ್ಯಾಭ್ಯಾಸವೇ ಆಗಾಮಿಕ ಭಾರತ ಯುದ್ಧಕ್ಕೆ ಪ್ರಸ್ತಾವನೆಯಂತಿದ್ದು, ದ್ರೋಣನು ಪಾತ್ರಗಳನ್ನು ಸಿದ್ಧಗೊಳಿಸುವ ಸೂತ್ರಧಾರನಂತೆ ಶೋಭಿಸಿದನು ) ಒಮ್ಮೆ = ಒಮ್ಮೆ (ಒಂದು—ಒರ್, ಒರ್ + ಮೆ = ಒಮ್ಮೆ. 'ಮೆ'ಯೆಂಬುದಕ್ಕು ಮಣಿಸುವ ಸೂಟಿಗೊಳ್" ಶ ಮ ದ. ಸೂ ೨೧೮ ॥ ಒಂದು ಸಲ.) ಪಾಂಡವ ಕೌರವರ್ಕಳ ಪೊಯ್ಯೊಳಿ ವಿದ್ಯೆಯಂ ನೆಱೆಯೆ ಸಂಕ್ರಮಿಸಿದ = ಪಾಂಡವರ ಮತ್ತು ಕೌರವರ ಪೊಯ್ಯಲ್ಲಿಯ ವಿದ್ಯೆಯನ್ನು ಚೆನ್ನಾಗಿ ಸೊಗಸುವಂತೆ ಹಬ್ಬಿದ, ತನ್ನ ವಿದ್ಯಾಮಹಿಮೆಯಂ = ತನ್ನ ಧನುರ್ವಿದ್ಯೆಯ ಪ್ರಭಾವವನ್ನು ಮೆಱೆಯಲ್ಕೆಂದು = ಮೆರೆಸುವುದಕ್ಕೆಂದು, ಬಾಹ್ಲೀಕಭೂರಿಶ್ರವಸ್ಸೋಮದತ್ತಗಾಂಗೇಯ ಧೃತರಾಷ್ಟ್ರವಿದುರರ್ಕಳಂ = ಬಾಹ್ಲೀಕ, ಭೂರಿಶ್ರವಸ್ಸು, ಸೋಮದತ್ತ, ಭೀಷ್ಮ, ಧೃತರಾಷ್ಟ್ರ, ವಿದುರ—ಎಂಬಿವರನ್ನು (ಬಾಹ್ಲೀಕ—ಬಾಹ್ಲಿಕ ದೇಶದ ಅರಸು. ಭೂರಿಶ್ರವಸ್-ಕೌರವರ ಪಕ್ಷದ ವೀರ ಯೋಧನೊಬ್ಬನು— ಭಾರತ ಯುದ್ಧದಲ್ಲಿ ಸಾತ್ಯಕಿಯಿಂದ ಹತನಾದವನು. ಬಾಹ್ಲೀಕ ಮುಂತಾದವರು ಕುರುಕುಲದಲ್ಲಿ ಆಗಳಿನ ಕುಲವೃದ್ಧರಾಗಿದ್ದರು ಗಾಂಗೇಯ = ಭೀಷ್ಮನು; ಗಂಗಾ ಪುತ್ರನು; (ಒಡಂಬಡಿಸಿ = ಒಪ್ಪಿಸಿ; ಹಸ್ತಿನಪುರದ ಪೊಱಪೊೞಲೊಳ್ = ಹಸ್ತಿನಾನಗರದ ಹೊರವಳಯದಲ್ಲಿ, ಸಮಚತುರಸ್ರಂ ಆಗೆ = ಚಚ್ಚೌಕಾಕೃತಿಯಾಗಿ, ಸಮೆದ = ಸಜ್ಜುಗೊಳಿಸಿದ, [ಸಮೆ (ಧಾತು)—ನಿರ್ವಹಣೇ, (ನಿಶ್ಶೇಷೇಚ) ವ್ಯಾಯಾಮರಂಗಕ್ಕೆ = ಗರಡಿಗೆ, ವ್ಯಾಯಾಮ ಪ್ರದರ್ಶನ ಶಾಲೆಗೆ;

**ಗಾಂಗೇಯಧೃತರಾಷ್ಟ್ರವಿದುರಸೋಮದತ್ತಬಾಹ್ಲೀಕಭೂರಿಶ್ರವಾದಿ ಕುಲವೃದ್ಧರುಂ =**

ಗದೆಯೊಳ್ ಬಿಲ್ಲೊಳ್ ಗಜದೊಳ್ ।
ಕುದುರೆಯೊಳಂ ರಥದೊಳಸ್ತ್ರಕೌಶಲದೆ ಬೆಡಂ– ॥
ಗೊದವಿರೆ ತೋಱಿದರವರೊ– ।
ರ್ಮೊದಲೆ ಜನಂ ಪೊಗೞೆ ನೆಗೞೆ ಜಳನಿಧಿನಿನದಂ ॥ ೪ ॥

ವ ॥ ಆ ಪ್ರಸ್ತಾವದೊಳ್ (ವಿಕ್ರಮಾರ್ಜುನಂ ಅಲ್ಲಿ ನೆರೆದ ನೆರವಿಗೆಲ್ಲಂ

---

ಭೀಷ್ಮ, ಧೃತರಾಷ್ಟ್ರ, ವಿದುರ, ಸೋಮದತ್ತ, ಬಾಹ್ಲೀಕ, ಭೂರಿಶ್ರವರೇ ಮೊದಲಾದ ಕುಲವೃದ್ಧರೂ, (ಕುಲವೃದ್ಧರು–ಕುಟುಂಬದಲ್ಲಿ ಬಹಳ ಹಳಬರೂ ಅನುಭವಶಾಲಿಗಳೂ ಆದವರು), ಕುಂತಿ ಗಾಂಧಾರಿಗಳುಂ ವೆರಸು= ಕುಂತಿ ಗಾಂಧಾರಿಗಳೂ ಕೂಡ (ವೆರಸು= ಬೆರಸು, ಕೂಡಿಕೊಂಡು. 'ಬ'ಕಾರಕ್ಕೆ 'ವ'ಕಾರಾದೇಶವು "ಪರದ ಪ' ವರ್ಗದ ನೆಲೆಗಕ್ಕುಂ 'ವ'ತ್ವಂ......ಒಹುಳ ವೃತ್ತಿಯಿಂ ವಾಕ್ಯದೊಳಂ"– ಶ. ಮ. ದ. ಸೂ ॥ ೬೭ ॥ ಇಲ್ಲಿ ವಾಕ್ಯದಲ್ಲಿ ಬಂದಿದೆ.) ಬಂದು ಕುಳ್ಳಿರೆ = ಬಂದು (ಪ್ರೇಕ್ಷಕರಾಗಿ) ಕುಳಿತುಕೊಂಡಿರಲು, ಧರ್ಮಪುತ್ರನಂ ಮುಂತಿಟ್ಟು = ಧರ್ಮಪುತ್ರನಾದ ಯುಧಿಷ್ಠಿರನನ್ನು ಮುಂದುಮಾಡಿಕೊಂಡು, ಭೀಮಾರ್ಜುನ ನಕುಲ ಸಹದೇವರುಂ = ಭೀಮ–ಅರ್ಜುನ–ನಕುಲ–ಸಹದೇವ ಎಂಬೀ ನಾಲ್ವರೂ, ದುರ್ಯೋಧನನಂ ಮುಂತಿಟ್ಟು, ಯುಯುತ್ಸು ದುಶ್ಶಾಸನಾದಿಗಳ್ ಮೊದಲಾಗಿ ನೂರ್ವರುಂ= ದುರ್ಯೋಧನನನ್ನು ಮುಂದು ಮಾಡಿಕೊಂಡು ಯುಯುತ್ಸುದುಶ್ಶಾಸನ ಮುಂತಾದವರೇ ಮೊದಲಾಗಿ ನೂರು ಮಂದಿಯೂ, ಒಂದು,— ।

ಗದೆಯೊಳ್ —ಇಂತೆಂದು ಕಂದಂ ॥ ಅವರ್ = ಅವರು (ಧರ್ಮಪುತ್ರಾದ್ಯರೂ, ದುರ್ಯೋಧನಾದ್ಯರೂ) ಗದೆಯೊಳ್= ಗದೆಯನ್ನು ಪ್ರಯೋಗಿಸುವುದರಲ್ಲಿಯೂ, ಬಿಲ್ಲೊಳ್ = ಬಿಲ್ಲಿನ ಅಭ್ಯಾಸದಲ್ಲಿಯೂ, ಗಜದೊಳ್ = ಹಸ್ತಿಯುದ್ಧಾಭ್ಯಾಸದಲ್ಲಿಯೂ, ಕುದುರೆಯೊಳಂ= ಅಶ್ವಾರೋಹಣದಲ್ಲಿಯೂ (ಕುದುರೆಗಳ ಏರಾಟದಲ್ಲಿಯೂ); ರಥದೊಳ್ =(ರಥವನ್ನೇರುವುದರಲ್ಲಿಯೂ) ತೇರನ್ನೇರಿ ಯುದ್ಧಮಾಡುವುದರಲ್ಲಿಯೂ, ಅಸ್ತ್ರಕೌಶಲದೆ ಬೆಡಂಗು ಒದವಿರೆ= ಅಸ್ತ್ರಪ್ರಯೋಗಕೌಶಲದಿಂದ ಬೆಡಗು ಉಂಟಾಗಿರಲು, ಒರ್ಮೊದಲೆ= ಒಂದೇ ಸವನೆ (ಒಂದು+ಮೊದಲೆ = ಒರ್ಮೊದಲೆ), ಜನಂ ಪೊಗೞೆ =ನೆರವಿಯೆಲ್ಲ ಹೊಗಳುತ್ತಿರಲು, ಜಳನಿಧಿನಿನದಂ ನೆಗೞೆ = ಸಮುದ್ರದಂತೆ ಗಂಭೀರಘೋಷವುಂಟಾಗಿರಲು, ತೋಱಿದರ್ =(ಮೆರೆದು) ಕಂಗೆಸೆದರು ಜಳನಿಧಿನಿನದಂ— ಉಪಮಾಲಂಕಾರವು. ॥ ೪ ॥

ಆ ಪ್ರಸ್ತಾವದೊಳ್— ಇಂತೆಂದು ವಚನಂ ॥ ಆ ಪ್ರಸ್ತಾವದೊಳ್ = ಆ ಸಂದರ್ಭದಲ್ಲಿ; **ವಿಕ್ರಮಾರ್ಜುನಂ ಅಲ್ಲಿ ನೆರೆದ ನೆರವಿಗೆಲ್ಲಂ; ಭಯಂಕರವಾಗೆ= ಭೀತಿ**

ಭಯಂಕರವಾಗೆ ತನ್ನಸ್ತ್ರಕೌಶಲಮಂ ತೋಱಿ ಮೆಱೆಯೆ) ಆ ಪರಾ ಕ್ರಮಧವಳನ ಶರಪರಿಣತಿಯಂ ಕಂಡು ದುರ್ಯ್ಯೋಧನನ ಮೊಗಂ ತಲೆ ನವಿರ ಗಂಟಿಂ ಕಿಱಿದಾಗೆ ದ್ರೋಣಭೀಷ್ಮಕೃಪವಿದುರ ಪ್ರಭೃತಿಗಳ ಮೊಗಮರಲ್ದ ತಾವರೆಯಿಂ ಪಿರಿದಾಗೆ—

---

ಯನ್ನುಂಟುಮಾಡುವ ರೀತಿಯಲ್ಲಿ, ತನ್ನ ಅಸ್ತ್ರಕೌಶಲಮಂ ತೋಱಿ ಮೆಱೆಯೆ = ತನ್ನ ಅಸ್ತ್ರಪ್ರಯೋಗನೈಪುಣ್ಯವನ್ನು ಪ್ರದರ್ಶಿಸಿ ಮೆರೆಯಲು, ಆ ಪರಾಕ್ರಮಧವಳನ = ಆ ವಿಕ್ರಮಾರ್ಜುನನ ('ಪರಾಕ್ರಮಧವಳ'ನೆಂದರೆ ಸ್ವಪರಾಕ್ರಮದಿಂದ ಧವಳ ಕೀರ್ತಿಯನ್ನು ಸಂಪಾದಿಸಿದವನೆಂದರ್ಥವು. ಇದು 'ಅರಿಕೇಸರಿ' ರಾಜನ ವಿಶೇಷಣಗಳಲ್ಲೊಂದು. ಪಂಪನು ಅದನ್ನು ಹೀಗೆ ವಿವರಿಸಿದ್ದಾನೆ,—"ಆವೆಡೆಯೊಳಂ ವಿಕ್ರಮಕ್ರಮಮೆನಿಸಿದುದಱಿಂ ಪರಾಕ್ರಮಧವಳನುಂ......" ಪಂ ಭಾ ೧೪।೩೭ ವ. ಅಭೇದಪ್ರತಿಪತ್ತಿಯಿಂದ ಇಲ್ಲಿ ಅರ್ಜುನನಿಗೆ ಅನ್ವಯಿಸುವುದು), ದುರ್ಯ್ಯೋಧನನ ಮೊಗಂ = ದುರ್ಯ್ಯೋಧನನ ಮುಖವು, ತಲೆನವಿರ ಗಂಟಿಂ ಕಿಱಿದಾಗೆ = ತಲೆಕೂದಲಿನ ಗಂಟಿಗಿಂತಲೂ (ತಲೆಜುಟ್ಟಿಗಿಂತಲೂ) ಕಿರಿದಾಗಲು, (ವ್ಯಸನದಿಂದಲಾಗಿ ದುರ್ಯ್ಯೋಧನನ ಮೋರೆ ಕುಂದಿಹೋಗಿ ಕಪ್ಪಾಯಿತ್ತು ಎಂದು ತಾತ್ಪರ್ಯವು 'ಮೋರೆ ವ್ಯಸನದಿಂದ ಕಂದಿಕುಂದಿ ಕಪ್ಪಾಯಿತ್ತು' ಎಂಬರ್ಥದಲ್ಲಿ, ಇಂದಿಗೂ ನಾವು "ಮೋರೆ ಸಣ್ಣದಾಯಿತ್ತು" ಎಂದು ಪ್ರಯೋಗಿಸುತ್ತೇವೆ ಇಲ್ಲಿ ಕಪ್ಪಾದ ತಲೆಕೂದಲಿನ ಗಂಟು ಎಂದರೆ ಜುಟ್ಟು (ಶಿಖೆ) ತಲೆಗಿಂತಲೂ ಎಷ್ಟೋ ಕಿರಿದು, ಕುಂಬಳಕಾಯಿಗೆ ತೊಟ್ಟು ಇದ್ದ ಹಾಗೆ ಪರಾಭವದ ಸಿಗ್ಗಿನಿಂದಲಾಗಿ ಮೋರೆಯು ಕಂದಿಹೋಗಿ. ವೈವರ್ಣ್ಯವನ್ನು ತಾಳಿ, ತಲೆಜುಟ್ಟಿಗಿಂತಲೂ ಕಿರಿದಾಯಿತ್ತು ಎಂದೆನ್ನುವುದರಲ್ಲಿ ಎಷ್ಟು ಸ್ವಾರಸ್ಯವುಂಟು ನೋಡಿರಿ. ಅರ್ಜುನನ ಪರಾಕ್ರಮಪ್ರದರ್ಶನವು ಸಮಸ್ತಪ್ರೇಕ್ಷಕವೃಂದಕ್ಕೆ ವಿಸ್ಮಯಕರವಾಗುವಂತೆ ಮೆರೆದುದನ್ನು ನೋಡಿ, ಆತನ ಅಭ್ಯುದಯವನ್ನು ಕಂಡು ಮತ್ಸರಿಸುತ್ತಿದ್ದ ದುರ್ಯ್ಯೋಧನನು, ತನ್ನ ಕೈಕೀಳಾದುದಕ್ಕೆ ಏವೈಸಿದುದರಿಂದ, ಆತನ ಮೋರೆ ಸಣ್ಣದಾಯಿತ್ತು). ದ್ರೋಣಭೀಷ್ಮವಿದುರ ಪ್ರಭೃತಿಗಳ ಮೊಗಂ = ದ್ರೋಣ–ಭೀಷ್ಮ–ವಿದುರ ಮುಂತಾದವರ ಮೋರೆಗಳು ('ಮೊಗಂ'–ಇಲ್ಲಿ ಬಹುವಚನಾರ್ಥದಲ್ಲಿ ಏಕವಚನ ಪ್ರಯೋಗವು. 'ಜಾತ್ಯೇಕವಚನಂ') ಅರಲ್ದ ತಾವರೆಯಿಂ ಪಿರಿದಾಗೆ = ಅರಳಿದ ತಾವರೆಗಿಂತ ವಿಶಾಲವಾಗಲು. [ಅರಲ್ (ಧಾತು) = ವಿಕಾಸೇ, ಅರಳು. ಸಂತೋಷದಿಂದ ಮುಖವು ಅರಳುವುದೆಂದು ಹೇಳುವುದು ವಾಡಿಕೆ. ಮುಖವನ್ನು ತಾವರೆಗೆ ಹೋಲಿಸುವುದು ಕವಿಸಮಯವಾದುದರಿಂದ, ಇಲ್ಲಿ ಅರ್ಜುನನ ಅಸ್ತ್ರಕೌಶಲದ ಪ್ರಭಾವವನ್ನು ನೋಡಿ ದ್ರೋಣಭೀಷ್ಮಾದಿಗಳ ಮುಖಗಳು ಸಂತೋಷದಿಂದ ಅರಳಿದುವು

ತೊಳಗುವ ತೇಜಂ ತೊಳತೊಳ ।
ತೊಳಗುವ ದಿವ್ಯಾಸ್ತ್ರಮು*ಮರ್ದ ಕೋದಂಡಮಸುಂ- ॥
ಗೊಳಿಸೆ ಮನಂಗೊಳಿಸೆ ಭಯಂ- ।
ಗೊಳಿಸೆ ಸಭಾಸದರನುಱದೆ ಕರ್ಣಂ ಬಂದಂ ॥ ೫ ॥

---

ಎಂಬರ್ಥದಲ್ಲಿ 'ಅರಲ್ದ ತಾವರೆಯಿಂ ಪಿರಿದಾಗೆ' ಎಂದು ಹೇಳಿದೆ. 'ಒಂದೆಡೆ ದುರ್ಯೋಧನನ ಮೊಗಂ ತಲೆನವಿರ ಗಂಟಿಂ ಕಿಱಿದಾದಾಗ, ಮತ್ತೊಂದೆಡೆ ದ್ರೋಣ ಭೀಷ್ಮಾದಿಗಳ ಮೊಗಂ ಅರಲ್ದ ತಾವರೆಯಿಂ ಪಿರಿದಾಯ್ತು' ಪ್ರೇಕ್ಷಕರ ಮನೋಭಾವವು ಈ ಸ್ಥಿತಿಯಲ್ಲಿದ್ದಾಗ ಆ ಸಭಾಮಧ್ಯಕ್ಕೆ ಕರ್ಣನು ಬಂದ ಪರಿಯನ್ನು ಮುಂದೆ ವರ್ಣಿಸುತ್ತಾನೆ.

ತೊಳಗುವ ತೇಜಂ—ಇಂತೆಂದು ಕಂದಂ ॥ ತೊಳಗುವ ತೇಜಂ = ಪ್ರಕಾಶಿಸುತ್ತಿರುವ ಕಾಂತಿಯೂ, ತೊಳತೊಳತೊಳಗುವ ದಿವ್ಯಾಸ್ತ್ರಂ= ಚೆನ್ನಾಗಿ ಪ್ರಕಾಶಿಸುತ್ತಿರುವ ದಿವ್ಯಬಾಣಗಳೂ ('ತೊಳತೊಳ ತೊಳಗುವ' ಎಂಬಲ್ಲಿ 'ಅನುಕರಣಾರ್ಥದಲ್ಲಿ ತ್ರಿರುಕ್ತಿ'.) ಅಮರ್ದ ಕೋದಂಡಂ = ಕೈಯಲ್ಲಿ ಬಿಗಿಯಾಗಿ ಹಿಡಿದಿದ್ದ ಧನುಸ್ಸೂ [ಅಮರ್ (ಧಾತು)-ಗಾತ್ರಶ್ಲೇಷೇ-ಬಿಗಿಪಡಿಸು. ('ಅಮರ್ದಿರೆ'-ಶಿಥಿಲದ್ವಿತ್ವವು. ಕರ್ಣನ ಧನುಸ್ಸಿಗೆ ಕಾಲಪೃಷ್ಠವೆಂದು ಹೆಸರು. "ಕರ್ಣಸ್ಯಕಾಲಪೃಷ್ಠಂ ಶರಾಸನಂ" ಎಂದು ಅಮರಕೋಶದಲ್ಲಿದೆ. ಕನ್ನಡದಲ್ಲಿ 'ಕಾಳವಟ್ಟಂ' ಎಂದಿರಬೇಕು ಎಂಬುದು ಇದರಿಂದ ಸ್ಪಷ್ಟವಾಗುವುದು. 'ನಡೆಕೋಲ್ವರಮುಂದಂಬುರ । ದೆಡೆಯಂ ಪುಣ್ಗೊರ್ತು ಕಾಳವಟ್ಟದ ಕೊಪ್ಪಂ ॥ ಪಿಡಿದು ನೆಱಿಲ್ದ ಕರ್ಣಸುತಂ । ಗಿಡಿಗಂಪೊಯ್ಯೆನೊಂದ ಭುಜಗನಿರ್ಗಂತಿರ್ದಂ' ಎಂದು ನಾಗವರ್ಮನ ಕಾವ್ಯಾವಲೋಕನದ ೩೦೮ನೆಯ ಪದ್ಯದಲ್ಲಿ 'ಕಾಳವಟ್ಟ' ಎಂದೇ ಪ್ರಯೋಗವಿದ್ದರೂ, ಗದಾಯುದ್ಧದಲ್ಲಿಯೂ ಪಂಪಭಾರತದಲ್ಲಿಯೂ ಆ ಗ್ರಂಥಸಂಪಾದಕರು 'ತಾಳವಟ್ಟ' ಎಂಬುದನ್ನೇ ಇರಗೊಡಿಸಿ, ಪಂಪಭಾರತದ ನಿಘಂಟುವಿನಲ್ಲಿ "ತಾಳವಟ್ಟ-ತಾಳೆಯಗರಿಯ ಆಕಾರ ೧೨-೧೩೫ವ" ಎಂದು ಅರ್ಥಕೊಟ್ಟಿದ್ದಾರೆ. ಆದರೆ ಪಂಪಭಾರತದ ಕ. ಖ. ಗ. ಪ್ರತಿಗಳಲ್ಲಿರುವಂತೆ ಅಡಿಟಿಪ್ಪಣಿಯಲ್ಲಿ ಸೂಚಿಸಲ್ಪಟ್ಟಿರುವಂತೆ 'ಕಾಳವಟ್ಟ' ಎಂಬ ರೂಪವೇ ಸರಿಯಾದುದೆಂದು ತಿಳಿಯಬೇಕು ) ಸಭಾಸದರಂ= ಸಭಿಕರನ್ನು, ಅಸುಂಗೊಳಿಸೆ = ಶಕ್ತಿಗುಂದುವಂತೆ ಮಾಡಲು (ನಿಷ್ಪ್ರಭರನ್ನಾಗಿ ಮಾಡಲು) ಮನಂಗೊಳಿಸೆ= ಚಿತ್ತವನ್ನು ಆಕರ್ಷಿಸಲು, ಭಯಂಗೊಳಿಸೆ = ಭಯವುಂಟಾಗುವಂತೆ ಮಾಡಲು, ಉಱದೆ = ಲಕ್ಷ್ಯಮಾಡದೆ, ಕರ್ಣಂ ಬಂದಂ. (ಕರ್ಣನ ತೊಳಗುವ ತೇಜಂ ಸಭಾಸದರಂ ಅಸುಂಗೊಳಿಸೆ, ಆತನ ತೊಳತೊಳತೊಳಗುವ ದಿವ್ಯಾಸ್ತ್ರಂ ಸಭಾಸದರಂ ಮನಂಗೊಳಿಸೆ, ಆತನ ಕೋದಂಡಂ

ವ ॥ ಬಂದು ದ್ರೋಣಾಚಾರ್ಯಂಗೆ ಪೊಡೆಮಟ್ಟು ಶರಧಿಯಿಂ ದಿವ್ಯಾಸ್ತ್ರಂ
ಗಳನುರ್ಚಿಕೊಂಡು,

ಅರಿಗನ ಬಿಲ್ಬಲ್ಮೆಯೊಳಂ- ।
ದೆರಡಿಲ್ಲದೆ ಬಗೆದು ಮುಳಿಸುಮೇವಮುಮೆರ್ದೆಯೊಳ್ ॥
ಪರೆವಿರೆ ತೋಱಿದ ನಾಯತ ।
ಕರಪರಿಘಂ ಕರ್ಣನಾತ್ಮ ಶರಪರಿಣತಿಯಂ ॥ ೬ ॥

---

ಸಭಾಸದರಂ ಭಯಂಗೊಳಿಸೆ ಉಱಿದೆ ಕರ್ಣಂ ಬಂದಂ' ಎಂದು ಯಥಾಸಂಖ್ಯದಿಂದ ಅರ್ಥವನ್ನು ಹೊಂದಿಸಿಕೊಳ್ಳಬೇಕು. ಯಥಾಸಂಖ್ಯಾಲಂಕಾರವು ) ॥ ೫ ॥

ಬಂದು — ಇಂತೆಂದು ವಚನಂ ॥ ಬಂದು ದ್ರೋಣಾಚಾರ್ಯಂಗೆ, ಪೊಡೆಮಟ್ಟು = ನಮಸ್ಕರಿಸಿ [ಪೊಡೆಯಂಮಡು-ಪೊಡೆಮಡು (ಧಾತು) = ನಮಸ್ಕರಿಸು], ಶರಧಿಯಿಂ = ಬತ್ತಳಿಕೆಯಿಂದ (ಶರ-ಬಾಣಗಳ. ಧಿ-ಆಶ್ರಯವು) ದಿವ್ಯಾಸ್ತ್ರಂಗಳಂ ಉರ್ಚಿಕೊಂಡು = ದಿವ್ಯಬಾಣಗಳನ್ನು ಹೊರಕ್ಕೆ ತೆಗೆದುಕೊಂಡು. [ಉರ್ಚು (ಧಾತು) = ಆಕರ್ಷಣೇ-ಹೊರಕ್ಕೆತೆಗೆ]; ॥

ಅರಿಗನ — ಇಂತೆಂದು ಕಂದಂ ॥ ಅರಿಗನ = ವಿಕ್ರಮಾರ್ಜುನನ ('ಅರಿಗ'ನೆಂದು ಇಲ್ಲಿ 'ಅರಿಕೇಸರಿ'ರಾಜನ ಹೆಸರು. ಅಭೇದಪ್ರತಿಪತ್ತಿಯಿಂದ ಅರ್ಜುನನನ್ನು ಹೇಳಿದು ದೆಂದು ತಿಳಿಯಬೇಕು ) ಬಿಲ್ಬಲ್ಮೆಯೊಳ್ = ಬಿಲ್ವಿದೆಯ ಸಾಮರ್ಥ್ಯದಲ್ಲಿ, ಅಂದು; ಎರಡಿಲ್ಲದೆ ಬಗೆದು = ಏಕಪ್ರಕಾರವಾಗಿ ಭಾವಿಸಿ, ಒಂದೇ ರೀತಿಯಲ್ಲಿ, ಏನೂ ವ್ಯತ್ಯಾಸ ವಿಲ್ಲದೆ, (ಇಲ್ಲಿ 'ಅರಿಗನ ಬಿಲ್ಬಲ್ಮೆಯೊಳಂದೆರಡಿಲ್ಲದೆ ಪಗೆದು' ಎಂದಿದ್ದರೆ ಚೆನ್ನಾಗಿತ್ತು; ಆಗ, 'ಎರಡಿಲ್ಲದೆ ಪಗೆದು'-'ಏಕಪ್ರಕಾರವಾಗಿ ವಿರೋಧಿಸಿ, ಒಂದೇ ರೀತಿಯಾಗಿ ವೈರ ವನ್ನು ತಾಳಿ' ಎಂದು ಅರ್ಥಹೇಳುವುದಕ್ಕಿಲ್ಲಿ ಔಚಿತ್ಯವಿದೆ.) ಮುಳಿಸುಂ ಏವಮುಂ = ಕೋಪವೂ ಮತ್ಸರವೂ, ಎರ್ದೆಯೊಳ್ ಪರೆದಿರೆ = ಅಂತರಂಗದಲ್ಲಿ ಹರಡಿರಲು (ಹೃದಯ ವನ್ನು ಸಂಪೂರ್ಣವಾಗಿ ಆವರಿಸಿಕೊಂಡಿರಲು ಎಂದು ತಾತ್ಪರ್ಯವು), ಆಯತಕರಪರಿಘಂ ಕರ್ಣಂ =(ಆಯತ- ದೀರ್ಘವಾದ, ಕರಪರಿಘಂ-ತೋಳುಗಳೆಂಬ ಅಗುಳಿಯುಳ್ಳವ ನಾದ) ದೀರ್ಘವಾದ ಕರಪರಿಘವುಳ್ಳ ಕರ್ಣನು; ಆತ್ಮಶರಪರಿಣತಿಯಿಂ ತನ್ನ ಅಸ್ತ್ರ ಕೌಶಲದಿಂದ, ತೋಱಿದಂ= ಮೆರೆದು ಕಂಗೆಸೆದನು (ಕರ್ಣಂ ಆತ್ಮಶರಪರಿಣತಿಯಿಂ ತೋಱಿದಂ' ಎಂಬಲ್ಲಿ ಶರಪರಿಣತಿಯಂತೋಱಿದಂ' ಅಸ್ತ್ರಕೌಶಲವನ್ನು ಪ್ರದರ್ಶಿಸಿ ದನು' ಎಂಬುದಾಗಿ ವಿಭಕ್ತಿರೂಪವನ್ನು ಮಾರ್ಪಡಿಸಿಕೊಂಡು ಅರ್ಥಹೇಳಬಹುದು ಆದರೆ, ಹಿಂದೆ 'ಅವರ್ ಅಸ್ತ್ರಕೌಶಲದೆ ಬೆಡಂಗೊದವಿರೆ ತೋಱಿದರ್' ಎಂಬಲ್ಲಿ

ವ ॥ ಅಂತು ತೋಱಿಯುಮೆರ್ದೆಯ ಮುಳಿಸು ನಾಲಗೆಗೆವರೆ ಸ್ಯೆರಿಸ
ಲಾಱದೆ ವಿದ್ವಿಷ್ಟವಿದ್ರಾವಣನನಿಂತೆಂದಂ —

ಸಂಗತದಿನೀಗಳಿಂತೀ
ರಂಗಮೆ ರಣರಂಗಮಾಗೆ ಕಾದುವಮಳವಂ ॥
ಪೊಂಗದಿರಿದಿರ್ಚದೀಂ ಗಳ ।
ರಂಗಂ ಬೊಕ್ಕಾಡುವಂತೆ ಪೆಂಡಿರೆ ಗಂಡರ್ ॥ ೭ ॥

'ಅಸ್ತ್ರಕೌಶಲದೆ- ಅಸ್ತ್ರಕೌಶಲದಿಂದ' ಎಂದು ತೃತೀಯೆಯನ್ನು ಸ್ಪಷ್ಟವಾಗಿ ಪ್ರಯೋಗಿಸಿ ಎಂಬ ಕ್ರಿಯೆಯನ್ನು ಹೇಳಿದುದರಿಂದ 'ತೋಱಿದರ್' = ಎಂಬುದಕ್ಕೆ 'ಮೆರೆದು ಕಂಗೆಸೆದರು', 'ಪ್ರದರ್ಶಿಸಿ ಮೆರೆದರು' ಎಂದು ಅರ್ಥವಾಡಿದಂತೆ, ಇಲ್ಲಿಯೂ ಅದೇ ರೀತಿಯಲ್ಲಿ 'ಶರಪರಿಣತಿಯಿಂ ತೋಱಿದಂ' ಎಂಬ ಪಾಠವನ್ನೇ ಒಪ್ಪಿಕೊಂಡು, 'ಶರ ಪರಿಣತಿಯಿಂ' ಎಂದು ತೃತೀಯೆಯನ್ನು ಯೋಜಿಸಿ 'ತೋಱಿದಂ'–'ಮೆರೆದು ಕಂಗೆಸೆದನು' ಎಂದು ಅರ್ಥವಾಡಲಾಗಿದೆ ) 'ಆಯತಕರಿಪರಿಘಂ' ಎಂಬುದು 'ಕರ್ಣಂ' ಎಂಬುದಕ್ಕೆ ವಿಶೇಷಣವು ಆಯತಕರ'ವನು 'ಪರಿಘ'ವೆಂದು ರೂಪಿಸಿದೆ. ॥ ೬ ॥

ಅಂತು — ಇಂತೆಂಬ ವಚನಂ‍! ಅಂತು ತೋಱಿಯುಂ, ಎರ್ದೆಯ ಮುಳಿಸು ನಾಲಗೆಗೆವರೆ - ಅಂತರಂಗದ ಕೋಪವು ನಾಲಗೆಗೆ ಬರಲು (ಹೃದಯದಲ್ಲಿ ಬಯ್ತಿದ ಮತ್ಸರವು ನಾಲಗೆಯಿಂದ ಮಾತನಾಡಿಸಿತು ಎಂದು ಭಾವವು 'ವರೆ' ಎಂಬಲ್ಲಿ 'ಬ'ಕಾರಕ್ಕೆ 'ವ ಕಾರಾದೇಶವು ವಾಕ್ಯದಲ್ಲಿ 'ಪ'ವರ್ಗದ ನೆಲೆಗೆ ವಕಾರಾಗಮವು ) ಸ್ಯೆರಿಸಲಾಱದೆ, ವಿದ್ವಿಷ್ಟವಿದ್ರಾವಣನಂ= ವಿಕ್ರಮಾರ್ಜುನನನ್ನು ಕುರಿತು (ವಿದ್ವಿಷ್ಟ ವಿದ್ರಾವಣಂ— ವೈರಿಗಳನ್ನು ಕರಗಿಸುವವನು, ನಾಶಪಡಿಸುವವನು ಎಂಬರ್ಥದ, ವಿಶೇಷಣವು'. 'ಅರಿಕೇಸರಿ' ರಾಜನ ಬಿರುದುಗಳಲ್ಲೊಂದು. ಪಂಪನು ಇದನ್ನು "ತನಗಿದಿರನದಿರದೊಡ್ಡಿದ ವಿದ್ವಿಷ್ಟಬಲಂ ನೋಡೆ ನೋಡೆ ಕರಗುವುದಱಿಂ ವಿದ್ವಿಷ್ಟ ವಿದ್ರಾವಣನುಂ" ಪಂ ಭಾ ೧೪|೩೭ ವಚನದಲ್ಲಿ ಸ್ಪಷ್ಟಪಡಿಸಿದ್ದಾನೆ ಇಲ್ಲಿ ಈ ವಿಶೇಷಣವು ಅಭೇದಪ್ರತಿಪತ್ತಿಯಿಂದ ಅರ್ಜುನನಿಗೆ ಅನ್ವಯಿಸತಕ್ಕದ್ದು ) ಇಂತೆಂದಂ ಹೀಗೆಂದನು ॥

ಸಂಗತದಿಂ ಇಂತೆಂದು ಕಂದಂ ॥ ಸಂಗತದಿಂ= ಪರಸ್ಪರ ಹೊಂದಿಕೆಯಿಂದ, ಈಗಳ್- ಈಗ, ಇಂತು ಈ ರಂಗಮೆ ರಣರಂಗಮಾಗೆ= ಹೀಗೆ ಈ ವ್ಯಾಯಾಮರಂಗವೇ ಯುದ್ಧರಂಗವಾಗಿ, ಕಾದುವಂ= (ನಾವು) ಕಾದುವ, ಯುದ್ಧ ಮಾಡುವ ['ಕಾದುವಂ' ವಿಧ್ಯರ್ಥದ ಯುಗಪದುಕ್ತಿಯಲ್ಲಿ ಮಧ್ಯಮೋತ್ತಮ ಪುರುಷ ಗಳ ಬಹುವಚನದಲ್ಲಿ 'ಕಾದು' ಎಂಬ ಧಾತುಗೆ 'ಅವರ್' ಆಗಮವಾಗಿ 'ಕಾದುವಂ'- (ನೀನೂ ನಾನೂ ಕಾದೋಣ' ಎಂದಾಯಿತ್ತು "ವಿಧ್ಯರ್ಥಕ್ಕೆ ಮಧ್ಯಮೋತ್ತಮ ಪುರುಷ ॥ ಪ್ರಗತ ಬಹೂಕ್ತಿಯೊಳಿವುಮನುಂ । ದೊಗೆತಕುಂ ಯುಗಪದುಕ್ತಿಯೊಳ್

ವ । ಎಂಬುದುಮತಿರಥಮಥನನಿಂತೆಂದಂ—

ಈ ನೆರೆದ ಗುರುಜನಂಗಳ ।
ಮಾನಿನಿಯರ ಮುಂದೆ ಕರ್ಣ ಪೊಲ್ಲದು ನುಡಿದೈ ॥
ನೀನೆನ್ನೀ ನಿಡುದೋಳ್ಗಳ ।
ತೀನಂ ಮಟ್ಗಿಸುವೆಯಪ್ಪೊಡಾನೊಲ್ಲದನೇ ॥ ೮ ॥

---

ಕ್ರಮದಿಂದಂ" ॥ ಶ. ಮ ದ. ಸೂತ್ರಂ ॥ ೨೫ ॥ ] ಅಳವಂ ಪೊಂಗದಿರ್= ಸಾಮರ್ಥ್ಯವನ್ನು ಉಬ್ಬಿಸಿ ತೋರಬೇಡ. [ಪೊಂಗು (ಧಾತು)-ಸ್ಫುಟನೇ, ಹೊರ ಹೊಮ್ಮು] ಇದಿರ್ಚದೆ= ಎದುರೊಡ್ಡದೆ, ಪ್ರತಿಭಟಿಸದೆ, ರಂಗಂಬೊಕ್ಕು ಆಡು ವಂತೆ= ಬರೇ ರಂಗವನ್ನು ಹೊಕ್ಕು ಆಡುವಹಾಗೆ, ಗಂಡರ್= ವೀರರಾದವರು, (ರಂಗಮಂ ಪೊಕ್ಕು— ರಂಗಂಬೊಕ್ಕು) ಪೆಂಡಿರೆಪಂಗಳ= ಅಬಲೇಯರೇನೋ ! ಹೆಂಡಿರೇನು ? (ರಂಗದಲ್ಲಿ ವೀರರಾದವರು ಎದುರೆದುರಾಗಿ ಕಾದಾಡಬೇಕಾದುದು ಸಹಜವಾಗಿರುವಲ್ಲಿ, ಹೀಗೇ ನಾಟ್ಯವಾಡುವಂತೆ ಆಡಿದರೆ, ಗಂಡುತನಕ್ಕೆ ಕೊರತೆ ಯಲ್ಲವೇ ಎಂದು ಕರ್ಣನ ಕುತ್ಸನೆಯ ಮಾತು ಇದರಿಂದ ಅರ್ಜುನನನ್ನು ಕರ್ಣನು ಕೆಣಕಿ ಯುದ್ಧಕ್ಕೆ ಕರೆದಂತಾಯ್ತು. ಆದುದರಿಂದಲೇ, ಅರ್ಜುನನು ಅದಕ್ಕೆ ತಕ್ಕ ಪ್ರತ್ಯುತ್ತರವನ್ನು ಮುಂದೆಹೇಳುತ್ತಾನೆ.) ॥ ೭ ॥

ಎಂಬುದುಂ— ಇಂತೆಂದು ವಚನಂ ॥ ಎಂಬುದುಂ= (ಕರ್ಣನು ಹೀಗೆ) ಹೇಳಿದಾಗ, ಅತಿರಥಮಥನಂ= ವಿಕ್ರಮಾರ್ಜುನನು ('ಅತಿರಥಮಥನಂ' ಎಂಬುದೂ 'ಅರಿಕೇಸರಿ' ರಾಜನ ವಿಶೇಷಣಗಳಲ್ಲೊಂದು ಅಭೇದ ಪ್ರತಿಪತ್ತಿಯಿಂದ ಅರ್ಜು ನನಿಗೆ= ಅನ್ವಯಿಸಿಕೊಳ್ಳತಕ್ಕದ್ದು ಅತಿರಥ-(ವೈರಿಗಳಾದ) ಅತಿರಥರನ್ನು, ಮಥ ನಂ-ಧ್ವಂಸಮಾಡುವವನು ಎಂದರ್ಥವು. 'ಅಮಿತಾನ್ ಯೋಧಯೇದ್ಯಸ್ತು ಸಂ ಪ್ರೋಕ್ತೋತಿರಥಸ್ತುಸಃ' ಎಂಬುದರಿಂದ, ಮಿತಿಯಿಲ್ಲದಷ್ಟು ಮಂದಿ ವೈರಿಗಳೊಡನೆ ಯಾವ ವೀರಯೋಧನು ರಥದಲ್ಲಿ ಕುಳಿತುಕೊಂಡು ಏಕಾಂಗಿಯಾಗಿ ಕಾದುವನೋ ಅಂತಹನು 'ಅತಿರಥ'ನೆನ್ನಿಸಿಕೊಳ್ಳುವನು ಮಹಾ ಭಾರತದ ಉದ್ಯೋಗಪರ್ವದಲ್ಲಿ ಅನೇಕ ಅತಿರಥರ ಹೆಸರುಗಳು ಉಲ್ಲೇಖಿಸಲ್ಪಟ್ಟಿವೆ ರನ್ನನ ಗದಾಯುದ್ಧದಲ್ಲಿ "ನರನುಂ ನರನಂದನನುಂ। ಗುರುವುಂ ಗುರುಸುತನು ಮಾರ್ಯಭೂರಿಶ್ರವನುಂ ॥ ಸುರಸಿಂಧುಸುತನುಮಿಂತಱು। ವರು ಮತಿರಥರಲ್ತೆ ಕುರುಕುಲಾಂಬರಭಾನೂ" (೩।೫೦) ಎಂದು, ಅರ್ಜುನ-ಅಭಿಮನ್ಯು-ದ್ರೋಣ-ಅಶ್ವತ್ಥಾಮ- ಭೂರಿಶ್ರವಸ್ಸು- ಭೀಷ್ಮ ಎಂಬೀ ಆರುಮಂದಿಯನ್ನು ಅತಿರಥರೆಂದು ಪರಿಗಣಿಸಿರುವುದನ್ನು ನೋಡ ಬಹುದು. ಇಲ್ಲಿ ಅರ್ಜುನನು 'ಅತಿರಥ ಮಥನಂ' ಎಂಬುದರಿಂದ ಅತಿರಥರನ್ನೇ ಮಥನಮಾಡುವವನಾದುದರಿಂದ, ಅತಿರಥರಿಗಿಂತಲೂ ಬಲಸಾಮರ್ಥ್ಯಗಳಲ್ಲಿ ಮಿಗಿ ಲಾದವನೆಂದರಿಯಬೇಕು ) ಇಂತೆಂದಂ= ಹೀಗೆಂದನು ॥

ಈ ನೆರೆದ— ಇಂತೆಂದು ಕಂದಂ ॥ ಕರ್ಣ— ಎಲಾ ಕರ್ಣನೇ, ಈ ನೆರೆದ ಗುರುಜನಂಗಳ ಮಾನಿನಿಯರ ಮುಂದೆ= ಇಲ್ಲಿ ನೆರೆದಿರುವಹಿರಿಯರ ಮತ್ತು ಸ್ತ್ರೀ

ವ ॥ ಎಂಬುದುಂ ದ್ರೋಣನುಂ ಕೃಪನುಮೆಡೆಗೆವಂದು ಕರ್ಣನನಿಂತೆಂದರ್-

ಏವದ ಮುಳಿಸಿನ ಕಾರಣ- ।
ಮಾವುದೊ ನೀಂ ನಿನ್ನ ತಾಯ ತಂದೆಯ ದೆಸೆಯಂ ॥
ಭಾವಿಸದೆ ಕರ್ಣ ನುಡಿವಂ- ।
ತಾವುದು ಸಮಕಟ್ಟು ನಿನಗಮರಿಕೇಸರಿಗಂ ॥ ೯ ॥

---

ಯುರ ಮುಂದೆ, ಪೊಲ್ಲದು ನುಡಿದೈ=(ನೀನು) ಹೀನವಾಗಿ ಮಾತಾಡಿದೆ ನೀನ್ ಎನ್ನ ಈ ನಿಡುದೋಳ್ಗಳ=ನೀನು ನನ್ನೀ ದೀರ್ಘಬಾಹುಗಳ (ನಿಡಿಯುವು) ತೋಳ್ಗಳ್-ನಿಡುದೋಳ್ಗಳ್ ವಿಶೇಷಣ ಪೂರ್ವಪದ ಕರ್ಮಧಾರಯ ಸಮಾಸವು. ಉದ್ದವಾದ ತೋಳುಗಳು (ಆಜಾನುಬಾಹುಗಳು) ಮೊಣಕಾಲ್ವರೆಗೆ ನೀಡಿರುವ ತೋಳುಗಳು ರಾಜಲಕ್ಷಣವು, ತೀನಂ=ತೀಟೆಯುನ್ನು, ತುರಿಸುವಿಕೆಯುನ್ನು (ತೀನ್-ತೀಟೆ), ಮುಟ್ಟಿಗುಸುವೆಯಪ್ಪೊಡೆ=ಹೋಗಲಾಡಿಸುವೆಯಾದರೆ [ಮುಟ್ಟಿಗುಸು (ಧಾತು)-ನಾಶಪಡಿಸು, ತಗ್ಗಿಸು, ಕಮ್ಮಿಮಾಡು] ಆನ್ ಒಲ್ಲದನೇ=ನಾನು ಒಪ್ಪದವನೇ? ಎಂಬುದರೊಡನೆ ಹೋಲಿಸಿರಿ. ಉತ್ತರಾರ್ಧದಲ್ಲಿ ಪರ್ಯಾಯೋಕ್ತವೆಂಬ ಅಲಂಕಾರವಿದೆ ॥ ೮ ॥

ಎಂಬುದುಂ—ಇಂತೆಂದು ವಚನಂ ॥ ಎಂಬುದುಂ=ಅರ್ಜುನನು ಹೀಗೇದಾಗ, ದ್ರೋಣನುಂ ಕೃಪನುಂ=ದ್ರೋಣಾಚಾರ್ಯನೂ ಕೃಪಾಚಾರ್ಯನೂ, ಎಡೆಗೆವಂದು=ಮಧ್ಯೇಪ್ರವೇಶಿಸಿ, ಅವರಿಬ್ಬರ ನಡುವೆ ಬಂದು, ಕರ್ಣನಂ ಇಂತೆಂದರ್=ಕರ್ಣನನ್ನು ಕುರಿತು ಹೀಗೆಂದರು ॥

ಏವದ—ಇಂತೆಂದು ಕಂದಂ ॥ ಕರ್ಣ=ಎಲಾ ಕರ್ಣ! ಏವದ ಮುಳಿಸಿನ ಕಾರಣಂ ಆವುದೊ?=ಮತ್ಸರದ ಕೋಪದ ಕಾರಣವೇನೊ? ನೀಂನಿನ್ನ ತಾಯ ತಂದೆಯ ದೆಸೆಯಂ ಭಾವಿಸದೆ ನುಡಿವಂತು=ನೀನು ನಿನ್ನ ತಾಯಿತಂದೆಗಳಾರೆಂಬುದನ್ನು ಯೋಚಿಸದೆ ಮಾತಾಡುವ ಹಾಗೆ, ನಿನ್ನ ಕುಲವನ್ನು ವಿಚಾರಿಸದೆ ಮಾತಾಡುವಂತೆ, ನಿನಗಂ ಅರಿಕೇಸರಿಗಂ=ನಿನಗೂ ವಿಕ್ರಮಾರ್ಜುನನಿಗೂ, ('ಅರಿಕೇಸರಿ' ಯೆಂಬುದು ಪಂಪನ ರಾಜನ-ಸ್ವಾಮಿಯ ಹೆಸರು 'ಅರಿ' ಶತ್ರುಗಳಿಗೆ, 'ಕೇಸರಿ'-ಸಿಂಹದಂತಿರುವವನು ಎಂದರ್ಥವು ಅಭೇದ ಪ್ರತಿಪತ್ತಿಯಿಂದ ಇಲ್ಲಿ ಅರ್ಜುನನಿಗೆ ಅನ್ವಯಿಸುವುದೆಂದು ತಿಳಿಯಬೇಕು 'ಅರಿಕೇಸರಿ'ಯೆಂಬ ಹೆಸರು ತನ್ನ ರಾಜನಿಗೆ 'ಅರಿಕರಿಗಳಂಪಡಲ್ವಡಿಸುವ ಛೀರದೊಳರಿಕೇಸರಿಯುಮಾಗಿ" (ಪಂ ಭಾ ೧೪|೩೭) ಎಂಬ ವಚನದಲ್ಲಿ ಪಂಪನು ವಿವರಿಸಿದ್ದಾನೆ) ಸಮಕಟ್ಟು ಆವುದು=ಸಮಾನ ಯೋಗ್ಯತೆಯಾವುದು? ಏನು ಹೋಲಿಕೆಯುಂಟು? ಕುಲವನ್ನು ವಿಚಾರಿಸಿದರೆ, ನೀನು ಸರ್ವಥಾ ಅರ್ಜುನನಿಗೆ ಸಮಾನಯೋಗ್ಯತೆಯುವನಲ್ಲ, ಹೀಗಿರುವಲ್ಲಿ ಅತನೊಡನೆ ನೀನು ಎದುರಿಸಿ ನಿಲ್ಲುವುದು ಸರಿಯಲ್ಲ ಎಂದು ದ್ರೋಣಕೃಪರು ಕರ್ಣನ ಕುಲಹೀನತೆಯನ್ನು ನೆಪಮಾಡಿ ಮೂದಲಿಸಿದರು ಕರ್ಣನು ಅವಾಕ್ಕಾಗಬೇಕಾಯ್ತು ॥ ೯ ॥

ವ ॥ ಎಂಬುದುಮಾ ಮಾತಿಂಗೆ ಮಱುಮಾತುಗುಡಲಱಿಯದೆ ಪಂದೆಯಂ ಪಾವಡರ್ದಂತುಮ್ಮನೆ ಬೆಮರ್ತುರ್ಮಿರ್ದ ಕರ್ಣನಂ ದುರ್ಯೋಧನಂ ಕಂಡು ದ್ರೋಣನುಮಂ ಕೃಪನುಮನಿಂತೆಂದಂ—

ಕುಲಮೆಂಬುದುಂಟೆ ಬೀರಮೆ ।
ಕುಲಮಲ್ಲದೆ ಕುಲಮನಿಂತು ಪಿಕ್ಕದಿರಿಂ ನೀ- ॥
ಮೊಲಿದೆಲ್ಲಿ ಪುಟ್ಟಿ ಬಳೆದಿರೊ ।
ಕುಲಮಿರ್ದುದೆ ಕೊಡಮೊಳಂ ಶರಸ್ತಂಬದೊಳಂ ॥ ೧೦ ॥

---

ಎಂಬುದುಂ— ಇಂತೆಂದು ವಚನಂ ॥ ಎಂಬುದುಂ= (ದ್ರೋಣನೂ ಕೃಪನೂ ಹೀಗೆ) ಹೇಳಿದಾಗ, ಆ ಮಾತಿಂಗೆ= ಆ ನುಡಿಗೆ, ಮಱುಮಾತುಗುಡಲ್ ಅಱಿಯದೆ= ಪ್ರತ್ಯುತ್ತರವನ್ನು ಕೊಡಲಿಕ್ಕೆ ತಿಳಿಯದೆ, [ಮಱುಮಾತು= ಮಱು+ಮಾತು) ಮಾರ್ನುಡಿ, ಪ್ರತ್ಯುತ್ತರವು ಮಱುಮಾತಂ+ಕುಡಲ್ = ಮಱುಮಾತುಗುಡಲ್]ಪಂದೆಯಂ ಪಾವು ಅಡರ್ದಂತೆ= ಹೇಡಿಯನ್ನು ಹಾವು ಅಡರಿದ ಹಾಗೆ (ಹಳಗನ್ನಡ ಕಾವ್ಯಗಳಲ್ಲಿ 'ಪಂದೆಯಂ ಪಾವಡರ್ದಂತೆ' ಎಂಬ ಉಪಮೆಯು ಹಲವೆಡೆಗಳಲ್ಲಿ ಬಂದಿದೆ ಮೊದಲೇ ಹೇಡಿಯಾಗಿದ್ದವನ ಮೇಲೆ ಫಕ್ಕನೆ ಹಾವು ಬಿದ್ದರೆ, ಆ ಹೇಡಿಯು ಹೇಗೆ ಭಯಗ್ರಸ್ತನಾಗುವನೋ ಹಾಗೆ) ಉಮ್ಮನೆ= ದಿಙ್ಮೂಢನಾಗಿ ('ಉಮ್ಮನೆ'–ಅನುಕರಣ–ಅವ್ಯಯವು) "ಕೃಷ್ಣೋರಗನಂ ಪಿಡಿದ ಬೆಳ್ಳಾಳಂತುಮ್ಮನೆ ಬೆಮರುತ್ತುಮಿರ್ದದುಶ್ಶಾಸನನುಮಂ"— ಪಂ. ಭಾ. ೬।೫೫) ಎಂಬುದರೊಡನೆ ಹೋಲಿಸಿರಿ ಬೆಮರುತ್ತುಂ= ಬೆವರುತ್ತಾ ಇದ್ದ ಕರ್ಣನನ್ನು, ದುರ್ಯೋಧನಂ ಕೈಕೊಂಡು= ದುರ್ಯೋಧನನು ತನ್ನ ಪಕ್ಷಕ್ಕೆ ಸ್ವೀಕರಿಸಿಕೊಂಡು; ದ್ರೋಣನುಮಂ ಕೃಪನುಮಂ ಇಂತೆಂದಂ= ದ್ರೋಣನನ್ನೂ ಕೃಪನನ್ನೂ ಕುರಿತು ಹೀಗೆಂದನು ॥

ಕುಲಮೆಂಬುದುಂಟೆ— ಇಂತೆಂದು ಕಂದಂ ॥ ಬೀರಮೆ ಕುಲಂ ಅಲ್ಲದೆ= ಶೂರತನವೇ ಕುಲವಲ್ಲದೆ, ಕುಲಂ ಎಂಬುದು ಉಂಟೆ= ಕುಲವೆನ್ನುವುದು ಬೇರೆಯುಂಟೆ ಇಂತು= ಈ ರೀತಿಯಲ್ಲಿ, ಕುಲಮಂ ಪಿಕ್ಕದಿರಿಂ= ಕುಲದ ವಿಷಯವನ್ನು ಬಿಚ್ಚಿ ಹೇಳದಿರಿರಿ [ಪಿಕ್ಕು (ಧಾತು)–ವಿವರಣೆ ಬಿಡಿಸು] ನೀಂ ಒಲಿದುಎಲ್ಲಿ ಪುಟ್ಟಿ ಬಳೆದಿರೋ= ನೀವಾದರೂ ಎಲ್ಲಿ ಹುಟ್ಟಿ ಬಳೆದಿರೋ (ಯೋಚಿಸಿರಿ) ಕೊಡದೊಳಂ ಶರಸ್ತಂಬದೊಳಂ ಕುಲಂ ಇರ್ದುದೆ?= ಕೊಡದಲ್ಲಿಯೂ ಶರಸ್ತಂಬದಲ್ಲಿಯೂ ಕುಲವಿದ್ದಿತೋ? (ಶರಸ್ತಂಬ= ನೊಸೆ ಹುಲ್ಲಿನ ಪೊದೆ) ದ್ರೋಣನು ಕೊಡದಲ್ಲಿಯೂ, ಕೃಪನು ಶರಸ್ತಂಬದಲ್ಲಿಯೂ ಹುಟ್ಟಿದ್ದುದರಿಂದ, ಈ ಮಾತು ದ್ರೋಣಕೃಪರಿಗೆ ಮರ್ಮಭೇದಕವಾದುದು.

ಅವರು ಕರ್ಣನ ತಾಯಿ ತಂದೆಯ ದೆಸೆಯಿಂ ಭಾವಿಸಿ ನುಡಿದುದರಿಂದ, ಕರ್ಣನ ಪರವಾಗಿ ದುರ್ಯೋಧನನೂ ದ್ರೋಣಕೃಪರ ಉತ್ಪತ್ತಿಸ್ಥಾನವನ್ನು ಹೀನವಾಗಿ ಭಾವಿಸಿ, 'ಕುಲಮಿರ್ದುದೆ ಕೊಡದೊಳಂ ಶರಸ್ತಂಬದೊಳಂ' ಎಂದು ಮೂದಲಿಸಿದನು. ಸಂಸ್ಕೃತ ಮಹಾಭಾರತದಲ್ಲಿ ಈ ಪ್ರಸ್ತಾನದಲ್ಲಿ ದುರ್ಯೋಧನನ ಮಾತು ಬೇರೆ ರೀತಿಯಾಗಿದೆ. ಅಲ್ಲಿ ದುರ್ಯೋಧನನು ದ್ರೋಣಕೃಪರನ್ನುದ್ದೇಶಿಸಿ "ಆಚಾರ್ಯ! ತ್ರಿವಿಧಾ ಯೋನೀ ರಾಜ್ಞಾಂ ಶಾಸ್ತ್ರವಿನಿಶ್ಚಯೇ । ಸತ್ಕುಲೀನಶ್ಚ ಶೂರಶ್ಚಯಶ್ಚ ಸೇನಾಂ ಪ್ರಕರ್ಷತಿ ॥ ಯದ್ಯಯಂ ಫಾಲ್ಗುಣೋ ಯುದ್ಧೇ ನಾರಾಜ್ಞಾ ಯೋದ್ಧುಮಿಚ್ಛತಿ । ತಸ್ಮಾದೇಷೋಽಙ್ಗವಿಷಯೇ ಮಯಾರಾಜ್ಯೇಽಭಿಷಿಚ್ಯತೇ"—"ಆಚಾರ್ಯರೇ, ಶಾಸ್ತ್ರಸಮ್ಮತಿ ಮೇರೆಗೆ ಅರಸರಲ್ಲಿಸತ್ಕುಲೀನನೆಂದೂ, ಶೂರನೆಂದೂ, ಸೇನಾನಾಯಕನೆಂದೂ ಕುಲೋತ್ಪತ್ತಿಯು ಮೂರು ತೆರನಾಗಿರುವುದು. ಈ ಯರ್ಜುನನು ಅರಸನಲ್ಲದವನೊಡನೆ ಪ್ರತಿಭಟಿಸಲು ಇಚ್ಛಿಸುವುದಿಲ್ಲವಾದರೆ, ಇದೋ ಈ ಕರ್ಣನನ್ನು ನಾನು ಅಂಗರಾಜ್ಯಕ್ಕೆ ಒಡೆಯನನ್ನಾಗಿ ಮಾಡುವೆನು." ಎಂದು ಹೇಳಿರುವುದಾಗಿದೆ. 'ಕೊಡದೊಳಂ'—ಮಡಕೆಯಲ್ಲಿ, ದ್ರೋಣದಲ್ಲಿ, ಈ ವಿಚಾರವು ಪಂಪಭಾರತದಲ್ಲಿ-"ಮಾಣದೆ ಸೂರ್ವಿಂದ್ರಿಯಮಂ ದ್ರೋಣದೊಳಾಂತಲ್ಲಿ ಯೊಗೆದ ಶಿಶುವಂಕಂಡೀ ॥ ದ್ರೋಣದೊಳೆ ಪುಟ್ಟಿದೀತಂ । ದ್ರೋಣನೆ ಪೋಗೆಂದು ಪೆಸರನಿಟ್ಟಂ ಮುನಿಪಂ" (೨।೪೩) ಎಂಬುದನ್ನು ನೋಡಿರಿ. "ಶರಸ್ತಂಬದೊಳಂ—" ಕೃಪನು ಶರಸ್ತಂಬದಲ್ಲಿ ಹುಟ್ಟಿದವನು. ಪಂಪಭಾರತದಲ್ಲಿ ಕೃಪನ ಜನ್ಮವೃತ್ತಾಂತವನ್ನು ಪಂಪನು ಹೀಗೆ ಹೇಳಿದ್ದಾನೆ—" ಗಂಗಾದ್ವಾರದೊಳ್ ಮಾಯಾಪುರಮೆಂಬ ಋಷ್ಯಾಶ್ರಮದೊಳ್ ಗೌತಮನೆಂಬಂ ಬ್ರಹ್ಮರ್ಷಿ ತಪಂಗೆಯ್ಯುತಿರ್ಪಿನಮಾಋಷಿಗ ಬಿಲ್ಲುಮಂಬುಂವೆರಸೊರ್ವಮಗಂ ಪುಟ್ಟಿದನಾತಂಗೆ ಶರದ್ವತನೆಂದು ಪೆಸರನಿಟ್ಟು ನಡಪೆ ಬಳೆದು ತಪಂಗೆಯ್ವಾತನಲ್ಲಿಗೆ ಜಲಕ್ರೀಡಾನಿಮಿತ್ತದಿಂದಿಂದ್ರನಚ್ಚರಸೆ ಜಲಚರಿಯೆಂಬವಳ್ ಬಂದೊಡಾಕೆಯಂ ಕಂಡು ಕಾಮಾಸಕ್ತಚಿತ್ತನಾಗಿ ಕೂಡಿ-"ಒಗೆದ ಶರಸ್ತಂಬದೊಳಿರ್ದಗಿಯಾಗಿ ಮನೋಜರಾಗರಸಮುಗುತರೆ ತೊಟ್ಟಗೆ ಬಿಸುಟು ಬಿಲ್ಲನಂಬುಮ । ನಗಲ್ವನಾಶ್ರಮಧಿನುದಿತ ಲಜ್ಜಾವಶದಿಂ ।" ಅನ್ನೆಗವನಾತಪೋವನಕ್ಕೆ ಬೇಂಟೆಯಾಡಲ್ ಬಂದ ಶಂತನುವಿನೊಡನೆಯಿವರ್ ಶರಸ್ತಂಬದೊಳ್ ಪರಕಲಿಸಿರ್ದ ಮುನೀಂದ್ರನಿಂದ್ರಿಯದೊಳೊಗೆದ ಪೆಣ್ಗೂಸುಮಂ ಗಂಡುಗೂಸುಮನವಱಕೆಲದೊಳಿರ್ದ ದಿವ್ಯಶರಾಸನಶರಂಗಳುಮಂ ಕಂಡು ಕೊಂಡು ಪೋಗಿ ಶಂತನುಗೆ ತೋಱಿದೊಡಾತನುಮಾತಿಶುದ್ಧಯುಮಂ ನಿಜಗಜಪುರಕ್ಕುಯ್ದು ಕೃಪೆಯಿಂ ನಡಪಿದನಪ್ಪುದಱಿಂಕೃಪನುಂ ಕೃಪೆಯುಮೆಂದು ಪೆಸರನಿಟ್ಟು ನಡಪುತ್ತಿರ್ಪನ್ನೆಗಮವರಯ್ಯಂ ಶರದ್ವತನಲ್ಲಿಗೆ ಬಂದು ಕಿಱಿಯಾತಂಗೆ ಚೌಲೋಪನಯನಾದಿ ಕ್ರಿಯೆಗಳಂ ಮಾಡಿ ಧನುರ್ವಿದ್ಯೋಪದೇಶಂಗೆಯ್ಯೆ ಸರ್ವವಿದ್ಯಾವಿಶಾರದನಾದನಾಕೃಪಾಚಾರ್ಯರ

ವ ॥ ಎಂದು ನುಡಿದು ಕರ್ಣನನೀಗಳೆ ಕುಲಜನಂ ಮಾಡಿ ತೋರ್ಪೆನೆಂದು ಕೈಯ್ಯಂಪಿಡಿದೊಡಗೊಂಡು ಪೋಗಿ ಕನಕಪೀಠದ ಮೇಲೆ ಕುಳ್ಳಿರಿಸಿ ಕನಕಕಳಶದಲ್ ತೀವಿದಗಣ್ಯಪುಣ್ಯತೀರ್ಥೋದಕಂಗಳಂ ಚತುರ್ವೇದಪಾರಗರಿಂದಭಿಷೇಕಂಗೆಯ್ಸಿ—

ಮಂಗಳಪಟಿಗಳ್ ಶುಭವಚ- ।
ನಂಗಳ್ ಚಮರೀರುಹಂಗಳಾ ಶ್ವೇತಚ್ಛ- ॥
ತ್ರಂಗಳಮರ್ದೆಸೆಯೆ ಕರ್ಣಂ- ।
ಗಂಗಮಹೀತಳವಿಭೂತಿಯಂ ನೆಱೆಯಿತ್ತಂ ॥ ೧೧ ॥

---

ಪಕ್ಕದೊಳ್ ಪಾಂಡವ ಕೌರವರ್ಕಳಂ ವಿದ್ಯಾಭ್ಯಾಸಂಗೆಯಿಸಿದಂ" ದ್ವಿತೀಯಾಶ್ವಾಸ. ೩೨ ವ ೩೩ವ.) ॥ ೧೦ ॥

ಎಂದು— ಇಂತೆಂದು ವಚನಂ ॥ ಎಂದು ನುಡಿದು = (ದುರ್ಯೋಧನನು) ಹೀಗೆಂದು ಹೇಳಿ ಕರ್ಣನನ್ನು ಈಗಳೆ ಕುಲಜನಂಮಾಡಿ ತೋರ್ಪೆನೆಂದು = ಕರ್ಣನನ್ನು ಈಗಲೇ ಕುಲೀನನನ್ನಾಗಿ ಮಾಡಿ ತೋರಿಸುತ್ತೇನೆಂದು, ಕೆಯ್ಯಂ ಪಿಡಿದು ಒಡಗೊಂಡು ಪೋಗಿ= ಕೈಹಿಡಿದು ಜೊತೆಯಲ್ಲಿ ಕರೆದುಕೊಂಡು ಹೋಗಿ, ಕನಕಪೀಠದ ಮೇಲೆ ಕುಳ್ಳಿರಿಸಿ = ಸುವರ್ಣಸಿಂಹಾಸನದ ಮೇಲೆ ಕುಳಿತುಕೊಳ್ಳಿಸಿ, ಕನಕಕಳಶದಲ್ = ಸುವರ್ಣ ಕುಂಭಗಳಲ್ಲಿ (ಕಳಶದಲ್–ಸಪ್ತಮೀವಿಭಕ್ತಿಪ್ರತ್ಯಯವಾದ 'ಒಳ್' ಎಂಬುದಕ್ಕೆ 'ಅಲ್' ಎಂದಾಗಿದೆ.) ತೀವಿದ= ತುಂಬಿದ [ತೀವು (ಧಾತು)–ಪೂರಣೇ] ಅಗಣ್ಯಪುಣ್ಯತೀರ್ಥಂಗಳಂ = ಅಸಂಖ್ಯಾತಪುಣ್ಯತೀರ್ಥಜಲಗಳನ್ನು, ಚತುರ್ವೇದಪಾರಗರಿಂದ = ಋಗ್ಯಜುಸ್ಸಾಮಾಥರ್ವಗಳೆಂಬ ನಾಲ್ಕು ವೇದಗಳಲ್ಲಿ ನಿಷ್ಣಾತರಾದ ವಿಪ್ರರಿಂದ, ಅಭಿಷೇಕಂಗೆಯ್ಸಿ= ಪಟ್ಟಾಭಿಷೇಕವನ್ನು ಮಾಡಿಸಿ ('ಗೆಯ್ಸಿ' ಎಂಬುದು ವ್ಯಾಕರಣಶುದ್ಧಿಯ ದೃಷ್ಟಿಯಿಂದ 'ಗೆಯಿಸಿ'ಯೆಂದಾಗಬೇಕು.) ॥

ಮಂಗಳಪಟಿಗಳ್ — ಇಂತೆಂದು ಕಂದಂ ॥ ಮಂಗಳಪಟಿಗಳ್ = ಮಂಗಳವಾದ್ಯಗಳು, ಮಂಗಲದ ಪಟಿಗಳ್ —ಮಂಗಳಪಟಿಗಳ್ 'ಪಕಾರಕ್ಕೆ' ವಕಾರಾದೇಶವು. ಪಟಿ = ವಾದ್ಯ, ಶುಭವಚನಂಗಳ್ = ವೇದೋಕ್ತಸ್ವಸ್ತಿವಾಚನಗಳು, ಚಮರೀರುಹಂಗಳ್ = ರಾಜತ್ವಚಿಹ್ನೆಗಳಾದ ಚಾಮರಗಳು, ಆ ಶ್ವೇತಚ್ಛತ್ರಂಗಳ್ = ಆ ಬೆಳ್ಗೊಡೆಗಳು (ಶ್ವೇತಚ್ಛತ್ರ ಚಾಮರಗಳು ರಾಜಚಿಹ್ನೆಗಳು) ಅಮರ್ದು‌ಎಸೆಯೆ = ಹೊಂದಿಕೊಂಡಿದ್ದು ಶೋಭಿಸುತ್ತಿರಲು, ('ಅಮರ್ದು'–ಶಿಥಿಲದ್ವಿತ್ವವು) ಕರ್ಣಂಗೆ = ಕರ್ಣನಿಗೆ (ದುರ್ಯೋಧನನು) ಅಂಗಮಹೀತಳವಿಭೂತಿಯಂ = ಅಂಗರಾಜ್ಯದ ಒಡೆತನ

ವ ॥ ಅಂತಿತ್ತು ನಿತ್ಯದಾನಕ್ಕೆ ದೇವಸಬಳದ ಪದಿನೆಂಟು ಕೋಟಿ ಪೊನ್ನು ಮನಿತ್ತು ನೀನೆನಗೊಂದನೀಯಲ್ವೇಟ್ಟಪ್ಪುದೆಂದು—

ಪೊಡೆಮಡುವರ್ ಜೀಯೆಂಬರ್ ।
ಕುಡು ದಯೆಗೆಯ್ಯೇಂ ಪ್ರಸಾದಮೆಂಬಿವು ಪೆಱರೊಳ್ ॥
ನಡೆಗೆಮ್ಮ ನಿನ್ನಯೆಡೆಯೊಳ್ ।
ನಡೆಯಲ್ವೇಡೆನಗೆ ಕೆಳೆಯನಯ್ ರಾಧೇಯಾ ॥ ೧೨ ॥

---

ವನ್ನು, ನೆಱೆಯಿತ್ತಂ = ಕೊಟ್ಟನು. ('ನೆಱೆಯಿತ್ತಂ' ಕನ್ನಡ ಕ್ರಿಯಾಸಮಾಸವು)— ವಿಶೇಷವಾಗಿ ಸಂಭಾವಿಸಿಕೊಟ್ಟನು ಎಂದು ತಾತ್ಪರ್ಯವು ॥ ೧೧ ॥

ಅಂತಿತ್ತು—ಇಂತೆಂದು ವಚನಂ ॥ ಅಂತು ಇತ್ತು = ಹಾಗೆ ಕೊಟ್ಟು, ನಿತ್ಯ ದಾನಕ್ಕೆ = ಕರ್ಣನ ನಿತ್ಯದಾನಕ್ಕೋಸ್ಕರ, (ಕರ್ಣನು ಪ್ರತಿದಿನವೂ ಹದಿನೆಂಟು ಕೋಟಿ ಹೊನ್ನುಗಳನ್ನು ಬ್ರಾಹ್ಮಣರಿಗೆ ದಾನಮಾಡುತ್ತಿದ್ದನೆಂದು ಪ್ರಸಿದ್ಧಿ ರನ್ನನು ಗದಾ ಯುದ್ಧದಲ್ಲಿ 'ಪ್ರತಿದಿನ ಪ್ರವೃತ್ತಿತಾಷ್ಟಾದಶಕೋಟಿ ಸುವರ್ಣದಾನಸಂತರ್ಪಿತಸಕಲ ಭೂಸುರಲೋಕನುಂ' (೨।೧೦ ವಚನಂ) ಎಂದು ಕರ್ಣನನ್ನು ವಿಶೇಷಿಸಿ ಹೇಳಿದು ದನ್ನು ನೋಡಿಕೊಳ್ಳಬಹುದು.) ದೇವಸಬಳದ ಪದಿನೆಂಟುಕೋಟಿ ಪೊನ್ನುಮಂಇತ್ತು = ದೇವಮಾನದ ಹದಿನೆಂಟು ಕೋಟಿ ಹೊನ್ನನ್ನು ಕೊಟ್ಟು. ('ದೇವಸಬಳ' ಎಂಬುದಕ್ಕೆ ನಿಷ್ಕೃಷ್ಟವಾದ ಅರ್ಥವಾವುದೆಂದು ತಿಳಿಯದು 'ಸಬಳ'ವೆಂಬುದು 'ಸಬಳಗದ್ಯಾಣ' ವೆಂಬ ಚಿನ್ನದ ನಾಣ್ಯವೆಂದು ಕಲವರ ಅಭಿಪ್ರಾಯವು 'ದೇವಸಬಳ'ವೆಂಬ ಹೆಸರಿನ ನಾಣ್ಯವು ಪಂಪನ ಕಾಲದಲ್ಲಿ ಚಲಾವಣೆಯಲ್ಲಿದ್ದಿರಬಹುದು) 'ನೀನ್ ಎನಗೆ ಒಂದನೀ ಯಲ್ ವೇಟ್ಟಪ್ಪುದು' ಎಂದು = 'ನೀನು ನನಗೆ ಒಂದನು ಕೊಡಬೇಕು' ಎಂದು ('ನೀನು ನನ್ನದೊಂದಿಚ್ಛೆಯನ್ನು ನಡೆಸಿಕೊಡಬೇಕು' ಎಂಬುದಾಗಿ ದುರ್ಯೋಧನನು ಕರ್ಣನೊ ಡನೆ ಕೇಳಿಕೊಂಡು, ಮುಂದಿನ ಮಾತನು ಹೇಳಿದನೆಂದು ಯೋಚಿಸಿಕೊಳ್ಳಬೇಕು.) ॥

ಪೊಡಮಡುವರ್—ಇಂತೆಂದು ಕಂದಂ ॥ ರಾಧೇಯಾ = ಎಲೈ ಕರ್ಣನೇ ಪೊಡೆಮಡುವರ್ = ನಮಸ್ಕರಿಸುವರು, ಜೀಯೆಂಬರ್ = 'ಜೀ'ಯೆನ್ನುವರು 'ಕುಡು' ದಯೆಗೆಯ್ = 'ಕೊಡು' ಅನುಗ್ರಹಿಸು' ಏಂಪ್ರಸಾದಂ= ಏನಪ್ಪಣೆ? ಎಂಬ ಇವು = ಹೀಗೆಂಬ ಸ್ವಾಮಿ-ಭೃತ್ಯರೊಳಗಣ ಸಂಪ್ರದಾಯಗಳು, ಪೆಱರೊಳ್ ನಡೆಗೆ= ಇತರರೊ ಡನೆ ನಡೆಯುತ್ತಿರಲಿ (ಎಲೈ ಕರ್ಣನೇ, ನಾನು ಈಗ ನಿನಗೆ ಅಂಗರಾಜ್ಯದ ಪಟ್ಟವನ್ನು ಕಟ್ಟಿ ಅನುಗ್ರಹಿಸಿದುದರಿಂದ, ನಾನು ನಿನ್ನ ಸ್ವಾಮಿಯೂ, ನೀನು ನನ್ನ ಆಶ್ರಿತನೂ ಆದಂತಾಯ್ತಾದುದರಿಂದ, ನೀನು ನನ್ನನ್ನು ಸ್ವಾಮಿಯೆಂದು ಗೌರವಿಸಿ ಪೊಡೆಮಟ್ಟು,

ವ ॥ ಎಂದು ಬೇಡಿಕೊಂಡು ಕರ್ಣನಂ ಮುಂದಿಟ್ಟೊಡಗೊಂಡು ಪೋಗಿ ಧೃತರಾಷ್ಟ್ರಂಗಂ ಗಾಂಧಾರಿಗಂ ಪೊಡೆಮಡಿಸಿದಂ. ॥

---

'ಜೀಹಸಾದ'ವೆಂದು ದೈನ್ಯವನ್ನು ತೋರ್ಪಡಿಸಬೇಕಾದ ಸಂಪ್ರದಾಯವಿದ್ದರೂ, ಅಂತಹ ಸ್ವಾಮಿ ಭೃತ್ಯಭಾವವು ಇತರರ ವಿಷಯದಲ್ಲಿ ಮಾತ್ರ ಆಚರಿಸಲ್ಪಡಬೇಕೇ ಹೊರತು ನಮ್ಮಿಬ್ಬರೊಳಗೆ ಸರ್ವಥಾ ನಡೆಯದಿರಲಿ ಎಂದು ದುರ್ಯೋಧನನ ಅಪೇಕ್ಷೆಯು) ಎಮ್ಮ ನಿನ್ನಯ ಎಡೆಯೊಳ್ ನಡೆಯಲ್ವೇಡ= ನನ್ನ ನಿನ್ನೊಳಗೆ ನಡೆಯುವುದು ಬೇಡ. (ಎಮ್ಮ'-ಅಧಿರಾಜನಾದುದರಿಂದ, ಆತ್ಮಗೌರವಾರ್ಥದಲ್ಲಿ, ಏಕವಚನಕ್ಕೆ ಬಹುವಚನ ಪ್ರಯೋಗವು 'ನಿನ್ನಯ'- ನಿನ್ನ' ಎಂಬ ಷಷ್ಠೀವಿಭಕ್ತಿಯ 'ಸ್ವಾರ್ಥ'ದಲ್ಲಿ ಮತ್ತೊಂದು 'ಅ'ಕಾರಾಗಮವು ಎಂದು ಪ್ರಯೋಗ ಸಾಧುತ್ವವನ್ನು ಹೇಳಬೇಕು ಅಥವಾ ಎಮ್ಮ ನಿನ್ನ+ಎಡೆಯೊಳ್' ಎಂಬಲ್ಲಿ ಕನ್ನಡ ಲೋಪಸಂಧಿಯಾಗಿ 'ಎಮ್ಮ ನಿನ್ನೆಡೆಯೊಳ್' ಎಂದಾದರೆ 'ಎಮ್ಮ' ಮತ್ತು 'ನಿನ್ನ' ಎಂದು ಉಭಯೋಕ್ತಿ (ಯುಗಪದುಕ್ತಿ)ಗೆ ಸ್ಪಷ್ಟ ಸಾಮರ್ಥ್ಯವು ಅಷ್ಟಾಗಿ ತೋರುವುದಿಲ್ಲವಾದುದರಿಂದ ನಾಮಹಾನಿಯ ಸಂದೇಹ ನಿವೃತ್ತಿಗಾಗಿ ಕನ್ನಡ ಲೋಪಸಂಧಿಯಾಗದೆ, ಕನ್ನಡ ಯಕಾರಾಗಮ ಸಂಧಿಯಾಗಿದೆಯೆಂದು ಸಮಾಧಾನವನ್ನು ಹೇಳಲೂಬಹುದು ) ಎನಗೆ ಕೆಳೆಯನಯ್= ನನಗೆ ನೀನು ಗೆಳೆಯನಾಗಿರುವೆ. ('ನಾನೂ ನೀನೂ ಗೆಳೆಯರೆಂದೇ ವರ್ತಿಸಬೇಕಲ್ಲದೆ, ಸ್ವಾಮಿಭೃತ್ಯರೆಂಬ ಭಾವನೆಯಿಂದ ನಡೆಯಲಾಗದು' ಎಂದು ದುರ್ಯೋಧನನ ಅಭಿಪ್ರಾಯವು) ॥ ೧೨ ॥

ಎಂದು — ಇಂತೆಂದು ವಚನಂ ॥ ಎಂದು ಬೇಡಿಕೊಂಡು ಕರ್ಣನಂ ಮುಂದಿಟ್ಟು ಒಡಗೊಂಡು ಪೋಗಿ ಧೃತರಾಷ್ಟ್ರಂಗಂ ಗಾಂಧಾರಿಗಂ= ಧೃತರಾಷ್ಟ್ರನಿಗೂ ಗಾಂಧಾರಿಗೂ ಪೊಡೆಮಡಿಸಿದಂ = ನಮಸ್ಕಾರ ಮಾಡಿಸಿದನು ॥

ಎಂಬಲ್ಲಿಗೆ ಕರ್ಣರಸಾಯನದಲ್ಲಿ
ದ್ವಿತೀಯ ಗ್ರಾಸವು ಮುಗಿದುದು



## ತೃತೀಯಂಗ್ರಾಸಂ

ವ ॥ ತ್ರೈಲೋಕ್ಯಗುರು ಗುರುತನೂಜನ ಕೆಯ್ಯಂಪಿಡಿದು (ಧೃತರಾಷ್ಟ್ರನ)
ಅರಮನೆಯುಂ ಪೊಱಮಟ್ಟು ಕಪಟಪ್ರಪಂಚದಿಂದಾತನುಮಂ ತನಗೆ
ಮಾಡಿ ಬೀಡಿಂಗೆವಂದು ಕುಂತಿಗೇಕಾಂತದೊಳಿಂತೆಂದಂ—
ಗುರುಕೃಪಶಲ್ಯಸಿಂಧುಸುತರಪ್ಪೊಡೆ ನಮ್ಮಯ ಪಕ್ಷಮೊಂದಿದಂ ।
ಗುರುಸುತನೀಗಳೆಮ್ಮೊಳಖಿಳಾಸ್ತ್ರವಿಶಾರದನಪ್ಪನುಂ ಗೆಲ- ॥
ಲ್ಕರಿಯನುಮೊಂದಿ ಬಾರದನುಮಂಕದ ಕರ್ಣನೆ ಬೀರಮಾತನಿಂ- ।
ದುರಿಮುದತ್ತು ಚಾಗಮುಮನಿಂದೆಸೆವತ್ತು ಸಮಸ್ತಧಾತ್ರಿಯೊಳ್ ॥೧॥

---

ಅವತರಣಿಕೆ ॥ ಕರ್ಣರಸಾಯನದ ಈ ತೃತೀಯಗ್ರಾಸದಲ್ಲಿ ಶ್ರೀಕೃಷ್ಣನು ಕಪಟ ಪ್ರಪಂಚದಿಂದ ಕರ್ಣದುರ್ಯೋಧನರೊಳಗೆ ಭೇದನನ್ನುಂಟುಮಾಡಲು ಪ್ರಯತ್ನಿಸಿದ ಸಂಗತಿ ವರ್ಣಿಸಲ್ಪಟ್ಟಿದೆ ಪಾಂಡವರಿಗೂ ಕೌರವರಿಗೂ ರಾಜ್ಯಕ್ಕೋಸ್ಕರ ಯುದ್ಧವಾಗದೆ ನಿರ್ವಾಹವಿಲ್ಲವೆಂದು ನಿಶ್ಚಯವಾದಾಗ ಶ್ರೀಕೃಷ್ಣನು ಪಾಂಡವರಕಡೆಯಿಂದ ದುರ್ಯೋಧನನ ಬಳಿಗೆ ಸಂಧಾನಕ್ಕೆ ಹೋದಲ್ಲಿ, ದುರ್ಯೋಧನನು ಶ್ರೀಕೃಷ್ಣನ ಅಭ್ಯರ್ಥನೆಯನ್ನು ಅಲ್ಲಗಳೆದುದರಿಂದ ಶ್ರೀಕೃಷ್ಣನು ಕೌರವರ ಸಭಾಸ್ಥಾನದಿಂದೆದ್ದು ಬರುತ್ತಾ, ದುರ್ಯೋಧನನ ಪಕ್ಷದ ಮುಖಂಡರನ್ನು ಭೇದಿಸಬಯಸಿ, ಭೀಷ್ಮದ್ರೋಣಕೃಪಶಲ್ಯಾಶ್ವತ್ಥಾಮಾದಿಗಳನ್ನು ಒಲಿಸಿಕೊಂಡು, ಮುಂದ ಕರ್ಣನನ್ನು ಒಳಗುಮಾಡುವುದಕ್ಕೆಂದು, ಕರ್ಣನನ್ನು ಜೊತೆಯಲ್ಲಿ ಕರೆದುಕೊಂಡು ಆತನೊಡನೆ ಮಾತಾಡಿ ಆತನ ಕುಲವನ್ನೆಚ್ಚರಿಸಿ ಹೇಳಿ, ಆತನ ಮನಸ್ಸಿನಲ್ಲಿ ಭೇದದ ಬೀಜವನು ಬಿತ್ತುತ್ತಾನೆ

ತ್ರೈಲೋಕ್ಯಗುರು — ಇಂತೆಂದು ವಚನಂ ॥ ತ್ರೈಲೋಕ್ಯಗುರು = ಮೂರು ಲೋಕಗಳಿಗೂ ಗುರುವಾದ ಶ್ರೀಕೃಷ್ಣನು ('ತ್ರಿಲೋಕ' — ಎಂಬುದರ ಭಾವವು 'ತ್ರೈಲೋಕ್ಯ') ಗುರುತನೂಜನ = ಅಶ್ವತ್ಥಾಮನ (ಗುರು — ದ್ರೋಣಾಚಾರ್ಯನ ತನೂಜನ ಮಗನಾದ ಅಶ್ವತ್ಥಾಮನ) ಕೈಯುಂ ಪಿಡಿದು ಧೃತರಾಷ್ಟ್ರನ ಅರಮನೆಯುಂ ಪೊಱಮಟ್ಟು = ಕೈಹಿಡಿದು, ಧೃತರಾಷ್ಟ್ರನ ಅರಮನೆಯಿಂದ ಹೊರಟು [ಪೊಱಮಡು (ಧಾತು) ನಿರ್ಗಮನೇ — ಹೊರಬೀಳು, ಹೊರಡು. 'ಅರಮನೆಯುಂ ಪೊಱಮಟ್ಟು' — ಎಂಬಲ್ಲಿ 'ಅರಮನೆಯುಂ' ಎಂದು ದ್ವಿತೀಯೆಯನ್ನು ಪ್ರಯೋಗಿಸಿದುದನ್ನು ಗಮನಿಸಿರಿ] ಕಪಟ ಪ್ರಪಂಚದಿಂದ = ಭೇದೋಪಾಯದಿಂದ, ಆತನುಮಂ = ಆತನನ್ನೂ, ತನಗೆ ಮಾಡಿ = ತನ್ನ ಪಕ್ಷಕ್ಕೆ ಒಲಿಸಿಕೊಂಡು, ಬೀಡಿಂಗೆ ವಂದು = ಬಿಡಾರಕ್ಕೆ ಬಂದು, ಕುಂತಿಗೆ, ಏಕಾಂತದೊಳ್ = ರಹಸ್ಯವಾಗಿ, ಇಂತೆಂದಂ = ಹೀಗೆಂದನು

ಗುರುಕೃಪ — ಇಂತೆಂದು ಚಂಪಕಮಾಲಾವೃತ್ತಂ ॥ ಗುರುಕೃಪಶಲ್ಯಸಿಂಧು

ಎಂತೆನೆ ವಜ್ರಿ ವಜ್ರಕವಚಕ್ಕೆ ನಿಜೋಜ್ಜ್ವಳಕುಂಡಳಕ್ಕೆ ಕೆ- ।
ಯ್ಯಾಂತೊಡೆ ಪಾಂಡುಪುತ್ರರನೆ ಕಾದೆರೆವಂದುಗಿವಂ ದಲೆಂದಿನಂ ॥
ಮಂತಣದಿಂದೆ ಬಾರಿಸೆಯುಮೊಂದುದನೆನ್ನದೆ ವಿಾಱಿ ಕೊಟ್ಟನೋ ।
ರಂತು ಜಸಕ್ಕೆ ನೋಂತು ಬಿಡ ನೇರ್ದೊಡಲೊಳ್ ತೊಡರ್ದಾ*
ತನುತ್ರಮಂ ॥ ೨ ॥

---

ಸುತರಪ್ಪೊಡೆ= ದ್ರೋಣ, ಕೃಪ, ಶಲ್ಯ, ಭೀಷ್ಮ- ಇವರಾದರೆ, (ಸಿಂಧುಸುತ—'ಸಿಂಧು'-ದೇವನದಿಯಾದ ಗಂಗೆಯ ಸುತ–ಮಗನಾದ ಭೀಷ್ಮನು) ನಮ್ಮಯ ಪಕ್ಷಂ = ನಮ್ಮ ಕಡೆಯವರೇ. (ನಮ್ಮಯ = ನಮ್ಮ ಷಷ್ಠೀವಿಭಕ್ತಿಯ ಅಕಾರದ ಮುಂದೆ ಸ್ವಾರ್ಥದಲ್ಲಿ ಔಪಚಾರಿಕವಾಗಿ ಮತ್ತೊಂದು 'ಅ'ಕಾರಾಗಮವು ಆತ್ಮಾರ್ಥಕ ಸರ್ವನಾಮಗಳಿಗೆ ಬಹುಳವಾಗಿ ಪ್ರಯೋಗಿಸಲ್ಪಡುವುದು ಉದಾ ಎನ್ನಯ, ನಿನ್ನಯ, ಎಮ್ಮಯ, ನನ್ನಯ, ನಮ್ಮಯ, ನಿಮ್ಮಯ), ಗುರುಸುತಂ = ಅಶ್ವತ್ಥಾಮನು, ಈಗಳ್ = ಈಗ, ಎಮ್ಮೊಳ್ ಒಂದಿದಂ = ನಮ್ಮೊಡನೆ ಸೇರಿದನು [ನಮ್ಮ ಪಕ್ಷಕ್ಕೆ ಸೇರಿದನು ಎಂದು ತಾತ್ಪರ್ಯವು. ಒಂದು (ಧಾತು)–ಸಮ್ಮಿಲನೇ–ಒಟ್ಟುಸೇರು ] ಅಖಿಳಾಸ್ತ್ರವಿಶಾರದನುಂ = ಸಕಲಾಸ್ತ್ರಪ್ರಯೋಗಗಳಲ್ಲಿ ಪರಿಣತನೂ, ಗಲಲ್ಕೆ ಅರಿಯನುಂ – ಗೆಲ್ಲುವುದಕ್ಕೆ ಅಸಾಧ್ಯನೂ [ಅರಿಯಂ–ಅಸಾಧ್ಯನಾದ ಶತ್ರು ಎಂಬರ್ಥದಲ್ಲಿ 'ಅರಿಯಂಗುಕುರ್ಡಿ' (ಅರಿಯಂಗೆ+ಉಕುರ್ಡಿ)—ದುರ್ಜೇಯನಾದ ಶತ್ರುವಿಗೆ ಗರ್ವಭಂಜಕನು' ಎಂಬ ಪ್ರಯೋಗವು ಶಾಸನದಲ್ಲಿದೆ], ಒಂದಿಬಾರದನುಂ= ನಮ್ಮೊಡನೆ ಸೇರಿಬಾರದವನೂ; ಅಂಕದ ಕರ್ಣನೆ = ಪ್ರಸಿದ್ಧನಾದ ಕರ್ಣನೊಬ್ಬನೆ ಸಮಸ್ತ ಧಾತ್ರಿಯೊಳ್ = ಸಮಸ್ತ ಭೂತಲದಲ್ಲಿ, ಬೀರಂ = ಶೂರತನವು, ಆತನಿಂದೆ ಉರಿವರಿದತ್ತು – ಅವನಿಂದಲಾಗಿ ಉಜ್ಜ್ವಲವಾಗಿ ಹರಡಿತು, ಚಾಗಂ ಅವನಿಂದೆ ಎಸೆದತ್ತು = ತ್ಯಾಗವು ಆತನಿಂದಲಾಗಿ ಶೋಭಿಸಿತು ಅದು ಹೇಗೆಂಬುದನ್ನು 'ಎಂತೆನೆ' ಎಂದು ಮುಂದಣವೃತ್ತದಲ್ಲಿ ವರ್ಣಿಸುತ್ತಾನೆ. ॥ ೧ ॥

ಎಂತೆನೆ — ಇಂತೆಂದು ಉತ್ಪಲಮಾಲಾವೃತ್ತಂ ॥ ಎಂತೆನೆ= ಹೇಗೆಂದರೆ, ವಜ್ರಿ= ಇಂದ್ರನು, ವಜ್ರಕವಚಕ್ಕೆ ನಿಜೋಜ್ಜ್ವಳಕುಂಡಳಕ್ಕೆ= ತನ್ನ ವಜ್ರಕವಚಕ್ಕೆ ಮತ್ತು ತನ್ನ ಉಜ್ವಲವಾದ ಕುಂಡಲಕ್ಕೆ ಕೆಯ್ಯಾಂತೊಡೆ= ಕೆಯೊಡ್ಡಿದಲ್ಲಿ (ಯಾಚಿಸಿದಾಗ); ಪಾಂಡುಪುತ್ರರನೆ ಕಾದು ಎರೆವಂದು= ಪಾಂಡುಪುತ್ರರನ್ನು ಕಾಪಾಡುವುದಕ್ಕಾಗಿ ಬೇಡುವಲ್ಲಿ [ಎರೆ (ಧಾತು)–ಯಾಚ್ಞಾಯಂ ಎಱೆ (ಧಾತು)–ದ್ರವದ್ರವ್ಯದಾನೇ ಸುರಿ] ಉಗಿವಂದಲ್ ಎಂದು= ನಿಶ್ಚಯವಾಗಿಯೂ ಕತ್ತರಿಸಿಕೊಡುವವನು ಎಂದು, ಇನಂ= ಸೂರ್ಯನು, ಮಂತಣದಿಂದೆ= ರಹಸ್ಯವಾಗಿ [ಮಂತಣಂ (ಸಂ) ಮಂ

ಬರವಂ ಬೇಡಿದರ್ಗೀವ ದೇವನೆ ವಲಂ ನಾಣ್ಗೆಟ್ಟು ಬಂದೆನ್ನನಿಂ- ।
ತೆರೆದಂ ಬರ್ದರೊಳಾನೆ ಬರ್ದನೆನುತುಂ ನೇರ್ವಲ್ಲಿ ಕೆನ್ನೆತ್ತರುಂ ॥
ಬಿರಿಕಂಡಂಗಳೆ ಬೀಬಲುಣ್ಮೆಮನದೊಂದಣ್ಮಿಟ್ಟಳಂ ಪೊಣ್ಮೆ ವೀ- ।
ರರಸಕ್ಕಾಗರಮಾಯ್ತು ನೋಡ ಕವಚಂಗೊಂಡಂದಮಾ ಕರ್ಣನಾ
॥ ೩ ॥

ತ್ರಣ—ಗುಟ್ಟಿನಲ್ಲಿ ಆಲೋಚಿಸುವುದು, ಮಂತ್ರಾಲೋಚನೇ] ಬಾರಿಸೆಯುಂ= ಅಡ್ಡಿ ಮಾಡಿದರೂ, ಆಕ್ಷೇಪಿಸಿದರೂ, (ಬಾರಿಸು—ವಾರಿಸು ತಡೆಮಾಡು, ಆಕ್ಷೇಪಿಸು) ಎಂದುದಂ ಎನ್ನದೆ= ಹೇಳಿದುದನ್ನು ಹೇಳದೆ, ಮಾರ್ನುಡಿಯದೆ,(ತಂದೆಯಾದ ಸೂರ್ಯನ ಮಾತಿಗೊಪ್ಪದೆ ಎಂದು ಭಾವವು) ಓರಂತು= ಒಂದೇ ರೀತಿಯಲ್ಲಿ, ಜಸಕ್ಕೆ ನೊಂತು= ಕೀರ್ತಿಗೆ ಬಯಸಿ [ಜಸ-ಯಶಸ್ಸು (ಸಂಸ್ಕೃತ), ನೋನ್ (ಧಾತು)-ವ್ರತಾಚರಣೇ ಭಾವನಾಮವು 'ನೋಂಪಿ'-ವ್ರತವು] ಒಡಲೊಳ್ ತೊಡರ್ದ= ಸ್ವಶರೀರದಲ್ಲಿ ಬಂಧಿಸಿ ಕೊಂಡಿದ್ದ, [ತೊಡರ್ (ಧಾತು)-ಬಂಧನೇ, (ಬಿರುದಶೃಂಖಲಾಯಂಚ) 'ತೊಡರ್ದ' ಎಂಬಲ್ಲಿ ರೇಫೆಮೆರಸಿದ ದಡ್ಡಕ್ಕರದ ಶಿಥಿಲತ್ವವು] ಆ ತನುತ್ರಮಂ= ಪ್ರಸಿದ್ಧವಾದ ಕವಚ ವನ್ನು (ತನು-ಶರೀರವನ್ನು, ತ್ರ-ರಕ್ಷಿಸುವುದು ಕವಚವು), ಬಿಡೆನೇರ್ದು ಕೊಟ್ಟಂ= ಬೇರ್ಪಡುವಂತೆ ಕತ್ತರಿಸಿ ಕೊಟ್ಟನು [ನೇರ್ (ಧಾತು)-ಕೃಂತನೇ (ಕತ್ತರಿಸು) 'ಬಿಡೆನೇ ರ್ದು' ಎಂಬಿಲ್ಲಿ 'ಬಿಡೆ' ಎಂಬುದು ವಿಶೇಷ ಸ್ಪಷ್ಟಾರ್ಥದಲ್ಲಿ ಕ್ರಿಯಾವಿಶೇಷಣವು. ಉದಾ 'ಬಿಡೆನಟ್ಟುವು ಕಾವನಂಬುಗಳ್ ತಾವೈದುಂ' (ಆಂಡಯ್ಯನ ಕಬ್ಬಿಗರ ಕಾವಂ) ಇಲ್ಲಿ 'ಇವಂ ಮಂತಣದಿಂದೆ ಬಾರಿಸೆಯುಂ, ಎಂದುದನೆನ್ನದೆ, ಓರಂತೆ ಜಸಕ್ಕೆ ನೋಂತು, ಒಡಲೊಳ್ ತೊಡರ್ದಾತನುತ್ರಮಂ ಬಿಡೆನೇರ್ದು ಕೊಟ್ಟಂ ಎಂಬುದರಿಂದ, ಸಮಸ್ತ ಧಾತ್ರಿಯೊಳ್ ಕರ್ಣನಿಂದ 'ಬೀರಂ ಉರಿವರಿದತ್ತು, ಚಾಗಂ ಸೆದತ್ತು' ಎಂದು ಮೊದ ಲು ಹೇಳಿದುದನ್ನು ಸಮರ್ಥಿಸಿದಂತಾಯಿತು. ॥ ೨ ॥

ಬರವಂ—ಇಂತೆಂದು ಮತ್ತೇಭವಿಕ್ರೀಡಿತವೃತ್ತಂ ॥ ಈ ವೃತ್ತದಲ್ಲಿ 'ಕರ್ಣ ನಾಕವಚಂಗೊಂಡದಂ' ಹೇಗೆ 'ವೀರರಸಕ್ಕಾಗರ'ವಾಯ್ತೆಂಬುದನ್ನು ಕವಿಯು ವರ್ಣಿ ಸುತ್ತಾನೆ ಬರವಂ-ವರವನ್ನು 'ಬರವಂ'-ಈ ಪದದ ಆದಿಯ ವಕಾರದಲ್ಲಿ 'ಬ' ಶ್ರುತಿ. ಬರ-ವರ (ಸಂಸ್ಕೃತ) ಬೇಡಿದರ್ಗೆ = ಬೇಡಿದವರಿಗೆ (ಬೇಡಿದ್ದರ್ಗೆ-ದ್ವಿತ್ವಶೈಥಿಲ್ಯವು) ಈವ-ಕೊಡುವ [ಈ (ಧಾತು)-ಪ್ರದಾನೇ] ದೇವನೇ,= ದೇವೇಂದ್ರನೇ ನಾಣ್ಗೆಟ್ಟು ಬಂದು, ಇಂತು ಎನ್ನಂ ಎರೆದಂವಲಂ= ನಿಜವಾಗಿಯೂ ಹೀಗೆ ನನ್ನನ್ನು ಯಾಚಿಸಿದ ನಲ್ಲವೆ? ಬರ್ದರೊಳ್ ಪ್ರೌಢರಲ್ಲಿ (ಧನ್ಯರಲ್ಲಿ) ಆನೆಬರ್ದಂ ಎನುತುಂ= ನಾನೇ ಧನ್ಯನು. ಎನ್ನುತ್ತ; ನೇರ್ವಲ್ಲಿ= (ಕವಚವನ್ನು) ಕತ್ತರಿಸುವಲ್ಲಿ; ಕೆನ್ನೆತ್ತರುಂ=

ವ ॥ ಅಂತು ಸಹಜಕವಚರತ್ನಕುಂಡಲಂಗಳಂ ನೆತ್ತರ್ ಪನಪನಪರಿಯೆ ತಿದಿಯುಗಿವಂತುಗಿದು ಕೊಟ್ಟುದರ್ಕೆ ಮೆಚ್ಚಿ ದೇವೇಂದ್ರನಾತಂಗ ಮೋಘಶಕ್ತಿಯನಿತ್ತನಾತನನಾನುಮೆನ್ನಬಲ್ಲ ಮಾಟಕ್ಕೆಯಿಂ ಭೇದಿಸಿ ದಪ್ಪೆಂ ನೀಮುಂ ನಿಮ್ಮ ಚೊಚ್ಚಿಲಮಗನಪ್ಪ ಸೂರ್ಯಸೂನುವಂ ಸೂರ್ಯ ದಿನದಂದು ಕಂಡು ಕಾರ್ಯಸಿದ್ಧಿಯಂ ಮಾಡಿ ಬನ್ನಿಮೆಂದು ಕೊಂತಿಯುಂ ಬೀೞ್ಕೊಂಡು ಪರಕೆಯಂ ಕೈಕೊಂಡು ರಥಾಂಗಧರಂ ರಥಮನೇಱಿ ಕರ್ಣನ ಮನೆಯ ಮುಂದನೆ ಬಂದು ಮೇಲೆ ಬಿಟ್ಟಿಮ್ಮ ಕಿಱಿದಂತರಂ ಕಳಿಪಿ ಮಗುಟ್ವೆ ಬಾ ಪೋಪಮೆಂದು ತನ್ನೊಡನೆ ರಥಮನೇಱಿಸಿ ಕೊಂಡು ಪೋಗಿ ಮುಂದೊಂದೆಡೆಯೊಳ್ ನಿಂದು—

---

ಕೆಂಪುನೆತ್ತರೂ, (ಕೆಚ್ಚನೆ+ನೆತ್ತರ್—ವಿಶೇಷಣ ಪೂರ್ವಪದ ಕರ್ಮಧಾರಯ ಸಮಾಸವು) ಬಿರಿಕಂಡಂಗಳೆ= ಮಾಂಸಖಂಡಗಳೇ ('ಬಿರಿಕಂಡಂಗಳೆ' ಎಂಬಲ್ಲಿ ಅವಧಾರಣಾರ್ಥ ದಿಂದಲಾಗಿ, ಕತ್ತರಿಸುವಾಗ ನೆತ್ತರು ಸುರಿಯುತ್ತಿರುವುದರೊಂದಿಗೆ ಮಾಂಸಖಂಡಗಳೇ ಹೊರಚೆಲ್ಲಿದುವು ಎಂದು ತಾತ್ಪರ್ಯವು), ಬೀೞಲ್ ಉಣ್ಮೆ= ಚೆಲ್ಲುವಂತೆ ಹೊರಗೇಳಲು ಬೀೞ್ (ಧಾತು)—ಪತನೇ, ಉಣ್ಮು (ಧಾತು)—ಉದ್ಗತೌ] ಮನದೊಂದು ಅಣ್ಮು = ಮನಸ್ಸಿನದೊಂದು ಪೌರುಷವು [ಅಣ್ಮು (ಧಾತು)—ಪೌರುಷೇ] ಇಟ್ಟಳಂ ಪೊಣ್ಮೆ= ಅಧಿಕ ವಾಗಿ ತೋರಿಬರಲು ['ಇಟ್ಟಳಂ'—ಅಧಿಕಾರ್ಥದ ಅವ್ಯಯವು ಇಲ್ಲಿ ಪೊಣ್ಮು ಎಂಬ ಕ್ರಿಯೆಗೆ ವಿಶೇಷಣವು; ಪೊಣ್ಮು (ಧಾತು)—ಉದ್ಗಮೇ, ಏಳು, ಕಾಣು, ತನುತ್ರಮಂ ನೇರ್ವಲ್ಲಿ ಕೆನ್ನೆತರುಂ ಬಿರಿಕಂಡಂಗಳೆ ಬೀಳಲುಣ್ಮೆ, ಮನದೊಂದು ಅಣ್ಮುಮಾತ್ರ ಇಟ್ಟಳಂ ಪೊಣ್ಮುದುದರಿಂದಲೇ ಕವಚಂಗೊಂಡ ಅಂದಂ= ಕರ್ಣನ ಆ ಕವಚವನ್ನು ಕತ್ತರಿಸಿಕೊಂಡು ಕೊಟ್ಟ ರೀತಿಯು, (ಕವಚಮುಂಕೊಳ್—ಕವಚಂಗೊಳ್; ಕವಚಂ ಗೊಂಡ ಅಂದಂ = ಕವಚಂಗೊಂಡಂದಂ) ಕರ್ಣನಾ—ಷಷ್ಠಿಗೆ ಧೀರ್ಘಾದೇಶವು) ವೀರರ ಸಕ್ಕೆ ಅಗರಮಾಯ್ತು = ವೀರರಸಕ್ಕೆ ಆಶ್ರಯವಾಯಿತು. [ ವೀರರಸ—ನವರಸಗಳ ಲ್ಲೊಂದು. ಶೃಂಗಾರ, ಹಾಸ, ಕರುಣ, ವೀರ, ರೌದ್ರ, ಭಯಾನಕ, ಭೀಭತ್ಸ, ಅದ್ಭುತ, ಶಾಂತ—ಇಂತೆಂದು ಒಂಭತ್ತು ರಸಗಳು ಕಾವ್ಯಗಳಲ್ಲಿ ವರ್ಣಿಸಲ್ಪಡುತ್ತವೆ ವೀರರಸದ ಲಕ್ಷಣವು—'ವೀರರಸಂ ಬವರಿಸುಗುಮುದಾರೋತ್ಸಾಹಪ್ರವೃತ್ತಿಕಾರಣ ಕಾರ್ಯಂ' (ನಾಗವರ್ಮನ ಕಾವ್ಯಾವಲೋಕನಂ ೬೧೬) ॥ ೩ ॥

ಅಂತುಸಹಜ— ಇಂತೆಂದು ವಚನಂ ॥ ಅಂತು ಸಹಜಕವಚ ರತ್ನಕುಂಡಲಂ ಗಳಂ ನೆತ್ತರ್ ಪನಪನ ಪರಿಯೆ ತಿದಿಯುಗಿವಂತೆ ಉಗಿದು ಕೊಟ್ಟುದರ್ಕೆ ಮೆಚ್ಚಿ ದೇವೇಂದ್ರಂ ಆತಂಗೆ ಅಮೋಘಶಕ್ತಿಯಂ ಇತ್ತಂ. (ಅಮೋಘ= ವ್ಯರ್ಥವಲ್ಲದ;

ಭೇದಿಸಲೆಂದೆ ದಲ್ ನುಡಿದರೆನ್ನದಿರೊಯ್ಯನೆ ಕೇಳ ಕರ್ಣ ನಿ- ।
ನ್ನಾದಿಯೊಳಬ್ಬೆ ಕೊಂತಿ ನಿನಗಮ್ಮನಹರ್ಪತಿ ಪಾಂಡುನಂದನರ್ ॥
ಸೋದರರೆಯ್ದೆ ಮಯ್ದುನನೆನಾಂ ಪೆಱತೇಂ ಪಡೆಮಾತೊ ನಿನ್ನದೀ ।
ಮೇದಿನಿ ಪಟ್ಟಮುಂ ನಿನತೆ ನೀನಿರೆ ಮತ್ತೆ ಪೆಱರ್ ನರೇಂದ್ರರೇ ॥ ೪ ॥

---

'ಶಕ್ತಿ'–ಶಕ್ತ್ಯಾಯುಧವು ಇದು ಪ್ರಥಮ ಗ್ರಾಸದಲ್ಲಿಯೇ ಹೇಳಲ್ಪಟ್ಟಿದೆ.)'ಇವಂ ಮಂತ್ರದಿಂದೆ ಬಾರಿಸೆಯುಂ' ಎಂದಲ್ಲಿ ಹೇಳಿರುವುದರಿಂದ, ದೇವೇಂದ್ರನು ಕವಚಕುಂಡಲಗಳನ್ನು ಬೇಡಿದಾಗ, ಕೊಡಬೇಡವೆಂದು ಸೂರ್ಯನು ಕರ್ಣನಿಗೆ ಹೇಳಿರಬೇಕೆಂಬುದನ್ನು ಅಲ್ಲಿ ಅನ್ವಯಿಸಿಕೊಳ್ಳಬೇಕಾಗುತ್ತದೆ. ಮುಂದೆ ಕುಂತಿಯು ಕರ್ಣನೊಡನೆ ಹುರಿಗಣೆಯನ್ನು ಕೇಳಿದಾಗಲೂ, ಕೊಡಬೇಡವೆಂದು ಸೂರ್ಯನು ಕರ್ಣನನ್ನು ತಡೆಯುತ್ತಾನೆಂಬ ಸಂಗತಿ ಚತುರ್ಥಗ್ರಾಸದಲ್ಲಿ ಬರುತ್ತದೆ. ಎರಡು ಸಂದರ್ಭಗಳಲ್ಲಿಯೂ, 'ಇನಂ ಮಂತ್ರದಿಂದ ಬಾರಿಸೆಯುಂ' ಕರ್ಣನು 'ಎಂದುದನೆನ್ನದೆ' ಬೇಡಿದುದನ್ನು ಕೊಟ್ಟೇ ಬಿಡುವುದರಿಂದ 'ಚಾಗಮವನಿಂದೆಸೆದತ್ತು ಎಂದರಿಯಬೇಕು) ಆತನಂ ಆನುಂ ಎನ್ನ ಬಲ್ಲಮಾಟ್ಕೆಯಿಂಭೇದಿಸಿದಪ್ಪೆಂ= ಆತನನ್ನು ನಾನೂ ನನ್ನಿಂದ ಸಾಧ್ಯವಿದ್ದಮಟ್ಟಿಗೆ ಭೇದಿಸುತ್ತೇನೆ (ಬಲ್ಲಮಾಟ್ಕೆಯಿಂ ತಿಳಿದ ರೀತಿಯಿಂದ; ಸಾಧ್ಯವಿದ್ದ ರೀತಿಯಿಂದ) ನೀಮುಂ= ನೀವೂ, ನಿಮ್ಮ ಚೊಚ್ಚಲಮಗನಪ್ಪ= ನಿಮ್ಮ ಚೊಚ್ಚಲ ಮಗನಾಗಿರುವ ಸೂರ್ಯಸೂನುವಂ ಸೂರ್ಯಪುತ್ರನಾದ ಕರ್ಣನನ್ನು; ಸೂರ್ಯದಿನದಂದು ಕಂಡು= ಆದಿತ್ಯವಾರದಂದು ಕಂಡು, ಕಾರ್ಯಸಿದ್ಧಿಯಂ ಮಾಡಿ ಬನ್ನಿಂ ಎಂದು= ಕಾರ್ಯಸಿದ್ಧಿ ಮಾಡಿ ಬನ್ನಿರಿ ಎಂಬುದಾಗಿ (ಸೂರ್ಯಸುಪುತ್ರನಾದುದರಿಂದಲೇ ಕಾರ್ಯಸಿದ್ಧಿಗೋಸ್ಕರ ಸೂರ್ಯನ ವಾರವನ್ನೇ ಅನುಕೂಲ ದಿನವಾಗಿ ತಿಳಿದು ಹೇಳಿದನೆಂದಿಟ್ಟುಕೊಳ್ಳಬಹುದು) ಕೊಂತಿಯಂ ಬೀಟ್ಕೊಂಡು= ಕುಂತಿಯಿಂದ ಕಳುಹಿಸಿಕೊಂಡು [ಬೀಟ್ಕೊಳ್ (ಧಾತು)–(ಬೀಡುಕೊಳ್) ಮನೆಗೆ ಕಳಿಸಿಕೊಡು, ಪರಕೆಯಂ ಕೈಕೊಂಡು= ಆಶೀರ್ವಾದವನ್ನು ಪಡೆದು (ಕುಂತಿಯು ಶ್ರೀಕೃಷ್ಣನಿಗೆ ಅತ್ತೆಯಾದುದರಿಂದ 'ಪರಕೆಯಂ ಕೈಕೊಂಡು' ಎಂದು ಹೇಳಿದುದು), ರಥಾಂಗಧರಂ= ಚಕ್ರಧಾರಿಯಾದ ಶ್ರೀಕೃಷ್ಣನು (ರಥಾಂಗ= ಚಕ್ರ) ರಥಮಂ ಏಱಿ= ರಥವನ್ನು ಏರಿ (ರಥಾಂಗಧರನು ರಥವನ್ನೇರುವುದರಲ್ಲಿ ಔಚಿತ್ಯವುಂಟು) ಕರ್ಣನ ಮನೆಯ ಮುಂದನೆ ಬಂದು= ಕರ್ಣನ ಮನೆಯ ಮುಂದುಗಡೆಯಲ್ಲಿಯೇ ಬಂದು, ಮೇಲೆ ಬಿಟ್ಟು= ಕರ್ಣನನ್ನು ಸಂಧಿಸಿ, ತಾನಾಗಿಯೇ ಕರ್ಣನನ್ನು ಸಂಧಿಸಿದುದರಿಂದ, 'ಮೇಲುಬಿಟ್ಟು' ಎಂದು ಹೇಳಿದುದಾಗಿದೆ), 'ಎಮ್ಮ ಕಿಱಿದಂತರಂಕಳಿಪಿ ಮಗುೞ್ಚಿ ಬಾ ಪೋಪಂ' ಎಂದು= ನಮ್ಮನ್ನು ಸ್ವಲ್ಪ ದೂರ ಕಳಿಸಿಕೊಟ್ಟು ಹಿಂತಿರುಗುವೆ, ಬಾ ಹೋಗುವ' ಎಂದು ಹೇಳಿ, ತನ್ನೊಡನೆ ರಥಮಂ ಏಱಿಸಿಕೊಂಡು ಪೋಗಿ, ಮುಂದೆ ಒಂದೆಡೆಯೊಳ್ ನಿಂದು ||

ಭೇದಿಸಲೆಂದೆ— ಇಂತೆಂದು ಉತ್ಪಲಮಾಲಾವೃತ್ತಂ || ಕರ್ಣ= ಎಲೈ ಕರ್ಣನೇ, ಭೇದಿಸಲೆಂದೆದಲ್= ನಿಜವಾಗಿಯೂ, ಭೇದವನ್ನುಂಟುಮಾಡಬೇಕೆಂತಲೇ; ನುಡಿದರ್ ಎನ್ನದಿರ್= ಮಾತಾಡಿದರು ಎಂದು ಹೇಳಬೇಡ, ಒಯ್ಯನೆ ಕೇಳ=

ಸಾವಧಾನವಾಗಿ ಕೇಳು. ('ಒಯ್ಯನೆ'-ಅವ್ಯಯವು, 'ಕೇಳ'-ಕೇಳ್ ಧಾತುಗೆ ವಿಧ್ಯರ್ಥದಲ್ಲಿ ಮಧ್ಯಮ ಪುರುಷದ ಏಕವಚನಕ್ಕೆ 'ಅ'ತ್ವವು), ನಿನ್ನ ಆದಿಯೊಳ್ ಅಬ್ಬೆ ಕೊಂತಿ=ನಿನ್ನ ಜನನದಿಂದ ನಿನಗೆ ತಾಯಿ ಕುಂತಿಯಾಗಿರುವಳು ('ಆದಿಯೊಳ್ ನಿನ್ನ ಅಬ್ಬೆಕೊಂತಿ'-ಜನನವನ್ನು ಕೊಟ್ಟ ತಾಯಿಯು ಕುಂತಿಯು, ಸಾಕಣಯ ತಾಯಿಯಾದ ರಾಧೆಯನ್ನೇ ನಿಜವಾಗಿ ತಾಯಿಯೆಂದು, ನೀನು ಈ ವರೆಗೆ ನಂಬಿ ಕೊಂಡಿದ್ದಿ; ಆದರೆ ನಿಜಸ್ಥಿತಿ ಹಾಗಲ್ಲವೆಂಬುದನ್ನು ಮನದಟ್ಟು ಮಾಡುವುದ ಕ್ಕಾಗಿಯೇ, 'ನಿನ್ನ ಆದಿಯೊಳ್ ಅಬ್ಬೆಕೊಂತಿ' ಎಂದುದಾಗಿದೆ), ನಿನಗೆ ಅಮ್ಮಂ ಅಹರ್ಪತಿ=ನಿನಗೆ ತಂದೆಯು ಸೂರ್ಯನು. ['ಅಮ್ಮಂ'-'ತಂದೆ' ತುಳುವಿನಲ್ಲಿ ಇಂದಿಗೂ ತಂದೆಯನ್ನು ಅಮ್ಮನೆಂದು ಕರೆಯುವ ರೂಢಿಯುಂಟು 'ಅಹರ್ಪತಿ'= ಇದು ಸಂಸ್ಕೃತ ವ್ಯಾಕರಣನಿಯಮಾನುಸಾರವಾಗಿ 'ಅಹಃಪತಿ' ಅಥವಾ 'ಅಹಸ್ಪತಿ' ಯೆಂದೋ ಆಗುವುದು ಅಹಸ್-ದಿನ (ಹಗಲು)ಕ್ಕೆ ಪತಿ-ಒಡೆಯನು ದಿನಾಧಿ ಪನು ಸೂರ್ಯನು], ಪಾಂಡುನಂದನರ್ ಸೋದರರ್=ಪಾಂಡುಪುತ್ರರು (ನಿನ್ನ) ಸೋದರರು, ಎಯ್ದೆ ಆಂ ಮೈದುನನೆನ್=ವಿಶೇಷವಾಗಿ ನಾನು ನಿನ್ನ ಭಾವ ಮೈದುನನಾಗಿರುವೆನು. [ನೀನು ನನ್ನ ಸೋದರತ್ತೆಯಾದ ಕುಂತಿಯ ಮಗನಾದು ದರಿಂದ, ಹೇಗೂ ನಾನು ನಿನ್ನ ಮೈದುನನೇ ಆಗಿರುವೆನಷ್ಟೆ ಆದುದರಿಂದ ನಿನ್ನಲ್ಲಿ ಭೇದವನ್ನುಂಟುಮಾಡುವ ಉದ್ದೇಶದಿಂದ ನಾನು ಮಾತಾಡುವ ಆವಶ್ಯಕತೆಯಿಲ್ಲ ವೆಂಬುದನ್ನು ನೀನು ಯೋಚಿಸಬೇಕೆಂದು ಭಾವವು ಮಯ್ದುನನೆನ್-(ಮಯ್ದು ನಂ+ಎನ್) 'ಮಯ್ದುನಂ' ಎಂಬ ನಾಮಪದಕ್ಕೆ ಉತ್ತಮಪುರುಷದ ಏಕವಚನದ ಆಖ್ಯಾತ ವಿಭಕ್ತಿಯು ಸೇರಿ, 'ಮಯ್ದುನನೆಂ'(ಎಂದರೆ ಮಯ್ದುನನಾಗಿದ್ದೇನೆ)ಎಂಬ ರೂಪವಾಯ್ತು. 'ವಿನುತ ಗುಣವಚನದೊಳ್ ಸರ್ವನಾಮದೊಳ್ ಸಂಖ್ಯೆಯೊಳ್ ಪ್ರವರ್ತಿಪುವಾಖ್ಯಾ || ತನಿಯುಕ್ತ ವಿಭಕ್ತಿಗಳವು ಘನತರ ಸಂಸ್ಕೃತ ಗುಣೋಕ್ತಿ ಯೊಳಮುಮರ್ದಿಕರ್ಗಂ' || ಎಂಬ, ಶಬ್ದಮಣಿದರ್ಪಣದ || ೨೧೯ ||ನೆ ಸೂತ್ರದ 'ಸಮುಚ್ಚಯದಿಂ ಗುಣವಚನವಲ್ಲದಲ್ಲಿಯುಮುಂಟು'-ಎಂಬ ವೃತ್ತಿ-ಪ್ರಯೋಗಗಳಿ ಗನುಗುಣವಾಗಿ ಈ ಪ್ರಯೋಗವನ್ನು ತಿಳಿಯಬೇಕು] ಪೆಱತೇಂ ಪಡೆಮಾತೋ= (ಪಡೆಮಾತು ಪೆಱತೇನೊ?) ಬೇರೆ ಹೆಚ್ಚು ಮಾತೇಕೆ? ಈ ಮೇದಿನಿ ನಿನ್ನದು=ಈ ರಾಜ್ಯವೆಲ್ಲವೂ ನಿನ್ನದು (ನಿಜವಾಗಿಯೂ ಈ ರಾಜ್ಯಾಧಿಪತ್ಯಕ್ಕೆ ನೀನೇ ಮೊದಲನೆಯ ಹಕ್ಕುದಾರನು ಪಾಂಡವರಿಗೂ ಕೌರವರಿಗೂ ನೀನು ಹಿರಿಯನಾದುದರಿಂದ) ಪಟ್ಟಮುಂ ನಿನತೆ=ಪಟ್ಟವೂ ನಿನ್ನದೇ [ನಿನತೆ-'ನಿನತು'=(ನಿನ್ನದು) ಎಂಬುದಕ್ಕೆ ಅವಧಾರಣಾರ್ಥದ ಏಕಾರಾಗಮವು. 'ನಿನ್ನದು' ಎಂಬುದಕ್ಕೆ "ನಿನತು' ಎಂಬಾದೇಶವು. 'ನಿನತೆನತುತನತೆನಿಪ್ಪಿವು | ಜನಿಯಿಸುಗುಂ ನಿನ್ನದೆನ್ನದುಂ ತನ್ನದೆ ನಿ || ಪ್ಪಿನಿತಱೊಳಂ" ಶ. ಮ. ದ ಸೂ. || ೧೪೭ ||] ನೀನಿರೆ ಮತ್ತೆ ಪೆಱರ್ ನರೇಂದ್ರರೇ=ನೀನಿರುವಾಗ ಮತ್ತೆ ಬೇರೆಯವರು ರಾಜರಾಗಲರ್ಹರೇ? (ಈ ಸಕಲ ರಾಜ್ಯಕ್ಕೂ ಪಟ್ಟಕ್ಕೂ ನಿಜವಾಗಿ ನೀನೇ ಹಕ್ಕುದಾರನಾಗಿರುವುದರಿಂದ, ಉಳಿದವರಿಗೆ ಅದನ್ನು ಅಜ್ಞಾತವಾಗಿ ನೀನು ಬಿಟ್ಟುಕೊಡುವುದು ಸರಿಯಲ್ಲವೆಂದು ಆಶಯವು) ||೪||

ಗಂಗೆಗೆ ಕೆಯ್ಯೆಡೆಯೆಂದು– ।
ತ್ತುಂಗಸ್ತನಿ ಕೊಟ್ಟು ಪೋಗೆ ಸೂತಂ ಕಂಡಾ– ॥
ತ್ಮಾಂಗನೆಗೆ ರಾಧೆಗಿತ್ತು ಮ– ।
ನಂಗೊಳೆ ರಾಧೇಯನನಿಸಿ ಸೂತಜನಾದೈ ॥ ೫ ॥

ನಿನ್ನುತ್ಪತ್ತಿಯ ನಿಂತೆಂ– ।
ದೆನ್ನರುಮಣಮುಱಿಯರಱಿವೆನಾಂ ಸಹದೇವಂ ॥
ಪನ್ನಗಕೇತು ದಿನೇಶಂ ।
ನಿನ್ನಂಬಿಕೆ ಕುಂತಿಯಿಂತಿವರ್ ನೆಱೆ ಬಲ್ಲರ್ ॥ ೬ ॥

---

ಗಂಗೆಗೆ — ಇಂತೆಂದು ಕಂದಂ ॥ ಗಂಗೆಗೆ ಕೆಯ್ಯೆಡೆಯೆಂದು = ಗಂಗಾದೇವಿಗೆ ಸಾಕುವುದಕ್ಕೆಂದು (ಕೆಯ್ಯೆಡೆ = ರಕ್ಷಿಸಿಕೊಳ್ಳಲಿಕ್ಕಾಗಿ ಕೊಟ್ಟ ವಸ್ತು, ಎನ್ನಾಸವು), ಉತ್ತುಂಗಸ್ತನಿ = ಉನ್ನತಸ್ತನಗುಳುಳ್ಳಾಕೆ, ಕುಂತಿ, ಕೊಟ್ಟು ಪೋಗೆ = ನಿನ್ನನ್ನು ಸಮರ್ಪಿಸಿ ಹೋಗಲು, ಸೂತಂ ಕಂಡು, ಆತ್ಮಾಂಗನೆಗೆ ರಾಧೆಗೆ = ತನ್ನ ಹೆಂಡತಿಯಾದ ರಾಧೆಗೆ, ಇತ್ತು = ಕೊಟ್ಟು [ಈ (ಧಾತು)–ಪ್ರದಾನೇ ಕೊಡು] ಮನಂಗೊಳೆ = ಪ್ರೀತಿಯಿಂದ, ರಾಧೇಯನೆನಿಸಿಸೂತಜನಾದೈ = ರಾಧೇಯನೆನ್ನಿಸಿಕೊಂಡು, ಸೂತಪುತ್ರನಾದೆಯಯ್ಯಾ ' ॥ ೫ ॥

ನಿನ್ನುತ್ಪತ್ತಿ — ಇಂತೆಂದು ಕಂದಂ ॥ ನಿನ್ನ ಉತ್ಪತ್ತಿಯಂ = ನಿನ್ನ ಜನನವನ್ನು, ಇಂತೆಂದು = ಹೀಗ ಎಂದು (ಈ ಹೇಳಿದ ಪ್ರಕಾರವಾಗಿಯೆಂದು) ಎನ್ನರುಂ = ಎಂತಹರೂ ('ಎನ್ನರುಂ'–ಎಂತಹರುಂ–ಎಂತಪ್ಪರುಂ "ಅಂತಹನಂತಹನುಂತಹ । ನೆಂತಹನೆಂದಿಂತು ಪದ್ವಿರುಕ್ತಿಗೆಪತ್ವಂ ॥ ಭ್ರಾಂತೇಂಗಡಾರ್ಥದೊಳ್ ಮೇಣಂತವಱಿಡೆಗನ್ನನಿನ್ನನುನ್ನಮುಮೆನ್ನಂ" — ಶ ಮ ದ ಸೂ ॥ ೧೬೦ । ) ಅಣಂ ಅಱಿಯರ್ = ಏನೂ ತಿಳಿಯರು ('ಅಣಂ'–ಅವ್ಯಯವು–"ಮತ್ತೇನುಮೆನಿಪ್ಪರ್ಥಮನಿರದಾನಿಪರಣಮಾಣಮೆಂದು ನುಡಿವವ್ಯಯದೊಳ್" ಶ ಮ ದ ಸೂ ॥ ೨೦೩ ॥) ಆಂ ಅಱಿವೆಂ = ನಾನು ತಿಳಿದಿರುವೆನು ಸಹದೇವಂ = ಸಹದೇವನು, ಪನ್ನಗಕೇತು = ದುರ್ಯೋಧನನು (ಪನ್ನಗ–ಸರ್ಪವು ಕೇತು–ಧ್ವಜ ಧ್ವಜದಲ್ಲಿ ಸರ್ಪದ ಚಿಹ್ನವುಳ್ಳವನು ದುರ್ಯೋಧನನು) ದಿನೇಶಂ = ಸೂರ್ಯನು, (ದಿನ + ಈಶಂ = ದಿನೇಶಂ ಗುಣಸಂಧಿ ) ನಿನ್ನ ಅಂಬಿಕೆ ಕುಂತಿ = ನಿನ್ನ ತಾಯಿ ಕುಂತಿ, ಇಂತು = ಹೀಗೆ, ಇವರ್‌ನೆಱೆ ಬಲ್ಲರ್ = ಇವರು ಸಮಗ್ರವಾಗಿ ತಿಳಿದಿರುವರು ['ನೆಱೆ'–ಅಧಿಕಾರ್ಥದ ಅವ್ಯಯವು ನೆಱೆ (ಧಾತು)–ಸಮಗ್ರತ್ವೇ, ನಾಡೆಯೆಡೆಯಾವಗಂ ನೆಱೆ। ನೀಡುಂಕರಮಾದಮೆಯ್ದೆ ನೂಳದು ಪಿರಿದುಂ॥

ವ ॥ ದುರ್ಯೋಧನಂ ನಿನ್ನನೇತಱೊಳ್ ನಂಬಿದನೆಂದೊಡೆ ನೀನುಂ ತಾನು
ಮೊರ್ಮೆ ಗಂಗಾನದೀತೀರದೊಳ್ ಬೇಟೆಯಾಡುವಲ್ಲಿ ತತ್ಸಮೀಪದ
ತಾವಸಾಶ್ರಮದೊಳ್ ಸತ್ಯಂತಪರೆಂಬ ದಿವ್ಯಜ್ಞಾನಿಗಳಂ ಕಂಡು
ಪೊಡೆವಟ್ಟಿರ್ವರುಮಂ ಪರಸಿ ನಿನಗೆ ಮುನ್ನಮೇಱಿಲ್ ತರಿಸಿದೊಡೆ
ಸುಯೋಧನನೇವಯಿಸಿ ನಿನ್ನಂ ಪೋಗಲ್ವೇೞ್ದು —

ಆನಿರೆ ನೀಮಿದೇಕೆ ದಯೆಗೆಯ್ದಿರೊ ಮಿಂಗುಲಿಗಂಗೆ ವೇೞ್ಮೆಮಂ—।
ದಾನರನಾಥನಂ ತಿಳಿಪೆ ತನ್ಮನಿ ಭೂಭುಜನೆಯ್ದೆ ನಂಬಿ ಕಾ— ॥
ನೀನ ಸಮಂತು ವಾಟಿಸುವೆನೊಯ್ಯನೆ ಮುಳ್ಳೊಳೆ ಮುಳ್ಳನೆಂದು ತಾ—।
ನೀನಯದಿಂದೆ ಪೆರ್ಚಿ ಪೊರೆದಟ್ಟಿಱೊಳಂದೊಡನುಂಡನಲ್ಲನೇ ॥ ೭ ॥

---

ನೀಡುಮಿಗೆಕೆನ್ನವೆಲ್ಲಂ । ರೂಢಿಯುನುಳ್ಳುದುಮಿವವ್ಯಯದೊಳಧಿಕಾರ್ಥಂ" ಶ. ಮ. ದ. ಸೂ ॥ ೩೦೪ ॥] (ರನ್ನನ ಗದಾಯುದ್ಧದಲ್ಲಿ ದುರ್ಯೋಧನನು ಕರ್ಣನನ್ನು ಕುರಿತು ಪ್ರಲಾಪಿಸುವ ಅವಸರದಲ್ಲಿ "ಆನಱಿವೆಂ ಪೃಥೆಯುಱಿವಳ್। ದಾನವರಿಪುವಱಿವನರ್ಕನಱಿವಂ ಧಿವ್ಯ ॥ ಜ್ಞಾನಿ ಸಹದೇವನಱಿವಂ। ನೀನಾರ್ಗೆಂದಾರುಮಱಿಯುರಂಗಾಧಿಪತೀ" (೫.೧೮) ಎಂದಿರುವುದನ್ನು ಹೋಲಿಸಬಹುದು.) ॥ ೬ ॥

ದುರ್ಯೋಧನಂ — ಇಂತೆಂದು ವಚನಂ ॥ ದುರ್ಯೋಧನಂ, ನಿನ್ನಂ ಏತಱೊಳ್ ನಂಬಿದನೆಂದೊಡೆ = ನಿನ್ನನ್ನು ಆವುದರಿಂದ ನಂಬಿದನೆಂದರೆ (ದುರ್ಯೋಧನನಿಗೆ ಕರ್ಣೋತ್ಪತ್ತಿಯ ವಾಸ್ತವಾಂಶವು ತಿಳಿದುಬಂದುದು ಹೇಗೆಂಬುದನ್ನು ವಿವರಿಸುತ್ತಾನೆ. ಈ ವಿಷಯದ ಪ್ರಸ್ತಾಪವು ಸಂಸ್ಕೃತ ಮಹಾಭಾರತದಲ್ಲಿಯಾಗಲಿ ಕನ್ನಡ ಮಹಾಭಾರತದಲ್ಲಿಯಾಗಲಿ ಇಲ್ಲ. ಪಂಪಭಾರತದಲ್ಲಿ ಮಾತ್ರ ಹೇಳಲ್ಪಟ್ಟಿದೆ) ನೀನುಂ ತಾನುಂ = ನೀನೂ ದುರ್ಯೋಧನನೂ, ಒರ್ಮೆ ಗಂಗಾನದೀತೀರದೊಳ್ ಬೇಂಟೆಯಾಡುವಲ್ಲಿ = ಒಮ್ಮೆ ಗಂಗಾನದಿಯ ತೀರಪ್ರದೇಶದಲ್ಲಿ ಬೇಟೆಯಾಡುತ್ತಿದ್ದಾಗ, ತತ್ಸಮೀಪದ ತಾಪಸಾಶ್ರಮದೊಳ್ = ಅಲ್ಲಿಗೆ ಸಮೀಪದ ತಪಸ್ವಿಗಳ ಆಶ್ರಮದಲ್ಲಿ, ಸತ್ಯಂತಪರೆಂಬ ದಿವ್ಯ ಜ್ಞಾನಿಗಳಂ ಕಂಡು; ಪೊಡೆವಟ್ಟು = ನಮಸ್ಕರಿಸಿದ, ಇರ್ವರುಮಂ = ಇಬ್ಬರನ್ನೂ (ಎರಡು + ವರ್ – ಇರ್ + ವರ್ – ಇರ್ವರ್ 'ಎರಡು' ಎಂಬುದಕ್ಕೆ 'ಇರ್' ಆದೇಶವು. ದ್ವಿಗು ಸಮಾಸವು) ಪರಸಿ = ಆಶೀರ್ವದಿಸಿ, (ಹೊಸಗನ್ನಡದಲ್ಲಿ 'ಹರಸಿ') ನಿನಗೆ ಮುನ್ನಂ ಏಱಿಲ್ ತರಿಸಿದೊಡೆ = ನಿನಗೆ ಮುಂದಾಗಿ ಕುಳಿತುಕೊಳ್ಳಲು ಆಸನವನ್ನು ತರಿಸಿದಾಗ, ಸುಯೋಧನಂ ಏವಯಿಸಿ = ದುರ್ಯೋಧನನು ಮನಸ್ತಾಪಗೊಂಡು, ನಿನ್ನಂ ಪೋಗಲ್ವೇೞ್ದು = ನಿನ್ನನ್ನು ಹೋಗಲಿಕ್ಕೆ ಹೇಳಿ ॥

ಆನಿರೆ — ಇಂತೆಂದು ಉತ್ಪಲಮಾಲಾವೃತ್ತಂ ॥ ಆನಿರೆ = ನಾನಿರುತ್ತಿರಲು (ಕ್ಷತ್ರಿಯ ಕುಲೋತ್ಪನ್ನನೂ ರಾಜಾಧಿರಾಜನೂ ಆದ ನಾನು ಪ್ರಥಮಗೌರವಕ್ಕೆ ಅರ್ಹ

ನಾಗಿರುತ್ತಿರುವಲ್ಲಿ ಎಂದು ಭಾವವು) ನೀಂ = ನೀವು, ಇದೇಕೆ = ಇದೇತಕ್ಕಾಗಿ; ಮೀಂಗುಲಿ ಗಂಗೆ= ಬೆಸ್ತರವನಾದ ಈ ಕರ್ಣನಿಗೆ. (ಕರ್ಣನು ಸೂತಜನಾದುದರಿಂದ, ಬೆಸ್ತರವ ನೆಂದೇ ತಿಳಿಯಬೇಕಾಗಿರುವುದು. ಈತನು ಮೀಂಗುಲಿಗನು. ಇಂತಹ ಹೀನಕುಲ ದವನಿಗೆ ನನಗಿಂತ ಮುಂಚಿತವಾಗಿ ಸತ್ಕಾರವೇ? ಎಂಬುದೀಗ ದುರ್ಯೋಧನನ ಏವದ ಪ್ರಶ್ನೆ 'ಮೀಂಗುಲಿಗಂ'–ಮೀನ್ಗಳಂ ಕೊಲ್ಲುವಾತಂ 'ಮೀಂಗುಲಿ' ಅಥವಾ 'ಮೀಂಗು ಲಿಗಂ'–ತದ್ಧಿತವು. ಇದನ್ನು ಈತನು ಕೊಲ್ಲುವನೆಂಬರ್ಥದಲ್ಲಿ 'ಕುಲಿ' ಎಂಬ ತದ್ಧಿತ ಪ್ರತ್ಯಯವು ಬಂದು 'ಮೀಂಗುಲಿ' ಎಂದಾದ ಬಳಿಕ, 'ಮಾಡುವ ಅರ್ಥದಲ್ಲಿ 'ಗ' ಎಂಬ ತದ್ಧಿತ ಪ್ರತ್ಯಯವು ಸೇರಿ 'ಮೀಂಗುಲಿಗಂ' ಎಂಬರೂಪವಾಯ್ತು. "ಕೊಲ್ವೆ ಡೆಯೊಳ್ ಕುಲಿಯೆಂಬುದಕ್ಕು ಮಂತ್ಯಾದೇಶಂ"–ಶ ಮ. ದ. ಸೂ. ॥ ೧೮೬ ॥ ಮೀನುಗಳನ್ನು ಕೊಂದು ಮಾರುವವನು ಬೆಸ್ತರವನು, ಕುಮಾರವ್ಯಾಸನ ಕನ್ನಡ ಮಹಾ ಭಾರತದಲ್ಲಿ ಕರ್ಣಪರ್ವದ ೩೯ನೇ ಪದ್ಯದಲ್ಲಿ) ಶಲ್ಯನು 'ಎಲವೊ ನಿನ್ನನು ಜಗವರಿಯೆ ಕ। ಬ್ಬಿಲನ ಮಗನನು ಮರಸಿ ಕುರುಪತಿ। ಕುಲಜನನು ಮಾಡಿದನಲಾಒಡನುಂಡು ಪತಿ ಕರಿಸಿ' ಎಂದು 'ಕರ್ಣನು ಕಬ್ಬಿಲನ ಮಗನೆಂದು ಕರೆದಿದ್ದಾನೆ. 'ಕಬ್ಬಿಲ' ಎಂಬ ಪದಕ್ಕೆ ಬೇಡ, ಬಿಲ್ಲ' ಎಂದು ಕಿಟ್ಟೆಲ್ಲರ ನಿಘಂಟುವಿನಲ್ಲಿ ಅರ್ಥಕೊಟ್ಟಿದೆ.) "ಇದೇಕೆ ದಯೆಗೆಯ್ದಿರೊ ಪೇಟಿಂ" = "ಇದೇತಕ್ಕಾಗಿ ಅನುಗ್ರಹಿಸಿದರೋ ಹೇಳಿರಿ", ಎಂದ – ಹೀಗೆಂದು ಹೇಳಿದ, ಆ ನರನಾಥನಂ= ಆ ದುರ್ಯೋಧನನೃಪತಿಯನ್ನು ತನ್ಮುನಿ= (ತತ್+ಮುನಿ) ಆ ಮುನಿಯು, ತಿಳಿಪೆ = ತಿಳಿಸಲು (ನಿನ್ನ ಜನ್ಮವೃತ್ತಾಂತವನ್ನು ತಿಳಿಸಿ ದಾಗ) ಕಾನೀನ = ಎಲೈ ಕರ್ಣನೇ (ಕನ್ಯೆಯ ಪುತ್ರನು 'ಕಾನೀನ'ನು), ಭೂಭುಜಂ ಎಯ್ದೆನಂಬಿ= ಅರಸನಾದ ದುರ್ಯೋಧನನು ನಂಬಿ, ಸಮಂತು= ಹಾಗೆಯೇ(ಸಮಂತು× ಪರಂತು?) ಒಯ್ಯನೆ ಮುಳ್ಳೊಳೆ ಮುಳ್ಳಂ ಪಾಟಿಸುವೆನೆಂದು = ಮೆಲ್ಲನೆ ಮುಳ್ಳಿನಿಂದಲೇ ಮುಳ್ಳನ್ನು ಕೀಳಿಸುವೆನೆಂಬುದಾಗಿ ['ಮುಳ್ಳಿನಿಂದಲೇ ಮುಳ್ಳನ್ನು ಕೀಳಬೇಕು' ಎಂಬುದು ನಾಣ್ಣುಡಿ. ಪಾಟಿಸು (ಧಾತು)–ಕೀಳು. ತಾನೀ ನಯದಿಂದೆ = ತಾನು ಈ ನೀತಿಯಿಂದ. ಪೆರ್ಚಿ= ಹೆಮ್ಮೆಗೊಂಡು, ಪೊರೆದು = ಆಶ್ರಯವಿತ್ತು ಸಲಹಿ; ಅಟ್ಕಿ ಱಿನೊಳ್ = ಪ್ರೀತಿಯಿಂದ, ಅಂದು ಒಡನುಂಡನಲ್ಲನೇ =ಅಂದು ಸಹಭೋಜನವನ್ನು ಮಾಡಿದನಲ್ಲವೇ ? (ಸಹಭೋಜನವನ್ನು ಮಾಡುವುದು ಸಖ್ಯದ, ಮತ್ತು ಸತ್ಕುಲೀನತೆಯ ಲಕ್ಷಣವೆಂದು ತಿಳಿಯಬೇಕು ) ಇಷ್ಟರವರೆಗೆ ದುರ್ಯೋಧನನೂ ತಾನೂ ತನ್ನ ಜನ್ಮ ವೃತ್ತಾಂತವನ್ನರಿಯದಿದ್ದುದರಿಂದ, ಉಭಯಸಾಮಾನ್ಯಮಿತ್ರತ್ವವು ಸ್ವಾಭಾವಿಕ ವಾಗಿಯೆ ನಿಷ್ಕಪಟಭಾವದಿಂದಿದ್ದಿತೆಂದು ಕರ್ಣನು ತಿಳಿದಿದ್ದನು. ದುರ್ಯೋಧನನು ಮಾತ್ರ ಕರ್ಣನ ನಿಜವೃತ್ತಾಂತವನ್ನು ತಿಳಿದಿದ್ದು, ಅರ್ಜುನನೆಂಬ ಮುಳ್ಳನ್ನು ಕರ್ಣ

ಎನೆಯೆನೆ ಬಾಷ್ಪವಾರಿ ಪುಳಕಂ ಬೆರಸೂರ್ಮೆಯೆ ಪೊಣ್ಮೆ ಮುನ್ನೆ ನೀ-।
ಮೆನಗಿದನೇಕೆ ಪೇೞ್ದಿರೊ ನೆಗೞ್ತೆಪೊಗೞ್ತೆಯನಾಂಪಿನಂಸುಯೋ-॥
ಧನನೆನಗೊಳ್ಳಿಕೆಯ್ದ ಕೃತಮುಂ ಪೆಱಗಿಕ್ಕಿ ನೆಗೞ್ತೆ ಮಾಸೆ ನ- ।
ಣ್ಪಿನ ನೆವದಿಂದೆ ಪಾಂಡವರನಾನೊಳವೊಕ್ಕೊಡೆ ನೀಮೆ ಪೇಸಿರೇ ॥ ೮ ॥

---

ನೆಂಬ ಮುಳ್ಳಿನಿಂದಲೇ ಕೀಳಿಸಬೇಕೆಂಬ ಉದ್ದೇಶದಿಂದ ಅದನ್ನು ನುರಿಮಾಡಿದ್ದು, ಈಗ ಕರ್ಣನಿಗೆ ಸ್ವಜನ್ಮ ವೃತ್ತಾಂತವು ತಿಳಿದುಬಂದುದರಿಂದ ಉದ್ವೇಗಗೊಂಡು, ಶ್ರೀಕೃಷ್ಣನು ತನ್ನ ಕುಲವನ್ನೆಚ್ಚರಿಸಿ ತಿಳಿಸಿ, ಪಾಂಡವರಲ್ಲಿ ತನಗೆ ಮಮತೆಯುಂಟಾಗುವಂತೆ ಮಾಡಿದ ನಲ್ಲಾ ಎಂದು ಕರ್ಣನು ಮನದಲ್ಲಿ ಮರುಗಿದನು, ಆದರೂ, ಆತನು 'ಕಡುನನ್ನಿಕಾರ' ನಾದುದರಿಂದ, ಕುಲಹೀನನನ್ನು ಕುಲೀನನ್ನಾಗಿ ಮಾಡಿ, ಅಂಗಾಧಿಪತ್ಯವನ್ನು ಕೊಟ್ಟು, ಜೀವದ ಗೆಳೆಯನನ್ನಾಗಿ ಭಾವಿಸಿ ಒಡನಾಡಿದ ದುರ್ಯೋಧನನ ಪಕ್ಷವನ್ನು ತ್ಯಜಿಸಿದರ ತನ್ನ 'ನನ್ನಿಗೆ' ಕುಂದುಬರುವುದು. ಹೀಗೆ ಕರ್ಣನ ಒಲವು ಇಬ್ಬಗೆಯಾದುದರಿಂದ ಆತನು ಸಂಕಟಕ್ಕೊಳಗಾದನು. ಸ್ವಜನ್ಮವೃತ್ತಾಂತವನ್ನು ಕೇಳಿ ಕರ್ಣನು ಕಳವಳಿಸಿದ ಪರಿಯನ್ನು ಕವಿಯು ಮುಂದಿನ ಪದ್ಯದಲ್ಲಿ ವರ್ಣಿಸುತ್ತಾನೆ. ಲೋಕೋಕ್ತ್ಯಲಂಕಾರವು ॥ ೭ ॥

ಎನೆಯೆನೆ— ಇಂತೆಂದು ಚಂಪಕಮಾಲಾವೃತ್ತಂ ॥ ಎನೆಯೆನೆ = (ಶ್ರೀಕೃಷ್ಣನು ಹೀಗೆ) ಹೇಳುತ್ತಾ ಇರುವಾಗ, (ಕರ್ಣನಿಗೆ) ಬಾಷ್ಪವಾರಿ = ಕಣ್ಣೀರು, ಪುಳಕಂಬೆರಸು = ರೋಮಾಂಚದಿಂದ ಕೂಡಿ, ಊರ್ಮೆಯೆ ಪೊಣ್ಮೆ = ಒಮ್ಮೆಗೇ ಸುರಿಯಲು. [ಪೊಣ್ಮು (ಧಾತು)–ಉದ್ಗಮೇ, ಹೊರಸೂಸು] 'ನೀಂ ಇದಂ ಎನಗೆ ಮುನ್ನೆ ಏಕೆ ಪೇೞ್ದಿರೊ? = ನೀವು ಈ ಸಂಗತಿಯನ್ನು ನನಗೆ ಮುಂಚಿತವಾಗಿಯೇ ಏಕೆ ಹೇಳಿದಿರೋ ? ನೆಗೞ್ತೆ ಪೊಗೞ್ತೆಯುಂ ಆಂಪಿನಂ= ನಡತೆಯು ಹೊಗಳಿಸಿಕೊಳ್ಳುವ ಹಾಗೆ. [ಚರಿತ್ರೆಯ ಪ್ರಸಿದ್ಧಿಯು ಹೊಗಳಿಕೆಯನ್ನು ತಾಳುವ ವರೆಗೆ. ಆಂಪಿನಂ–ಆನ್ವಿನಂ–ಆನುವಂತೆ. ಆನ್ (ಧಾತು)– ಧಾರಣೇ, ಧರಿಸು, ತಾಳು ] ಸುಯೋಧನಂ = ದುರ್ಯೋಧನನು, ಒಳ್ಳಿಕೆಯ್ದ = ಒಳ್ಳಿಯದಾಗಿ ಮಾಡಿದ, [ಒಳ್ಳಿಕೆಯ್ (ಧಾತು)–ಒಳ್ಳಿತಂಕೆಯ್, ಒಳ್ಳಿಯದು ಮಾಡು] ಕೃತಮುಂ = ಉಪಕಾರವನ್ನು, ಪೆಱಗಿಕ್ಕಿ = ಹಿಂದಿಕ್ಕಿ, ಕಡೆಗಣಿಸಿ, ನೆಗೞ್ತೆ ಮಾಸೆ= ಕೀರ್ತಿಯು ಮಾಸಲು, ನಣ್ಪಿನ ನೆವದಿಂದೆ = ಬಾಂಧವ್ಯದ ವ್ಯಾಜದಿಂದ, ಆನ್ ಪಾಂಡವರಂ ಒಳವೊಕ್ಕೊಡೆ = ನಾನು ಪಾಂಡವರೊಡನೆ ಸೇರಿದ್ದಾದರೆ (ಒಳವುಗು–ಒಳಗೆ ಪುಗು–ಒಳಹೊಗು.) ನೀಮೆ ಪೇಸಿರೇ = ನೀವೇ ಹೇಸಲಿಕ್ಕಿಲ್ಲವೇ ? [ಪೇಸು (ಧಾತು)–ಹೇಸು, ಅಸಹ್ಯಪಡು ] ॥ ೮ ॥

ನೆತ್ತಮನಾಡಿ ಭಾನುಮತಿ ಸೋಲ್ತೊಡೆ ಸೋಲಮನೀವುದೆಂದು ಕಾ-।
ಡುತ್ತಿರೆ ಲಂಬಣಂ ಪಱಿಯೆ ಮುತ್ತಿನ ಕೇಡನೆ ನೋಡಿ ನೋಡಿ ಬ-॥
ಳ್ಕುತ್ತಿರೆಯೇವಮಿಲ್ಲದಿವನಾವುದೊ ತಪ್ಪದೆ ಪೇೞಿಮೆಂಬ ಭೂ- ।
ಪೋತ್ತಮನಂ ಬಿಸುಟ್ಟಿರದೆ ನಿಮ್ಮೊಳೆ ಪೊಕ್ಕೊಡೆ ಬೇಡನಲ್ಲನೇ ॥ ೯ ॥

---

ನೆತ್ತಮನಾಡಿ— ಇಂತೆಂದು ಉತ್ಪಲಮಾಲಾವೃತ್ತಂ ॥ ದುರ್ಯೋಧನನಿಗೂ ತನಗೂ ಕೆಳೆತನವು ಎಷ್ಟು ಗಾಢವಾದುದೆಂಬುದನ್ನು ಕರ್ಣನು ಶ್ರುತಪಡಿಸುತ್ತಾನೆ. ತಾನು ಆತನ ಅಂತರಂಗಸ್ನೇಹಿತನೆಂಬುದನ್ನು ಪಗಡೆಯೂಟದ ನಿದರ್ಶನದಿಂದ ರುಜು ಪಡಿಸಿ, ಅಂತಹ ಜೀವದ ಗೆಳೆಯುನನ್ನು ತಾನು ತ್ಯಜಿಸುವುದು ಬಹುಹೀನವಾದುದೆಂಬ ತನ್ನ ನಿಶ್ಚಿತಾಭಿಪ್ರಾಯುವನ್ನು ಹೇಳುತ್ತಾನೆ. ನೆತ್ತಮಂ ಆಡಿ = ಪಗಡೆಯಾಟವನ್ನಾಡಿ (ನೆತ್ತ–ಪಗಡೆಯಾಟ) ಭಾನುಮತಿ ಸೋಲ್ತೊಡೆ =(ದುರ್ಯೋಧನನ ಪತ್ನಿಯಾದ) ಭಾನುಮತಿಯು ಸೋತಲ್ಲಿ, ಸೋಲಮಂ ಈವುದೆಂದು = ಸೋಲವನ್ನು ಕೊಡಬೇಕಂದು ['ಸೊ೦ಲಂ' ಎಂದು–ಸೋಲ್ (ಸೋತುಹೋಗು) ಎಂಬ ಧಾತುವಿನ ಭಾವನಾಮವು], ಕಾಡುತ್ತಿರೆ = ಕಾಡುತ್ತಿರಲು, ಪೀಡಿಸುತ್ತಿರಲು; ಲಂಬಣಂ ಪರಿಯೆ= ಮುತ್ತಿನ ಹಾರವು ಹರಿದುಹೋಗಲು ('ಲಂಬಣಂಪರಿಯೆ' ಎಂಬುದರ ಮುಂದೆ 'ಮುತ್ತಿನ ಕೇಡನೆ' ಎಂದು ಬಂದಿರುವುದರಿಂದ, ಇಲ್ಲಿ 'ಲಂಬಣಂ' ಎಂಬುದು 'ಮುತ್ತಿನ ಲಂಬಣಂ'ಎಂದು 'ನೇಯು' ದಿಂದರಿಯುವುದು ಸುಲಭವಾದುದರಿಂದ, ಅಧ್ಯಾರೋಪಿತವಾಗಿದೆ) ಮುತ್ತಿನ ಕೇಡನೆ ನೋಡಿ ನೋಡಿ= ಮುತ್ತುಗಳು ಚೆಲ್ಲಿ ಹಾಳಾಗುತ್ತಿರುವುದನ್ನು ನೋಡಿ, ಬಳ್ಕುತ್ತಿರೆ = ನಾಚಿಕೆಯಿಂದ ತಲೆತಗ್ಗಿಸಿರಲು, ಏವಮಿಲ್ಲದೆ = ಮನಸ್ತಾಪಗೊಳ್ಳದೆ, ಇವಂ ಆವುದೊ? ತಪ್ಪದೆ ಪೇೞಿಮೆಂಬ= ಇವುಗಳನ್ನು ಕುರಿತು 'ಏನಾಯ್ತು' ತಪ್ಪದೇ ಹೇಳಿರಿ ಎಂಬ, (ಈ ಮುತ್ತುಗಳು ಕೆಟ್ಟುಹೋದುದರಿಂದೇನಾಯ್ತು? ಅದಕ್ಕಾಗಿ ಚಿಂತಿಸಬೇಕಾದ ಅವಶ್ಯಕತೆಯಿಲ್ಲ, ಅದೊಂದು ಸಾರವುಳ್ಳ ವಿಷಯುವಲ್ಲವೆಂದು ದುರ್ಯೋಧನನ ಆಶಯುವು ಎಂದು ತೋರುತ್ತದೆ 'ಮುತ್ತಿನ ಕೇಡನೆ ನೋಡಿ ನೋಡಿ ಬಳ್ಕುತ್ತಿರೆ, ಏವಮಿಲ್ಲದೆ, ಇವನ್ ಆವುದೊ ತಪ್ಪದೆ ಪೇೞಿಂ' ಎಂಬ ಭೂಪೋತ್ತಮನಂ' ಎಂಬುದರಿಂದ 'ಇವಂ ಆವುದೊ ತಪ್ಪದೆ ಪೇೞಿಂ' ಎಂದು ಏವಮಿಲ್ಲದೆ ನುಡಿದುದು ದುರ್ಯೋಧನನೆಂಬುದು ಕಂಡಿತವೇ.) ಎಂಬ ಭೂಪೋತ್ತಮನಂ ಬಿಸುಟ್ಟು = ಹೀಗೆಂದು ಹೇಳುವ ರಾಜಶ್ರೇಷ್ಠನಾದ ದುರ್ಯೋಧನನನ್ನು ತ್ಯಜಿಸಿ [ಭೂಪ+ಉತ್ತಮಂ–ಭೂಪೋತ್ತಮಂ– ಗುಣಸಂಧಿ ಭೂಪರಲ್ಲಿ ಉತ್ತಮಂ ಭೂಪೋತ್ತಮಂ. ಸಪ್ತಮೀ ತತ್ಪುರುಷಸಮಾಸವು. ಬಿಸುಡು (ಧಾತು)–ಬಿಟ್ಟುಬಿಡು, ತ್ಯಜಿಸು.] ಇರದೆ = ತಡೆಯದೆ, ನಿಮ್ಮೊಳೆಪೊಕ್ಕೊಡೆ – ನಿಮ್ಮಲ್ಲಿ ಕೂಡಿದರೆ, ಬೇಡನಲ್ಲನೇ= ನಾನು ಬೇಡನಲ್ಲವೇ, ಹೀನಕುಲದವನಲ್ಲವೇ, ನಾನು

ಎಲ್ಲರಿಗೂ ಬೇಡವಾದವನಲ್ಲವೇ? ನಾನು ದುರ್ಯೋಧನನ ಅಂತರಂಗ ಮಿತ್ರನಾದುದರಿಂದ, ಆತನು ಏಕಾಂತದಲ್ಲಿಯೂ ಕೂಡ ನನಗೆ ಪ್ರವೇಶವನ್ನು ಕೊಡುತ್ತಿದ್ದನು. ಒಮ್ಮೆ ಆತನೂ ಆತನ ಹೆಂಡತಿಯಾದ ಭಾನುಮತಿಯೂ ನಾನೂ–ಹೀಗೆ ಮೂವರೇ ಕೂಡಿ ನೆತ್ತವನಾಡುತ್ತಿದ್ದಾಗ, ಭಾನುಮತಿಯು ಆಟದಲ್ಲಿ ಸೋತಳು; ಆಗ ಸೋಲದ ಪಗಡೆ ಕಾಯನ್ನು ನನ್ನಿಂದ ಕಸಿದುಕೊಳ್ಳಲು ಭಾನುಮತಿಯು ಕಾಡುತ್ತಿದ್ದಾಗ, ಮುತ್ತಿನ ಹಾರವು ಹರಿದುಹೋಗಿ ಮುತ್ತುಗಳು ಚೆಲ್ಲಿ ಹಾಳಾಗುತ್ತಿದ್ದುವು, ಹಾಗುಂಟಾದ ಮುತ್ತಿನ ಕೇಡನ್ನು ನೋಡಿ ನೋಡಿ ಭಾನುಮತಿಯು ನಾಚಿಕೆಯಿಂದ ಬಳ್ಕುತ್ತಿರುವಲ್ಲಿ, ದುರ್ಯೋಧನನು ಭಾನುಮತಿಯು ನನ್ನಲ್ಲಿ ತೋರಿದ ಈ ಸಲುಗೆಗಾಗಿ ಮನಸ್ಸಿನಲ್ಲಿ ಏನೂ ಎಣಿಸಿ ಗೊಳ್ಳದೆ, 'ಅದರಿಂದೇನಾಯ್ತು. ಹೋಗಲಿ ಬಿಡು' ಸಾರವಿಲ್ಲದ ಸಂಗತಿಯಲ್ಲವೇ ತಪ್ಪದೆ ಹೇಳು' ಎಂದು ನನ್ನೊಡನೆ ನಿಷ್ಕಪಟಭಾವದಿಂದ ನುಡಿದು, ನನ್ನನ್ನು ತನ್ನ ಅಂತರಂಗದ ಜೀವದ ಗೆಳೆಯನೆಂದು ವರ್ತಿಸುವ ಭೂಪೋತ್ತಮನಾದ ದುರ್ಯೋಧನನನ್ನು ತ್ಯಜಿಸಿ, ನಿಮ್ಮೊಡನೆ ಕೂಡಿಕೊಂಡರೆ, ನಾನು ನಿಜವಾಗಿಯೂ ಬೇಡನೆನಿಸಿಕೊಳ್ಳೆನೇ? ಈ ತನಕ ನಾನು 'ಬೇಡ'ನಂತೆ ಹೀನಕುಲದವನೆಂದು ಜನರು ತಿಳಿದುಕೊಂಡಿದ್ದುದನ್ನು, ಈಗ ನಾನು ಸ್ವಂತ ಆಚರಣೆಯಿಂದ ನಿಜಮಾಡಿ ತೋರಿಸಿದಂತಾಗುವುದಿಲ್ಲವೇ? ಹಾಗೆ ಮಾಡಿದಾಗ ನಾನು ಸರ್ವಜನರಿಗೂ ಬೇಡವಾದವನಾಗಲಿಕ್ಕಿಲ್ಲವೇ? ಎಂದು ಕರ್ಣನ ಮಾತಿನ ಅಭಿಪ್ರಾಯವಿರುವಂತೆ ತೋರುವುದು ) ಈ ಪದ್ಯಕ್ಕೆ ವಿದ್ವಾಂಸರು ಬೇರೆ ಬೇರೆ ಅರ್ಥಗಳನ್ನು ಹೇಳುವುದು ಕಂಡುಬರುತ್ತದೆ. ಇಲ್ಲಿ ಕೊಟ್ಟಿರುವುದು ನಮ್ಮ ಅಭಿಮತವಾದ ಅರ್ಥಮಾತ್ರ ಈಯೆಲ್ಲಾ ಭಿನ್ನಾಭಿಪ್ರಾಯಗಳಿಗೂ, ೧) 'ಇವನಾವುದೊ' ೨) 'ಇವನಾಯ್ತುದೊ' ೩) 'ಇವನೇವುದೊ' ಎಂಬ ಪಾಠ ಭೇದಗಳೇ ಕಾರಣವು. 'ಇವನಾವುದೊ'? ಎಲ್ಲ ತಾಳೆಯೋಲೆ ಪ್ರತಿಗಳಲ್ಲಿರುವ ಪಾಠವೆಂದು ತೋರಿ ಬರುತ್ತದೆ 'ಇವನಾಯ್ತುದೊ' ಎಂಬುದು ಕ. ಸಾ ಪರಿಷತ್ತಿನವರು ಊಹಿಸಿ ಹಾಕಿದ ಪಾಠಾಂತರವು. 'ಇವನೇವುದೊ' ಎಂಬುದು ಪಂಡಿತ ಮುಳಿಯ ತಿಮ್ಮಪ್ಪಯ್ಯನವರು ಮಾಡಿದ ಪಾಠಾಂತರವು; ಆ ಪಾಠಾಂತರದ ಸಮರ್ಥನೆಯನ್ನೂ, ಅವರು ಸಯುಕ್ತಿಕವಾಗಿ, ವಿದ್ವಜ್ಜನರಿಗೆ ಗ್ರಾಹ್ಯವಾಗುವ ರೀತಿಯಲ್ಲಿ ಮಾಡಿದ್ದಾರೆ. ಆದರೆ ಈ ವರೆಗೆ ಸಿಕ್ಕಿದ ತಾಡಪತ್ರಗಳಲ್ಲಿ, ಇದರಲ್ಲಿ ಭಿನ್ನಪಾಠವಿಲ್ಲದಿರುವುದರಿಂದ, 'ಇವನಾವುದೊ' ಎಂಬ ಸರ್ವತಾಡಪತ್ರಸಮ್ಮತವಾದ ಪಾಠವನ್ನೇ ಇಟ್ಟುಕೊಂಡು, ಅರ್ಥವನ್ನೂ ತಾತ್ಪರ್ಯವನ್ನೂ ಕೊಟ್ಟಿದ್ದೇವೆ. ಪಂಪನ 'ಇವಂ ಆವುದೊ' ಎಂಬ ಪ್ರಯೋಗಕ್ಕೆ ನಾವು ಮಾಡಿರುವ ತಾತ್ಪರ್ಯಾರ್ಥಗಳ ಔಚಿತ್ಯವನ್ನು ಸಹೃದಯರು ನಿರ್ಣಯಿಸಬೇಕು.) ॥ ೯ ॥

ವ ॥ ಎಂಬುದುಂ ಕರ್ಣಂ ತನಗೆಂತುಮೊಡಂಬಡದುದಂ ನಿರ್ಣಯಮಾಗ
ಱಿದು ಮಗುೞ್ಚೇೞ್ದು ನಾರಾಯಣಂ ಪೋದಂ.

---

ಎಂಬುದುಂ — ಇಂತೆಂದು ವಚನಂ ॥ ಎಂಬುದುಂ = (ಕರ್ಣನು ಹೀಗೆ) ಹೇಳಿದಾಗ, ಕರ್ಣಂ ತನಗೆ ಎಂತುಂ ಒಡಂಬಡದುದಂ ನಿರ್ಣಯಮಾಗಿ ಅಱಿದು = ಕರ್ಣನು ತನ್ನ (ಅಪೇಕ್ಷೆಯಂತೆ) ಒಪ್ಪದಿದ್ದುದನ್ನು ನಿರ್ಣಯವಾಗಿ ತಿಳಿದು, ಮಗುೞ್ಚೇೞ್ದು = (ಕರ್ಣನನ್ನು) ಹಿಂತಿರುಗಿ ಹೋಗುವುದಕ್ಕೆ ಹೇಳಿ, ನಾರಾಯಣಂ ಪೋದಂ = ಶ್ರೀಕೃಷ್ಣನು ಹೋದನು.

ಎಂಬಲ್ಲಿಗೆ ಕರ್ಣರಸಾಯನದಲ್ಲಿ
ತೃತೀಯಗ್ರಾಸವು ಮುಗಿದುದು



## ಚತುರ್ಥ ಗ್ರಾಸಂ.

ಇತ್ತಲಂಗರಾಜನುಮಾತ್ಮಾಲಯಕ್ಕೆವಂದು ಚಿಂತಾಕ್ರಾಂತನಾಗಿ-
ಕುರುಪತಿಗಿಲ್ಲ ದೈವಬಲಮಾಜಿಗೆ ಮೇಲ್ಮಲೆಗೆಯ್ವರಾಗಳುಂ ।
ಗುರುಗುರುಪುತ್ರಸಿಂಧುಸುತರಾಳ್ದನುಮೆನ್ನನೆ ನಚ್ಚಿಪೆರ್ಚಿಮುಂ- ॥
ಪೊರೆದನಿದಿರ್ಚಿ ಕಾದುವರುಮೆನ್ನಯ ಸೋದರರೆಂತು ನೋಡಿಕೊ-।
ಕ್ಕರಿಸದೆ ಕೊಲ್ವೆನೆನ್ನೊಡಲನಾಂ ತವಿಪೆಂ ರಣರಂಗಭೂಮಿಯೊಳ್ ॥೧॥

---

ಅವತರಣಿಕೆ ॥ ಕೃಷ್ಣನ ಭೇದೋಪಾಯದಿಂದ ಕಲುಷಿತವಾದ ಕರ್ಣನ ಚಿತ್ತವು ಕರ್ತವ್ಯವೆಂಬ ಕತಕದ ಮೂಲಕ ತಿಳಿವನ್ನು ಹೊಂದುತ್ತಿದ್ದಿತು. ಹಾಗೆಯೇ ಮರು ದಿನ ಮುಂಜಾವದಲ್ಲಿ ಸ್ವಾಮಿಸೇವಾನಿಷ್ಣಾತನಾದ ರಾಧೇಯನು ಸ್ನಾನಕ್ಕಾಗಿ ಗಂಗಾ ನದಿಗೆ ಹೋಗುವನು ಅಲ್ಲಿಗೆ ಕುಂತಿಯು ಬಂದು "ಮಗನೇ ನಾನು ನಿನ್ನನ್ನು ಪಡೆದಾಕೆಯು! ತಮ್ಮಂದಿರ ಮೇಲೆ ಮುನಿಯಲಾಗದು" ಎಂದು ಬೇಡಿಕೊಳ್ಳುವುದನ್ನು ಅಲ್ಲಗಳೆಯಲಾರದೆ ಜನನೀಯಾಜ್ಞಾವಚನದಿಂದ ಸಂಬದ್ಧನಾಗುವನು ॥

ಇತ್ತಲ್ — ಇಂತೆಂದು ವಚನಂ ॥ ಇತ್ತಲ್ = ಇತ್ತ, ಅಂಗರಾಜನುಂ = ಕರ್ಣನೂ, ಆತ್ಮಾಲಯಕ್ಕೆ ವಂದು= ತನ್ನ ಬೀಡಿಂಗೆ ಬಂದು, ಚಿಂತಾಕ್ರಾಂತನಾಗಿ= ಮುಂದೇನು ಮಾಡಬೇಕೆಂಬ ಯೋಚನೆಗೊಳಗಾದವನಾಗಿ (ಆತ್ಮ+ಆಲಯ-ಆತ್ಮಾಲಯ, ಸವರ್ಣದೀರ್ಘಸಂಧಿ, ಷಷ್ಠೀತತ್ಪುರುಷ ಸಮಾಸವು. ಚಿಂತಾ+ಆಕ್ರಾಂತಂ- ಚಿಂತಾಕ್ರಾಂತಂ, ಸವರ್ಣದೀರ್ಘಸಂಧಿ, ತೃತೀಯಾತತ್ಪುರುಷಸಮಾಸವು, ಚಿಂತೆಯಿಂದ ಆಕ್ರಾಂತನು, ಆಕ್ರಮಿಸಲ್ಪಟ್ಟವನು) ॥

ಕುರುಪತಿಗಿಲ್ಲ — ಇಂತೆಂದು ಚಂಪಕಮಾಲಾವೃತ್ತಂ ॥ ಕುರುಪತಿಗೆ ದೈವ ಬಲಂ ಇಲ್ಲ = ದುರ್ಯೋಧನನಿಗೆ ದೈವಬಲವಿಲ್ಲವು. ಗುರು, ಗುರುಪುತ್ರ ಸಿಂಧುಸುತರ್ = ದ್ರೋಣ, ಅಶ್ವತ್ಥಾಮ, ಭೀಷ್ಮರು, ಆಗಳುಂ= ಆವಾಗಲೂ, ಆಜಿಗೆ ಮೇಲ್ಮಲೆಗೆಯ್ವರ್ = ಮೇಲಿಂದಮೇಲೆ ಯುದ್ಧಮಾಡುತ್ತ ಇರುವರು, [ಮೇಲ್ಮಲೆಗೆಯ್ (ಧಾತು) ಮುಂದಾಗಿ ಪ್ರತಿಭಟಿಸು] ಆಳ್ದನುಂ= ಒಡೆಯನಾದ ದುರ್ಯೋಧನನೂ, ಎನ್ನನೆನಚ್ಚಿ = ನನ್ನನ್ನೇ ನಂಬಿ; ಪೆರ್ಚಿ ಹೆಮ್ಮೆಯಿಂದುಬ್ಬಿ, [ನಚ್ಚು (ಧಾತು)-ವಿಶ್ವಾಸೇ, ನಂಬು, ಪೆರ್ಚು (ಧಾ)-ವಿಸ್ತಾರೇ,] ಮುಂ ಪೊರೆದಂ= ಮುಂದಾಗಿ ಪೋಷಿಸಿದನು-[ಪೊರೆ (ಧಾತು) ಪೋಷಣೇ, ನಾಮಪದವಾದರೆ 'ಹತ್ತಿರ' ಎಂಬರ್ಥವೂ ಇದೆ ಪೊರೆ = ಭಾರ, ಹೊರೆ, ಇದಿರ್ಚಿ ಕಾದುವರುಂ = ಇದಿರೊಡ್ಡಿ ಕಾದುವವರಾದರೂ ಎನ್ನಯ ಸೋದರರ್ = ನನ್ನ ತಮ್ಮಂದಿರು ನೋಡಿ = ನೋಡುನೋಡುತ್ತಾ, ಕೊಕ್ಕರಿಸದೆ =

ಅಱಿದೆಂ ಸೋದರರೆಂದು ಪಾಂಡವರನಿನ್ನೆಂತೆನ್ನರಂ ಕೊಲ್ವೆನ-।
ಟ್ಟಿಱಿಗೊಳೆನ್ನಂ ಪೊರೆದಯ್ದೆ ನಂಬಿದ ನೃಪಂಗೆಂತಾಜಿಯೊಳ್ ತಪ್ಪುವೆಂ ॥
ತಱಿಸಂದುದ್ಧತವೈರಿಭೂಪಬಲದೊಡ್ಡಳ್ಳಾಡೆ ಲೆಕ್ಕಕ್ಕೆ ತ-।
ಱ್ತ್ರಿಱಿದೆನ್ನಾಳ್ದನಿನಾನೆ ಮುಂಚೆ ನಿಱಿಪೆಂ ಕೆಯ್ಕೊಂಡು ಕಟ್ಟಾಯ
ಮುಂ ॥ ೨ ॥

---

ಮನಸ್ಸಿನಲ್ಲಿ ಅಸಹ್ಯವಡದೆ, ಎಂತು ಕೊಲ್ವೆಂ = ಹೇಗೆ ಕೊಲ್ಲುವೆನೊ? ಎನ್ನ ಒಡಲಂ = ನನ್ನ ಈ ಶರೀರವನ್ನು, ಆಂ = ನಾನು, ರಣರಂಗಭೂಮಿಯೊಳ್ = ಯುದ್ಧರಂಗದಲ್ಲಿ, ತವಿಪೆಂ = ನಾಶಹೊಂದುವಂತೆ ಮಾಡುವೆನು ರಣರಂಗಭೂಮಿಯಲ್ಲಿ ತನ್ನ ಶರೀರ ವನ್ನೀಡಾಡುವೆನೆಂದು ಕರ್ಣನ ತೀರ್ಮಾನವು ಇದನ್ನು 'ಅಱಿದೆಂ ಸೋದರರೆಂದು' ಮುಂದಿನ ಪದ್ಯದಲ್ಲಿ ಸಮರ್ಪಕವಾಗಿ ಸಮರ್ಥಿಸುತ್ತಾನೆ [ತವು (ಧಾತು)–ಕ್ಷಯೇ, ನಾಶವಾಗು.] ॥ ೧ ॥

ಅಱಿದೆಂ — ಇಂತೆಂದು ಮತ್ತೇಭವಿಕ್ರೀಡಿತವೃತ್ತಂ ॥ ಪಾಂಡವರಂ ಸೋದರರೆಂದು ಅಱಿದೆಂ = ಪಾಂಡವರನ್ನು ತಮ್ಮಂದಿರೆಂದು ತಿಳಿದೆನು. ಇನ್ ಎನ್ನರಂ = ಇನ್ನು ನನ್ನವರಾದ ಅವರನ್ನು, ಎಂತು ಕೊಲ್ವೆಂ = ಹೇಗೆ ಕೊಲ್ಲಲಿ? ಅಟ್ಟಿಱಿಗೊಳ್ = ಪ್ರೀತಿಯಿಂದ, ಎನ್ನಂ ಪೊರೆದು ಎಯ್ದೆ ನಂಬಿದ ನೃಪಂಗೆ = ನನ್ನನ್ನು ಪೋಷಿಸಿ ಚೆನ್ನಾಗಿ ನಂಬಿದ ಅರಸನಾದ ದುರ್ಯೋಧನನಿಗೆ, ಆಜಿಯೊಳ್ = ಯುದ್ಧದಲ್ಲಿ ಎಂತು ತಪ್ಪುವೆಂ = ಹೇಗೆ ತಪ್ಪಿನಡೆಯಲಿ? [ತಪ್ಪು (ಧಾತು)–ಸ್ಖಲನೇ], ತಱಿಸಂದು = ನಿಶ್ಚಯವಾಗಿ [ತಱಿಸಲ್ (ಧಾತು)–ನಿಶ್ಚಯೇ] ಉದ್ಧತವೈರಿಭೂಪಬಲದ ಒಡ್ಡು ಅಳ್ಳಾಡೆ = ದರ್ಪವೇರಿದ ಶತ್ರುರಾಜರ ಸೈನ್ಯದ ಸಮೂಹವು ಕಾಲುಕಾಡುವ ಹಾಗೆ, ಲೆಕ್ಕಕ್ಕೆ ತಱ್ತ್ರಿಱಿದು = ಲೆಕ್ಕಕ್ಕೆ ಮಾತ್ರ (ತೋರಿಕೆಗೆ) ಧ್ವಂಸಗೆಯ್ದು [ತಳ್ತ್ರಿಱಿ (ಧಾತು) - ಮೇಲೆಬಿದ್ದು ಹೊಡೆ, ಧ್ವಂಸಮಾಡು. (ತಳ್ತು + ಇಱಿ) ತಳ್ = ತಳ್ಳು, ಇಱಿ = ಹೊಡೆ 'ತಳ್ತ್ರಿಱಿ'ಯೆಂಬುದು ಸಂಯುಕ್ತಧಾತು ಕಟ್ಟಾಯಮುಂ ಕೆಯ್ಕೊಂಡು = ಬಹುಸಾಮರ್ಥ್ಯದಿಂದ ಶ್ರೇಯಸ್ಕರವರ್ತನೆಯನ್ನಂಗೀಕರಿಸಿ [ಕಡಿದು + ಆಯಂ–ಕಟ್ಟಾಯಂ ವಿಶೇಷಣ ಪೂರ್ವಪದಕರ್ಮಧಾರಯ ಸಮಾಸವು.] ಎನ್ನ ಆಳ್ದನಿಂ ಮುಂಚೆ = ನನ್ನ ಸ್ವಾಮಿಗಿಂತಲೂ ಮುಂದಾಗಿಯೇ, ಆಂ ನಿಱಿಪೆಂ = ನಾನು ಸ್ಥಾಪಿಸುವೆನು [ನಿಱಿಪೆಂ–ನಿಱಿಸುವೆಂ ನಿಱಿಸು (ಧಾತು)–ನಿಲ್ಲಿಸು, ಸ್ಥಾಪಿಸು. "ಚಾಗದಕಂಬಮಮಂ ನಿಱಿಸಿ, ಬೀರದಶಾಸನಮಂ ನೆಗಟ್ಟಿ" ಪಂ. ಭಾ. ೧।೫೦. ಹೊರಗಣ ತೋರಿಕೆಗೆ ಮಾತ್ರ ಯುದ್ಧರಂಗದಲ್ಲಿ ಶತ್ರುಸೈನ್ಯವನ್ನು ನಾಶಗೊಳಿಸಿ, ತನ್ನ ಶರೀರವನ್ನು ಯುದ್ಧರಂಗದಲ್ಲಿ ನೀಗುವೆನು ಎಂದು ಕರ್ಣನ ನಿಶ್ಚಿತಾಭಿಪ್ರಾಯವು.

ವ ॥ ಎಂದು ಮುಂತಪ್ಪ ಕಜ್ಜಮಂ ತನ್ನೊಳೆ ಬಗೆದವಾರ್ಯವೀರ್ಯಂ ಸೂರ್ಯ ದಿನದಂದು ಮಂದಾಕಿನಿಯಂ ಮಿಾಯಲೆಂದು ಬಂದು ದುರ್ಯೋಧನ ನಟ್ಟಿದ ದೇವಸಬಳದ ಪದಿನೆಂಟು ಕೋಟಿ ಪೊನ್ನುಮನೊಟ್ಟಿ ಬೆಟ್ಟಾಗೆ ಪುಂಜಿಸಿ–

ಸೋವರ್ಣ ವಸುಧಾರೆಯಂ ಕೆ– ।
ಯ್ಯಾವರ್ಣ ನಿಧಾನಮುಮನಿಟಿಸಿ ತನ್ನೀವಳವಿಂ ॥

---

ತನ್ನ ಆಳ್ದನಿಗಿಂತಲೂ ಮುಂಚಿತವಾಗಿ ತಾನು ರಣರಂಗದಲ್ಲಿ ಶರೀರಾರ್ಪಣವಾಡುವೆ ನೆಂದು ನಿರ್ಧರಿಸಿದನು ಎಂದು ತಾತ್ಪರ್ಯವು. ॥ ೨ ॥

ಎಂದು — ಇಂತೆಂದು ವಚನಂ ॥ ಎಂದು = ಹೀಗೆಂಬುದಾಗಿ (ಕರ್ಣನು); ಮುಂತಪ್ಪ = ಮುಂದೆ ಆಗುವ, [ಆಗು (ಧಾತು)–ಆಗುವ, ಅಪ್ಪ–ಇತ್ಯಾದಿರೂಪಗಳು, ಹೊಸಗನ್ನಡದಲ್ಲಿ ಅಹ' ಎಂದೂ ಉಂಟು, ಮುಂತೆ+ಅಪ್ಪ] ಕಜ್ಜಮಂ = ಕಾರ್ಯವನ್ನು [ಕಜ್ಜ–(ಸಂ) ಕಾರ್ಯ.] ತನ್ನೊಳೆ ಬಗೆದು = ತನ್ನಲ್ಲಿಯೇ ಆಲೋಚಿಸಿ [ಬಗೆ (ಧಾತು)–ಪರಿಭಾವೇ (ಆಲೋಚಿಸು) ಬಗೆ (ನಾ.ಪ.) = ಮನಸ್ಸು, ಚಿತ್ತ] ಅವಾರ್ಯ ವೀರ್ಯಂ = ಬಹುಸತ್ತ್ವಶಾಲಿಯಾದ ಕರ್ಣನು. [ಅವಾರ್ಯ- ನಿವಾರಿಸಲು ಅಶಕ್ಯ ವಾದ, ವೀರ್ಯ–ಸತ್ತ್ವವುಳ್ಳವನು–ಕರ್ಣನಿಗೆ ವಿಶೇಷಣವು) ಸೂರ್ಯದಿನದಂದು = ಆದಿತ್ಯವಾರದಂದು ('ಅವಾರ್ಯವೀರ್ಯಂ ಸೂರ್ಯದಿನದಂದು' ಇಲ್ಲಿ ವರ್ಣವೃತ್ತಿಯು ಬಂದಿದೆ.) ಮಂದಾಕಿನಿಯಂ ಮಿಾಯಲೆಂದು ಬಂದು = ಗಂಗಾನದಿಯಲ್ಲಿ ಸ್ನಾನ ವಾಡುವುದಕ್ಕೆಂದು ಬಂದು [ಮಿಾ (ಧಾತು)–ಸ್ನಪನೇ, ಸ್ನಾನವಾಡು 'ಮಿಾ' ಎನ್, 'ಪೊಱಿಮಡು', ಈ ಕ್ರಿಯೆಗಳು ದ್ವಿತೀಯಾವಿಭಕ್ತಿಯನ್ನು ವಿಶೇಷಿಸುವುವು. ಉದಾ ಮಂದಾಕಿನಿಯಂ ಮಿಾಯಲೆಂದು, ದ್ರೋಣನುಂಕೃಪನುಂಕರ್ಣನಂ ಇಂತೆಂದರ್, ಆರ ಮನೆಯುಂ ಪೊಱಿಮಟ್ಟು, ಎಂಬ ಪ್ರಯೋಗಗಳನ್ನು ನೋಡಿರಿ ] ದುರ್ಯೋಧನಂ ಅಟ್ಟಿದ = ದುರ್ಯೋಧನನು ಕಳಿಸಿಕೊಟ್ಟ [ಅಟ್ಟು (ಧಾತು)–ಅನುಧಾವನೇ ಕಳಿಸಿ ಕೊಡು.] ದೇವಸಬಳದ ಪದಿನೆಂಟು ಕೋಟಿ ಪೊನ್ನುಮಂ = ದೇವಮಾನದ ಹದಿನೆಂಟು ಕೋಟಿ ಸುವರ್ಣದ ನಾಣ್ಯಗಳನ್ನು, ಒಟ್ಟಿ = ಒಟ್ಟುಗೂಡಿಸಿ [ಒಟ್ಟು (ಧಾತು)–ಏಕ ಕ್ರಿಯಾಯಾಂ, ಒಂದುಮಾಡು, ಒಟ್ಟುಕೂಡಿಸು] ಬೆಟ್ಟಾಗೆ ಪುಂಜಿಸಿ = ಗುಡ್ಡೆಯಾಗು ವಂತೆ ರಾಶಿಹಾಕಿ [ಬೆಟ್ಟು+ಆಗೆ = ಬೆಟ್ಟಾಗೆ ಕನ್ನಡ ಸ್ವರಲೋಪಸಂಧಿ, ಪುಂಜಿಸು (ಧಾತು)–ರಾಶೌ, ರಾಶಿ ಹಾಕು.

ಸೋವರ್ಣ — ಇಂತೆಂದು ಕಂದಂ ॥ ತನ್ನ ಈವ ಅಳವಿಂ = ತನ್ನ ದಾನ ಬಾಹುಳ್ಯ ದಿಂದ, ತನ್ನ ತ್ಯಾಗದ ಬಲ್ಮೆಯಿಂದ [ಈ (ಧಾತು)–ಪ್ರದಾನೇ, ಕೊಡು] ಸೋವರ್ಣವಸು

ಪಾರ್ವಂಗಮಳಿಪಿ ಬೇಡಿದ ।
ಪಾರ್ವಂಗಂ ಪಿರಿದನಿತ್ತನಂಗಮಹೀಶಂ ॥ ೩ ॥

ವ ॥ ಅಂತು ಚಾಗಂಗೆಯ್ದು ಜಗನ್ಮಂಗಳಗಂಗಾವಾರಿಯೊಳನಿವಾರಿತಪರಾಕ್ರಮನಘಮರ್ಷಣಪೂರ್ವಕಂ ಮಿಂದು ಕನಕಪಾತ್ರದೊಳ್ ತೆಕ್ಕನೆ ತೀವಿದ ಕನಕಕಮಳಂಗಳಿಂದಾದಿತ್ಯತೇಜನಾದಿತ್ಯಂಗರ್ಘ್ಯಮೆತ್ತಿ ಸೂರ್ಯಜಂ ಸೂರ್ಯಮಂತ್ರಂಗಳನೋದಿ ನೀರಂ ಸೂಸಿ ತ್ರಿಃಪ್ರದಕ್ಷಿಣಂಗೆಯ್ವಾಗಳ್ —

---

ಧಾರೆಯಂ = ಸುರಿಯುವ ದ್ರವ್ಯದ ಮಳೆಯನ್ನು [ಸೋರ್ (ಧಾತು)–ಸ್ರವಣೇ, ಸುರಿ] ಕೆಯ್ವಾರ್ವ ನಿಧಾನಮುಮಂ = ಕೈಗೆಬಂದ ದ್ರವ್ಯನಿಧಿಯನ್ನೂ [ಕೆಯ್ ಸಾರ್ ಕೈಸೇರು] ಇಟಿಸಿ = ಕೀಳ್ಮಾಡಿ [ಇಟಿಸು (ಧಾತು)–ಕೀಳ್ಮಾಡು ಸೋರ್ವವಸು ಧಾರೆಗಿಂತಲೂ, ಕೆಯ್ವಾರ್ವನಿಧಾನಕ್ಕಿಂತಲೂ ಅಧಿಕವಾಗಿ ಕರ್ಣನು ಈವ ಬಲ್ಮೆಯನ್ನು ತೋರಿದನೆಂದು ತಾತ್ಪರ್ಯವು] ಪಾರ್ವಂಗಂ = ಅಪೇಕ್ಷಿಸಿದವನಿಗೂ, ಬೇಡಿದವನಿಗೂ, [ಪಾರ್ವಂ–ನಿರೀಕ್ಷಿಸುವವನು ಪಾರ್ (ಧಾತು)–ನಿರೀಕ್ಷಣೇ] ಅಳಿಪಿಂ ಬೇಡಿದ = ಆಸೆಪಟ್ಟು ಬೇಡಿದ (ಅಳಿಪು = ಆಸೆ, ತೃಷ್ಣೆ) ಪಾರ್ವಂಗಂ = ಬ್ರಾಹ್ಮಣನಿಗೂ (ಪಾರ್ವಂ–ಬ್ರಾಹ್ಮಣನು ಹೊಸಗನ್ನಡದಲ್ಲಿ 'ಹಾರುವನು') ಅಂಗಮಹೀಶಂ = ಅಂಗರಾಜ್ಯಾಧಿಪನಾದ ಕರ್ಣನು, ಪಿರಿದನಿತ್ತಂ = ಧಾರಾಳವಾಗಿ ಕೊಟ್ಟನು. ॥ ೩ ॥

ಅಂತು ಚಾಗಂಗೆಯ್ದು — ಇಂತೆಂದು ವಚನಂ ॥ ಅಂತು ಚಾಗಂಗೆಯ್ದು = ಹಾಗೆ ದಾನಮಾಡಿ, ಜಗನ್ಮಂಗಳ ಗಂಗಾವಾರಿಯೊಳ್ = ಲೋಕಪಾವನವಾದ ಗಂಗೆಯ ನೀರಲ್ಲಿ (ಜಗತ್ + ಮಂಗಳ–ಜಗನ್ಮಂಗಳ–ಸಮಸ್ತಲೋಕದ ಪಾಪವನ್ನು ಹೋಗಲಾಡಿಸುವ), ಅನಿವಾರಿತಪರಾಕ್ರಮಂ = ನಿವಾರಿಸಲಸಾಧ್ಯವಾದ ಪರಾಕ್ರಮವನ್ನುಳ್ಳ ಕರ್ಣನು ('ಅನಿವಾರ್ಯವೀರ್ಯಂ' ಎಂಬುದರಂತೆ, 'ಅನಿವಾರಿತ ಪರಾಕ್ರಮಂ' ಎಂಬುದೂ ಕರ್ಣನಿಗೆ ವಿಶೇಷಣವು) ಅಘಮರ್ಷಣಪೂರ್ವಕಂ ಮಿಂದು = ಅಘಮರ್ಷಣ ಸೂಕ್ತವನ್ನುಚ್ಚರಿಸುತ್ತ ಸ್ನಾನಮಾಡಿ, ('ಅಘಮರ್ಷಣ'ವೆಂಬುದು ಸರ್ವಪಾಪಧ್ವಂಸಕವಾದ ವೇದಮಂತ್ರವು ಋಗ್ವೇದದ ೧೦ನೆ ಮಂಡಲದ ೧೯೦ನೆಯ ಸೂಕ್ತವು ಈ ಸೂಕ್ತಕ್ಕೆ 'ಮಾಧುಚ್ಛಂದಸೋಽಘಮರ್ಷಣಃ' ಋಷಿಯಾದುದರಿಂದ, 'ಅಘಮರ್ಷಣ'ವೆಂದು ಈ ಮಂತ್ರಕ್ಕೆ ಹೆಸರಾಗಿದೆ. ಸ್ನಾನಮಾಡುವಾಗ ನೀರಲ್ಲಿ ನಿಂತುಕೊಂಡು ಈ ಸೂಕ್ತವನ್ನು ಮೂರುಬಾರಿ ಜಪಿಸಿದರೆ ಎಲ್ಲಾ ಪಾಪಗಳೂ ಧ್ವಂಸವಾಗುವುವು ಎಂದು ಅಮರಕೋಶದಲ್ಲಿ "ಸರ್ವೈನಸಾಮಪಧ್ವಂಸಿ ಜಪ್ಯಂತ್ರಿಷ್ವಘಮರ್ಷಣಂ" ಎಂಬ ಶ್ಲೋಕದ ತಾತ್ಪರ್ಯವು ಕನಕಪಾತ್ರದೊಳ್ ತೆಕ್ಕನೆ ತೀವಿದ = ಸುವರ್ಣ

ಸಂಗತತರಂಗಯುತೆಯಂ ।
ಮಂಗಳಲಕ್ಷಣೆಯನಂದು ಭೋಂಕನೆ ಕಂಡಂ ॥
ಗಂಗಾಂಗನೆಯಂ ಕಾಣ್ಬವೊ-।
ಲಂಗನೃಪಂ ಮುಂದೆ ನಿಂದ ಕೊಂತಿಯನಾಗಳ್ ॥ ೪ ॥

---

ಪಾತ್ರದಲ್ಲಿ ಕಿಕ್ಕಿರಿದು ತುಂಬಿದ, ['ತೆಕ್ಕನೆ' ಶೀಘ್ರಾರ್ಥದಲ್ಲಿ ಅವ್ಯಯವು, ತೀವು (ಧಾತು)–ಪೂರಣೇ, ತುಂಬಿಸು] ಕನಕಕಮಲಂಗಳಿಂದೆ = ಸುವರ್ಣಕಮಲಗಳಿಂದ, ಆದಿತ್ಯತೇಜಂ ಆದಿತ್ಯಂಗೆ ಅರ್ಘ್ಯಮೆತ್ತಿ = ಆದಿತ್ಯನಂತೆ ತೇಜಸ್ಸುಳ್ಳವನಾದಾಕರ್ಣನು ಆದಿತ್ಯನಿಗೆ ಅರ್ಘ್ಯವನ್ನೆತ್ತಿ (ಆದಿತ್ಯತೇಜನಾದುದರಿಂದ ಆದಿತ್ಯನಿಗೆ ಅರ್ಘ್ಯವನ್ನೆತ್ತಿದು ದರಲ್ಲಿ ಔಚಿತ್ಯವಿದೆ. 'ಆದಿತ್ಯತೇಜಂ' ಎಂಬುದು ಕರ್ಣನಿಗೆ ವಿಶೇಷಣವು 'ಅರ್ಘ್ಯ' = ಪೂಜಾವಿಧಿಯಲ್ಲಿ ಕೈಗೆಕೊಡುವ ನೀರು. 'ಅರ್ಘಃ ಪೂಜಾವಿಧಿಃತದರ್ಥಂದ್ರವ್ಯಂ ಅರ್ಘ್ಯಂ', ಅಂಜಲಿಯಲ್ಲಿ ನೀರನ್ನು ತುಂಬಿಕೊಂಡು, ದೇವತೆಯನ್ನು ನೋಡಿ, ಮಂತ್ರೋ ಚ್ಚಾರಣಪೂರ್ವಕವಾಗಿ 'ಇದಮರ್ಘ್ಯಂ' ಎಂದು ಹೇಳಿ, ಆ ನೀರನ್ನು ಚೆಲ್ಲುವ ರೀತಿಗೆ, ಅರ್ಘ್ಯವನ್ನು ಕೊಡುವುದೆಂದು ಹೇಳುವರು (ಇಲ್ಲಿ ಕರ್ಣನು ಆದಿತ್ಯನಿಗೋಸ್ಕರ ಅರ್ಘ್ಯಜಲವನ್ನು ತುಂಬಿಕೊಂಡು ಕೈಯ್ಯನ್ನೆತ್ತಿ, ಮುಂದೆ ಹೇಳುವಂತೆ ಸೂರ್ಯಮಂತ್ರ ಗಳನ್ನು ಹೇಳಿ, ಅರ್ಘ್ಯಜಲವನ್ನು ಚೆಲ್ಲಿದನು ಎಂದು ತಾತ್ಪರ್ಯವು) ಸೂರ್ಯಜಂ = ಸೂರ್ಯ ಪುತ್ರನಾದ ಕರ್ಣನು, ಸೂರ್ಯಮಂತ್ರಂಗಳಂ ಓದಿ = ವೇದೋಕ್ತವಾದ ಸೂರ್ಯ ಸೂಕ್ತಗಳನ್ನು ಹೇಳಿ, (ಋಗ್ವೇದದಲ್ಲಿ ಸೂರ್ಯದೇವತೆಗೆ ಸಂಬಂಧಿಸಿದ ಹಲವು ಸೂಕ್ತ ಗಳಿವೆ ಆದಿತ್ಯನಮಸ್ಕಾರದಲ್ಲಿ ಇವುಗಳನ್ನು ಹೇಳುತ್ತಾರೆ 'ಆದಿತ್ಯತೇಜನಾದು ದರಿಂದ ಆದಿತ್ಯಂಗೆ ಅರ್ಘ್ಯವಿತ್ತಂತೆಯೆ, ಸೂರ್ಯಜನಾದುದರಿಂದ ಸೂರ್ಯಸೂಕ್ತಂಗಳ ನ್ನೋದಿದುದರಲ್ಲಿ ವಿಶೇಷವಿದೆ), ನೀರಂ ಸೂಸಿ = (ಅರ್ಘ್ಯಕ್ಕೆಂದೆತ್ತಿದ) ನೀರನ್ನು ಚೆಲ್ಲಿ, [ಸೂಸು (ಧಾತು)–ಪರಿತ್ಯಾಗೇ] ತ್ರಿಃಪ್ರದಕ್ಷಿಣಂಗೆಯ್ವಾಗಳ್ = ಮೂರುಬಾರಿ ಪ್ರದಕ್ಷಿಣೆ ಮಾಡುವಷ್ಟರಲ್ಲಿ, ('ಮೂಮೆ ಒಲವಂದು' ಎಂಬ ಪ್ರಯೋಗವನ್ನುನೋಡಿರಿ' ಬಲಗಡೆ ಯಿಂದ ಸುತ್ತುಬರುವುದು ಪ್ರದಕ್ಷಿಣವೆನಿಸಿಕೊಳ್ಳುವುದು ) ॥

ಸಂಗತ — ಇಂತೆಂದು ಕಂದಂ ॥ ಅಂದು = ಆ ಸಂದರ್ಭದಲ್ಲಿ, ಅಂಗನೃಪಂ = ಅಂಗರಾಜನಾದಾಕರ್ಣನು; ಸಂಗತ ತರಂಗಯುತೆಯಂ, ಮಂಗಳಲಕ್ಷಣೆಯಂ, ಗಂಗಾಂ ಗನೆಯಂ ಕಾಣ್ಬವೊಲ್ = ಚೆಲ್ವಿನ ತೆರೆಗಳಿಂದ ಕೂಡಿದವಳೂ, ಮಂಗಳಕರವಾದ ಲಕ್ಷಣವುಳ್ಳವಳೂ ಆದ ಗಂಗಾದೇವಿಯನ್ನು ಕಾಣುವ ಹಾಗೆ, ಆಗಲ್ = ಆಗ, ಮುಂದೆ ನಿಂದ ಕೊಂತಿಯಂ = ಮುಂಗಡೆ ನಿಂತಿದ್ದ ಕುಂತೀದೇವಿಯನ್ನು, ಭೋಂಕನೆ ಕಂಡಂ = ಥಕ್ಕನೆ ಕಂಡನು ('ಭೋಂಕನೆ' ಶೀಘ್ರಾರ್ಥದ ಅವ್ಯಯವು), ಕುಂತಿ

ವ ॥ ಅಂತು ಕಂಡು ಮನದೊಳಾದಱಿಕದಿಂ ಸಾಷ್ಟಾಂಗಮೆಱಗಿ ಪೊಡೆವಟ್ಟು ನಿಜನಂದನನನಟ್ಟಿಱಿಂದಪ್ಪಿಕೊಂಡು ಪರಮಾಶೀರ್ವಚನಂಗಳಿಂಪರಸಿ

ಆಗಳೆ ಮಗನಂ ಪೆತ್ತವೊ-।
ಲಾಗಿ ಲತಾಲಲಿತೆ ನೊಸಲ ಕಣ್ಬೆತ್ತವೊಲಂ-॥
ತಾಗಡೆ ರಾಗಕ್ಕಾಗರ-।
ಮಾಗೆ ದಿನಾಧಿಪತನೂಜನೊಸೆದಿರ್ಪಿನೆಗಂ ॥ ೫ ॥

ಯುನ್ನು ಭೋಂಕನೆ ಕಂಡುದು ಅಕಸ್ಮಾತ್ತಾಗಿ ಗಂಗಾಂಗನೆಯನ್ನೇ ಭೋಂಕನೆ ಕಂಡಂ ತಾಯ್ತು' ಎಂದು ಭಾವವು ಸಂಗತತರಂಗಯುತೆಯೂ, ಮಂಗಳಲಕ್ಷಣೆಯೂ ದ ಗಂಗಾದೇವಿಯೇ ಮೂರ್ತಿಮತ್ತಾಗಿ ಬಂದಳೋ ಎಂಬ ಹಾಗೆ, ಕುಂತಿಯು ರ್ಣನ ಮುಂದೆ ನಿಂತಿದ್ದಳು ಎಂದು ತಾತ್ಪರ್ಯವು 'ಭೋಂಕನೆ' ಕಂಡಂ ಎಂಬುದ ರಿದಲೆ, 'ಗಂಗಾಂಗನೆಯುಂ ಕಾಣ್ಬವೊಲ್ ಕಂಡಂ' ಎಂದು ಉತ್ಪ್ರೇಕ್ಷೆಯು ) ॥ ೪ ॥

ಅಂತು — ಇಂತೆಂದು ವಚನಂ ॥ ಅಂತು ಕಂಡು, ಮನದೊಳ್ ಆದ ಎಱಿಕದಿಂ = ಮನಸ್ಸಿನಲ್ಲುಂಟಾದ ಮಮತೆಯಿಂದ; ಸಾಷ್ಟಾಂಗಂ ಎಱಗಿ ಪೊಡೆವಟ್ಟು – ಉದ್ದಂಡ ನಮಸ್ಕಾರ ಮಾಡಿದ, [ಸಾಷ್ಟಾಂಗ ನಮಸ್ಕಾರ — "ಜಾನುಭ್ಯಾಂಚ ತಥಾ ಪದ್ಭ್ಯಾಂ ಪಾಣಿಭ್ಯಾಮುರಸಾ ಧಿಯಾ । ಶಿರಸಾ ವಚಸಾ ದೃಷ್ಟ್ಯಾ ಪ್ರಣಾಮಾಷ್ಟಾಂಗ ಈರಿತಃ" ॥ ಮೊಣಕಾಲುಗಳಿಂದಲೂ, ಕಾಲುಗಳಿಂದಲೂ, ಕೈಗಳಿಂದಲೂ, ಬುದ್ಧಿಯಿಂದಲೂ. ಶಿರಸ್ಸಿನಿಂದಲೂ ವಾಕ್ಕಿನಿಂದಲೂ, ದೃಷ್ಟಿಯಿಂದಲೂ ಕೂಡಿದ ನಮಸ್ಕಾರವು ಸಾಷ್ಟಾಂಗ ವೆನಿಸುವುದು ಎಱಗು (ಧಾ)–ಪ್ರಣತೇ, ನಮಸ್ಕರಿಸು ನಿಜನಂದನನಂ = ತನ್ನ ಮಗನನ್ನು, ಅಟ್ಟಿಱಿಂದೆ ಅಪ್ಪಿಕೊಂಡು = ಪ್ರೀತಿಯಿಂದ ತಬ್ಬಿಕೊಂಡು, ಪರಮ ಆಶೀರ್ವಚನಂಗಳಿಂ ಪರಸಿ = ಉತ್ತಮ ಆಶೀರ್ವಾದಗಳಿಂದ ಹರಸಿ, ॥

ಆಗಳೆ — ಇಂತೆಂದು ಕಂದಂ ॥ ಆಗಳೆ ಮಗನಂ ಪೆತ್ತವೊಲ್ ಆಗಿ = ತತ್ಕ್ಷಣ ದಲ್ಲಿಯೇ ಮಗನನ್ನು ಹಡೆದವಳಂತೆ ಆಗಿ, ಲಲಾಲಲಿತೆ = ಕುಂತಿ (ಲತಾ–ಬಳ್ಳಿ ಯಂತೆ, ಲಲಿತೆ–ಕೋಮಲವಾದ ಶರೀರವುಳ್ಳವಳು. 'ಕುಂತಿ'ಗೆ ವಿಶೇಷಣವು ಕೋಮಲಾಂಗಿಯನ್ನು ವರ್ಣಿಸುವಲ್ಲಿ ಸಾಮಾನ್ಯವಾಗಿ ಲತಾಲಲಿತೆಯೆಂದು ರೂಪಿಸಿ ಹೇಳುವುದುಂಟು ) ನೊಸಲ ಕಣ್ಬೆತ್ತವೊಲ್ = ಹಣೆಯ ಕಣ್ಣನ್ನು ಪಡೆದಂತೆ [ಮೂರನೆಯ ಕಣ್ಣನ್ನು ಪಡೆದಹಾಗೆ, ಕಣ್ಣಂ ಪೆತ್ತವೊಲ್ – ಕಣ್ಬೆತ್ತವೊಲ್. ಪೆಱು (ಧಾ)–ಉಪಲಬ್ಧೌ (ಸಂಪಾದಿಸು) ಪ್ರಸೂತೇಚ (ಹೆರು)] ಆಗಡೆ = ಆಗಳೆ ('ಆಗಳೆ'– 'ಆಗಡೆ'–ಸಮಾನಾರ್ಥಕಗಳು) ರಾಗಕ್ಕೆ ಆಗರಮಾಗೆ = ಪ್ರೇಮಕ್ಕೆ ಆಸ್ಪದವಾಗಲು

ವ ॥ ಗಂಗಾದೇವಿಯುಂ ದಿವ್ಯಮೂರ್ತಿಯಂ ಕೆಯ್ಕೊಂಡು ಬಂದು–

ಒಪ್ಪಿಸಿದೆಂ ಕೆಯ್ಯೆಡೆಯಿಂ–।
ದೊಪ್ಪಿಸಿದಾ ನಿನ್ನಮಗನನೀಗಳ ನಿನಗೆಂ–॥
ದಪ್ಪೈಸಿ ಗಂಗೆ ಪೋಪುದು–।
ಮೊಪ್ಪುವ ನಿಜಬಿಂಬದೊಳಗಣಿಂದಂ ದಿನಪಂ ॥ ೬ ॥

ಪೊಱಮಟ್ಟು ಬರಲ್ ತನ್ನಡಿ–।
ಗೆಱಗಿದ ನಿಜಸುತನನಕ್ಕಱಿಂ ಪರಸಿ ಮನಂ–॥
ಮಱುಗಿ ರವಿ ನುಡಿದನೆನ್ನುಮು–।
ನುಱಿದೆ ಮರುಳ್ಮಗನೆ ಹರಿಗೆ ಕವಚಮನಿತ್ತೈ ॥ ೭ ॥

---

[ಆಗರ–(ಸಂ) ಆಕರ, ಆಶ್ರಯಃವು.] ದಿನಾಧಿಪತನೂಜಂ = (ಸೂರ್ಯಪುತ್ರನಾ ) ಕರ್ಣನು ಒಸೆದಿರ್ಪಿನೆಗಂ = ಪ್ರೀತಿಪಡುತ್ತಿರುವಲ್ಲಿ, [ಒಸೆ (ಧಾತು)—ಪ್ರಸನ್ನತೇ (ಪ್ರೀತಿಸು) ಉತ್ಪ್ರೇಕ್ಷಾಲಂಕಾರವು ॥ ೫ ॥

ಗಂಗಾದೇವಿಯುಂ— ಇಂತೆಂದು ವಚನಂ ॥ ಗಂಗಾದೇವಿಯುಂ ದಿವ್ಯಮೂರ್ತಿಯಂ ಕೈಯ್ಕೊಂಡು ಬಂದು = ಗಂಗಾದೇವಿಯು ದಿವ್ಯಾಕೃತಿಯನ್ನು ತಾಳಿ ಬಂದು,

ಒಪ್ಪಿಸಿದೆಂ— ಇಂತೆಂದು ಮತ್ತು ಪೊಱಮಟ್ಟು— ಇಂತೆಂದು ಕಂದಂಗಳ್ ॥ ಕೆಯ್ಯೆಡೆಯಿಂದು ಒಪ್ಪಿಸಿದ ಆ ನಿನ್ನ ಮಗನಂ = ಸಾಕಿಸಲಹುವುದಕ್ಕೆಂದು ನನಗೆ ನೀನು ಒಪ್ಪಿಸಿಕೊಟ್ಟಿದ್ದ ಆ ಮಗನನ್ನು; ಈಗಳಿ ನಿನಗೆ ಒಪ್ಪಿಸಿದೆಂ' ಎಂದು = ಈಗಳೇ ನಿನ್ನ ವಶಕ್ಕೆ ಕೊಟ್ಟಿದ್ದೇನೆ. ಸ್ವೀಕರಿಸು' ಎಂದು ಹೇಳಿ, ಅಪ್ಪೈಸಿ= ಸಮರ್ಪಿಸಿ, (ಅಪ್ಪೈಯ್ಸು–ಅರ್ಪಿಸು) ಗಂಗೆ ಪೋಪುದುಂ = ಗಂಗಾದೇವಿ ಹೋದಾಗ; ನಿಜಬಿಂಬದೊಳಗಣಿಂದಂ = ತನ್ನ ಬಿಂಬಿದತ್ತಣಿಂದ, ದಿನಪಂ = ಸೂರ್ಯನು ; ಪೊಱಮಟ್ಟು ಬರಲ್ - ಹೊರಟುಬರಲು, ತನ್ನ ಅಡಿಗೆಱಗಿದ ನಿಜಸುತನಂ ಅಕ್ಕಱಿಂ ಪರಸಿ= ತನ್ನ ಕಾಲಿಗೆರಗಿದ ಮಗನನ್ನು ಪ್ರೀತಿಯಿಂದ ಹರಸಿ, ರವಿ = ಸೂರ್ಯನು; ಮನಂ ಮಱುಗಿ ನುಡಿದಂ = ವ್ಯಸನಗೊಂಡು ಸಂತಾಪದಿಂದ ಹೀಗೆಂದನು—[ಮಱುಗು (ಧಾತು)–ಸಂತಾಪೇ, ವ್ಯಸನಪಡು ಭಾವನಾಮವು 'ಮಱುಕ'ವು.] ಮರುಳ್‌ಮಗನೇ–ಅಯ್ಯೋ ಹುಚ್ಚುಮಗನೇ; ಎನ್ನುಮಂಉಱಿದೆ= ನನ್ನನ್ನೂ ಲಕ್ಷ್ಯಮಾಡದೆ (ನಾನು ಹೇಳಿದುದನ್ನು ಗಮನಿಸದೆ) ಹರಿಗೆ= ಇಂದ್ರನಿಗೆ, ಕವಚಮಂ ಇತ್ತಯ್ = ಕವಚವನ್ನು ಕೊಟ್ಟೆಯಲ್ಲಾ ! ॥ ೬—೭ ॥

ನುಡಿಯೆನದಂ ನಿನ್ನಂಬಿಕೆ ।
ವಡೆಮಾತೇಂ ಕೊಂತಿ ಹರಿಯ ಮತದಿಂ ಕಾಯ-॥
ಲ್ಕೊಡರಿಸಿ ಬಂದಳ್ ಸುತರಂ ।
ಕುಡದಿರ್ ಪುರಿಗಣೆಯನೆನಿತು ಲಲ್ಲೈಸಿದೊಡಂ ॥ ೮ ॥

ಎಂದರವಿಂದಪ್ರಿಯಸಖ-।
ನಂದಂಬರತಳಮನಡರ್ವುದುಂ ಕೆಯ್ಮುಗಿದಿಂ-॥
ತೆಂದಂ ಕುಂತಿಯನಬ್ಬೇಂ ।
ವಂದಿರ್ಪುದದೆನಗೆ ಸಯ್ಪು ಬರ್ಪಂತೀಗಳ್ ॥ ೯ ॥

---

ನುಡಿಯೆನದಂ— ಇಂತೆಂದು ಕಂದಂ ॥ ಅದಂ ನುಡಿಯೆಂ = ಅದನ್ನು ಕುರಿತು ಹೇಳುವುದಿಲ್ಲ (ಆದುದು ಆಗಿಹೋಯಿತಷ್ಟೆ, ಆ ಕುರಿತು ಇನ್ನುಮಾತಾಡಿ ಪ್ರಯೋಜನವಿಲ್ಲವಾದುದರಿಂದ, ಆ ಸಂಗತಿಯನ್ನು ಹೇಳುವುದಿಲ್ಲವೆಂದು ಭಾವವು.) ವಡೆಮಾತು ಏಂ ? = ಹೆಚ್ಚು ಮಾತೇಕೆ ? (ಹೆಚ್ಚುಹೇಳಿ ಪ್ರಯೋಜನವೇನು ? ಈಗಳಾದರೂ ನಾನು ಹೇಳುವಂತೆ ಮಾಡು ಎಂದ. ಭಾವವು) ನಿನ್ನ ಅಂಬಿಕೆ ಕೊಂತಿ = ನಿನ್ನ ತಾಯಿ ಕುಂತಿಯು ಹರಿಯಮತದಿಂ = ಶ್ರೀಕೃಷ್ಣನ ಅಭಿಪ್ರಾಯಾನುಸಾರವಾಗಿ, ಸುತರಂ ಕಾಯಲ್ಕೆ ಒಡರಿಸಿ ಬಂದಳ್ = ತನ್ನ ಪುತ್ರರಾದ ಪಾಂಡವರನ್ನು ರಕ್ಷಿಸುವ ಉದ್ದೇಶದಿಂದ ಬಂದಿರುವಳು [ಕಾ (ಧಾತು) ರಕ್ಷಣೇ, ಒಡರಿಸು (ಧಾತು)-ಆರಂಭಿಸು] ಎನಿತುಲಲ್ಲೈಸಿದೊಡಂ = ಎಷ್ಟು ಮುದ್ದಾಡಿ ಕಾಡಿದರೂ [ಲಲ್ಲೈಸು (ಧಾತು)-ಪ್ರೀತಿಯಿಂದ ಮುದ್ದಾಡು] ಪುರಿಗಣೆಯಂ ಕುಡದಿರ್ = ಪುರಿಗಣೆಯನ್ನು ಕೊಡದಿರು (ಪುರಿಗಣೆ-ದಿವ್ಯಮಂತ್ರಾಸ್ತ್ರವನ್ನು ಒಮ್ಮೆ ಪ್ರಯೋಗಿಸಿ, ಪುನಃ ಪ್ರಯೋಗಿಸುವಂತಿರುವುದು, 'ಪುರಿಗಣೆ'ಯೆನಿಸುವುದು. ಒಮ್ಮೆ ತೊಟ್ಟ ಅಸ್ತ್ರವನ್ನು ಮತ್ತೂ ಮತ್ತೂ ತೊಡುವುದಾಗಿದ್ದರೆ ಅದು ಪುರಿಗಣೆಯೆನಿಸುವುದು. ಕರ್ಣನು ಕುಂತಿಗೆ ಪುರಿಗಣೆಯನ್ನು ಕೊಟ್ಟುದರಿಂದ, ಒಮ್ಮೆ ಗುರಿಯಿಟ್ಟು ಹೊಡೆದ ಅಸ್ತ್ರವನ್ನು ತಿರುಗಿತೊಡುವುದಿಲ್ಲವೆಂದು ಮಾತುಕೊಟ್ಟುದರಿಂದ, ಕರ್ಣನ ಹಾನಿಗೆ ಅದೂ ಒಂದು ಕಾರಣವಾಯ್ತು.) ॥ ೮ ॥

ಎಂದರವಿಂದ— ಇಂತೆಂದು ಕಂದಂ ॥ ಎಂದು = ಹೀಗೆಂದು ನುಡಿದು, ಅರವಿಂದಪ್ರಿಯಸಖಂ = ಸೂರ್ಯನು, ಅಂದು ಅಂಬರತಳಮಂ ಅಡರ್ವುದುಂ = ಆಗ ಗಗನತಳಕ್ಕಡರಿದಾಗ [ಅಡರ್ (ಧಾತು)-ಹತ್ತು; ಏಱು], ಕರ್ಣನು, ಕೆಯ್ಮುಗಿದು = ಕೈಗಳಂ ಮುಗಿದು; (ಅಂಜಲಿಬದ್ಧನಾಗಿ) ಕುಂತಿಯಂ ಇಂತೆಂದಂ = ಕುಂತಿಯನ್ನು ಕುರಿತು ಹೀಗೆಂದನು. ಅಬ್ಬೆ ! = ಅಮ್ಮಾ, ಎನಗೆ ಸಯ್ಪುಬರ್ಪಂತೆ = ನನಗೆ ಪುಣ್ಯ ಬರುವ

ಚಲಮುಂ ಚಾಗಮುಮಳವುಂ ।
ಕಲಿತನಮುಂ ಕುಲಮುಮೀಗಳೆನ್ನಯ ಮೆಯ್ಯೊಳ್ ॥
ನೆಲಸಿದುವು ನಿಮ್ಮ ಕರುಣಾ-।
ಬಲದಿಂ ನೀವೆನ್ನನಿಂದು ಮಗನೆಂದುದಱಿಂ ॥ ೧೦ ॥

ಪಡೆದರ್ ತಾಯುಂ ತಂದೆಯು-।
ಮೊಡಲಂ ಪ್ರಾಣಮುಮನವರವು ಕಯ್ಯೆಡೆಯುಂ ॥
ಕುಡುವುದರಿದಾಯ್ತೆ ನೀಮೆನ ।
ಗೆಡೆಮಡಗದ ಬೆಸವ ತೊೞ್ತುವೆಸನಂ ಬೆಸಸಿಂ ॥ ೧೧

---

ಹಾಗೆ, ಅದೇಂ ಮಂದಿರ್ಪುದು = ಅದೇತಕ್ಕೆ ಆಗಮಿಸಿರುವಿರಿ ? ನೀವು ಬಂದ ಕಾರಣ ವಾವುದೊ ? ಉತ್ಪ್ರೇಕ್ಷಾಲಂಕಾರವು ॥ ೯ ॥

ಚಲಮುಂ—ಇಂತೆಂದು ಕಂದಂ ॥ ನೀಂ ಎನ್ನಂ ಇಂದು ಮಗನೆಂದುದಱಿಂ = ನೀವು ನನ್ನನ್ನಿಂದು ಮಗನೆಂದು ತಿಳಿದುದರಿಂದ, ನಿಮ್ಮ ಕರುಣಾಬಲದಿಂ = ನಿಮ್ಮ ಅನುಗ್ರಹದಿಂದಲಾಗಿ ಚಲಮುಂ ಚಾಗಮುಂ ಅಳವುಂ ಕಲಿತನಮುಂ ಕುಲಮುಂ = ಚಲವೂ, ಚಾಗವೂ, ಬಲ್ಮೆಯೂ, ಪರಾಕ್ರಮುವೂ, ಕುಲವೂ, ಈಗಳೆನ್ನಯ ಮೆಯ್ಯೊಳ್ ನೆಲಸಿದುವು = ಈಗ ನನ್ನಲ್ಲಿ ನೆಲಸಿದುವು (ನೀವು ನನ್ನನ್ನು ಮಗನೆಂದು ತಿಳಿದು ಅನುಗ್ರಹಿಸಿದುದರಿಂದ, ನನ್ನಲ್ಲಿದ್ದ ಚಲ, ಚಾಗ, ಅಳವು, ಕಾರ್ಯ ಕುಲೀನತೆ ಮುಂತಾದ ಸದ್ಗುಣಗಳು ಸಾರ್ಥಕಗಳಾದುವು ಎಂದು ಹೇಳಿ, ವಿಧೇಯುತೆಯನ್ನೂ ವಿನಯುವನ್ನೂ ತೋರ್ಪಡಿಸಿ ತಾಯನ್ನು ಗೌರವಿಸುತ್ತಾನೆ.) ॥ ೧೦ ॥

ಪಡೆದರ್—ಇಂತೆಂದು ಕಂದಂ ॥ ಒಡಲಂ ಪ್ರಾಣಮುಮಂ = ಒಡಲನ್ನೂ ಜೀವವನ್ನೂ, ತಾಯುಂ ತಂದೆಯುಂ, ಪಡೆದರ್ = ತಾಯೂ ತಂದೆಯೂ ಹಡೆದವರು, ಹೆತ್ತವರು, ಆದುದರಿಂದ, ಅವು ಅವರವು = ಒಡಲೂ ಪ್ರಾಣವೂ ಹೆತ್ತವರ ಅಧೀನವು ಹೀಗಿದ್ದರೂ ನೀವು ಮಾತ್ರ ನನಗೆ, ಕೆಯ್ಯೆಡೆಯುಂ ಕುಡುವುದು ಅರಿದಾಯ್ತೆ ? = ಸಾಕಿ ಸಲಹುವುದು ಕಷ್ಟವಾಯ್ತೆ ? (ಇದು ಕುಂತಿಗೆ ಮರ್ಮಭೇದಕವಾದ ಪ್ರಶ್ನೆ.) ಆ ಮಾತು ಹಾಗಿರಲಿ. ನೀಂ ಎನಗೆ ಎಡೆಮಡಗದೆ = ನೀವು ನನಗೆ (ಬೇರೆ ಮಾತಿಗೆ) ಎಡೆಗೊಡದೆ, [ಎಡೆಮಡಗು (ಧಾ)—ಅವಕಾಶ ಕೊಡು] ಬೆಸವ = ಆಜ್ಞಾಪಿಸುವ, ಅಪ್ಪಣೆಕೊಡಿಸು [ಬೆಸಸುವ > ಬೆಸಪ ಬೆಸಸು (ಧಾತು) ಆಜ್ಞಾಪಿಸು,] ತೊೞ್ತುವೆಸನಂ = ಸೇವೆಯನ್ನು [ತೊೞ್ತು—ದಾಸ, ದಾಸಿ, ತೊೞ್ತಿನ ಬೆಸಂ - ತೊೞ್ತುವೆಸಂ— ಸೇವಕನ ಕೆಲಸವು] ಬೆಸಸಿಂ = ಆಜ್ಞಾಪಿಸಿರಿ. ॥ ೧೧ ॥

ಎಂಬುದುಮಂಬಿಕ ಮಗನ ಮ-।
ನಂ ಬೆಳಱಿವ ನೀನುಮಿತ್ತೆಯೆನುಂ ಪೆತ್ತೆಂ ॥
ನಂಬಿದ ನಿನ್ನನುಜರ್ ನಿ-।
ನ್ನಂ ಬೆಸಕೆಯ್ಯೆ ನೀನೆ ನೆಲನನಾಳ್ವುದು ಕಂದಾ ॥ ೧೨ ॥
ನಿನಗಪ್ಪರಸಂ ದುರ್ಯೋ-।
ಧನನೊಲವಂ ಮುಂದುಗೆಯ್ದು ಬೆಸಕೆಯ್ವರೆ ನಿ-॥
ನ್ನನುಜರೆರಡಱ್ಕೆನೆಗಂ ಕಿಸು-।
ಱಿನಿನಾಗದು ಮಗನ ನೀನೊಡಂಬಡವೇಳ್ಕುಂ ॥ ೧೩ ॥

---

ಎಂಬುದುಂ — ಇಂತೆಂದು ಕಂದಂ ॥ ಎಂಬುದುಂ = ಕರ್ಣನು ಹೀಗೆಂದಾಗ, ಅಂಬಿಕೆ = ತಾಯಿಯಾದ ಕುಂತಿಯು (ಕರ್ಣನನ್ನು ಕುರಿತು ಮುಂದಿನ ಮಾತುಗಳನ್ನು ಹೇಳುತ್ತಾಳೆ) ಮಗನೆ = ಕಂದಾ! ಮನಂ ಬೆಳಱಿದೆ = ಮನಸ್ಸಿನಲ್ಲಿ ಹೆದರದ, ನೀನುಂ ಇತ್ತೆ ಆನುಂ ಪೆತ್ತೆಂ = ನೀನೂ (ಕವಚಕುಂಡಲಗಳನ್ನು) ಕೊಟ್ಟಿರುವೆ, ನಾನೂ (ನಿನ್ನನ್ನು) ಹೆತ್ತಿರುವೆನು. [ಮನದೊಳ್ ಪೆಳಱು–ಮನಂಬೆಳಱು = ಮನಸ್ಸಿನಲ್ಲಿ ಹೆದರು ಪೆಳಱು (ಧಾತು) ಭಯೇ.] ಕಂದಾ = ಮಗನೇ, ನಂಬಿದ ನಿನ್ನ ಅನುಜರ್ ನಿನ್ನಂ ಬೆಸಕೆಯೆ = ವಿಶ್ವಾಸದಿಂದ ವರ್ತಿಸುವ ನಿನ್ನ ತಮ್ಮಂದಿರಾದ ಪಾಂಡವರು ನಿನ್ನ ಆಜ್ಞಾಧಾರಕರಾಗಿ ಸೇವಿಸುತ್ತಿರುವಲ್ಲಿ, ('ಬೆಸಕೆಯೆ'–ಎಂಬಲ್ಲಿ ಧಾತುಗೆ ಯಕಾರದಲ್ಲಿ ಸ್ವರಪರವಾದರೆ ದ್ವಿತ್ವಲೋಪವು ವಿಕಲ್ಪವು "ಧಾತುಗಲುಂ ಪರಮಾದೊಡಜಾತಂ ದ್ವಿತ್ವಂ, ಯಕಾರ ದಲ್ಲಿ ವಿಕಲ್ಪಂ — ಶಬ್ದಮಣಿದರ್ಪಣಂ ಸೂತ್ರಂ ॥ ೩೦ ॥ ಬಸಕೆಯ್ ['ಅಲ್' ಎಂಬುದಕ್ಕೆ 'ಎ' ಆದೇಶವು, ಬೆಸಕೆಯೆ, ಬಸಕೆಯ್ಯೆ ಬೆಸಕಯ್ (ಧಾತು) ಸೇವೆ ಮಾಡು], ನೀನೆ ನೆಲನಂ ಆಳ್ವುದು = ನೀನೆ ರಾಜ್ಯವನ್ನಾಳತಕ್ಕುದು ॥ ೧೨ ॥

ನಿನಗಪ್ಪರಸಂ — ಇಂತೆಂದು ಕಂದಂ ॥ ನಿನ್ನ ಅನುಜರ್ = ನಿನ್ನ ತಮ್ಮಂದಿರಾದ ಪಾಂಡವರಾದರೋ, ನಿನಗಪ್ಪ ಅರಸಂ = ನಿನಗಾಗುವ ಅರಸುತನವನ್ನು, ಒಡೆತನವನ್ನು, ದುರ್ಯೋಧನನ ಒಲವಂ = ದುರ್ಯೋಧನನ ಇಷ್ಟವನ್ನು, (ಅಥವಾ, 'ನಿನಗಪ್ಪ ಅರಸಂ ದುರ್ಯೋಧನನ ಒಲವಂ'–ನಿನಗೆ ಅರಸನಾದ ದುರ್ಯೋಧನನ ಒಲವನ್ನು–ಎಂಬುದಾಗಿ ಅನ್ವಯಿಸಿ ಅರ್ಥಹೇಳಬಹುದು), ಮುಂದುಗೆಯ್ದು = ಮುಂದೆ ಮಾಡಿ, ಗೌರವಿಸಿ, ಬಹುಮಾನಿಸಿ, ಬೆಸಕೆಯ್ವರೆ = ಸೇವೆಗೆಯ್ವಂತಹರೇನ್ನೆ (ಹೀಗಾದರೆ) ಎರಡಱ್ಕೆನೆಗಂ = ಎರಡು ಕಡೆಯುವರಿಗೂ, ಉಭಯ ಪಕ್ಷಗಳಿಗೂ, ಕಿಸುಱ್ ಇನಿನಾಗದು = ಮನಃ ಕಲುಷವೆಳ್ಳಷ್ಟೂ ಆಗದು ಆದುದರಿಂದ, ಮಗನೆ ನೀನ್ ಒಡಂಬಡವೇಳ್ಕುಂ = ಮಗನೇ, ನೀನದಕ್ಕೆ ಒಪ್ಪತಕ್ಕುದು ॥ ೧೩ ॥

ವ ॥ ಎಂಬುದುಮದೆಲ್ಲಮಂ ಕೇಳ್ದು ಕರ್ಣಂ ಮುಗುಳ್ನಗೆ ನಕ್ಕು-
ಭಯಮುಂ ಲೋಭಮುಮೆಂಬ ತಮ್ಮುತ್ತೆರಡುಂ ಪಾಪಕ್ಕೆ ಪಕ್ಕಾಗೆ ಪಾ।
ೞಿಯನೊಕ್ಕಾಳ್ದನ ಗೆಯ್ದ ಸತ್ಕೃತಮುಮಂ ಪಿಂತಿಕ್ಕಿ ಜೋೞಕ್ಕೆ ತ-॥
ಪ್ಪಿಯುಮಿಂ ಬಾೞ್ವುದೆ ಪೂಣ್ದು ನಿಲ್ಲದಿಕೆಯಿಂ ಬಾೞ್ವಂತು
ವಿಖ್ಯಾತ ಕೀ-।
ರ್ತಿಯವೋಲೀಯೊದಲಬ್ಬೆ ಪೇೞಿಮೆನಗೇಂ ಕಲ್ಪಾಂತರ
ಸ್ಥಾಯಿಯೇ ॥ ೧೪ ॥

---

ಎಂಬುದುಂ— ಇಂತೆಂದು ವಚನಂ ॥ ಎಂಬುದುಂ= ಕುಂತಿ ಹೀಗೆಂದಾಗ; ಅದೆಲ್ಲಮಂ ಕೇಳ್ದು ಕರ್ಣಂ ಮುಗುಳ್ನಗೆ ನಕ್ಕು= ಅದೆಲ್ಲವನ್ನೂ ಕೇಳಿ ಕರ್ಣನು ಮುಗುಳುನಗೆ ನಕ್ಕು, ಆ ವಿಷಯದಲ್ಲಿ ತನ್ನ ನಿಶ್ಚಿತಾಭಿಪ್ರಾಯವನ್ನು, ಮುಂದಿನ ಪದ್ಯದಲ್ಲಿ ಹೇಳುವಂತೆ 'ಭಯಮುಂ ಲೋಭಮುಮೆಂಬ' ಇಂತೆಂಬ ನುಡಿಗಳಿಂದ ಸಮರ್ಥಿಸಿ ಹೇಳುತ್ತಾನೆ. ॥

ಭಯಮುಂ— ಇಂತೆಂದು ಮ ವಿ. ವೃತ್ತಂ ॥ ಭಯಮುಂ ಲೋಭಮುಮೆಂಬ ತಮ್ಮುತ್ತೆರಡುಂ= ಭಯವು ಮತ್ತು ಲೋಭವೆಂಬ ಇವೆರಡೂ [ತಮ್ಮ+ಎರಡುಂ = ತಮ್ಮ+'ಉತು'+ಎರಡುಂ ತಮ್ಮುತ್ತೆರಡುಂ (ತಾವೆರಡೂ) "ಸ್ವರಾದಿ ಸಂಖ್ಯೆಗಳ್ ಪರಮಾಗೆ ಮೊದಲೊಳ್ ನಿಮ್ಮ, ಎಮ್ಮ, ತಮ್ಮ ಎಂಬಿವು ಬರೆ ಮಧ್ಯದೊಳ್ 'ಉತು' ಪಕ್ಕುಂ. ಒಂದೆಂಬ ದದೇಕವಚನಮಾಗೆ ಅದಾಗದು" "ಇದಿರೊಳ್ ಸ್ವರಾದಿ ಸಂಖ್ಯೆಗ। ಳೊದವಿರೆ ನಿಮ್ಮೆಮ್ಮತಮ್ಮನಿಪ್ಪುವುಪಿಂತ- ॥ ಜ್ಞೊದವಿರೆ ನಡುವಣ್ಗುತುವ। ಪ್ಪುದಿವಱಿ ಬಹುವಚನದಲ್ಲಿ ಪುಗಿಸದಿರೊಂದಂ ॥" ಶ. ಮ. ದ. ಸೂ. ॥ ೧೪೮ ॥ ಪಾಪಕ್ಕೆ ಪಕ್ಕಾಗೆ = ಪಾಪಕ್ಕೆ ಗುರಿಯಾಗಲು, ಪಾೞಿಯುಂ ಒಕ್ಕು = ನ್ಯಾಯ ತಪ್ಪಿ, ಪಾೞಿಕೆಟ್ಟು. ('ಒಕ್ಕು'–'ಉಗು' ಧಾತುವಿನ ಭೂತರೂಪ 'ಉಗು'–ವಿಸರ್ಜನೇ, ತ್ಯಜಿಸು) 'ಪಾೞಿಗಿಡೆ ನೆಗೞ್ದುದಱಿಂ" ಗದಾಯುದ್ಧಂ, "ಪಾೞಿಯ ಬಟ್ಟೆದಪ್ಪಿಮುಂನೆಗೞ್ದೆಡೆಯಿಲ್ಲ" ಪಂ. ಭಾ ೭।೨೧ ॥] ಆಳ್ದನ ಗೆಯ್ದ = ಸ್ವಾಮಿಯು ಗೆಯ್ದ. ('ಆಳ್ದನ ಗೆಯ್ದ' ಎಂಬಲ್ಲಿ ಪ್ರಥಮಾರ್ಥದಲ್ಲಿ ಷಷ್ಠಿ, ವಿಭಕ್ತಿ ಪಲ್ಲಟವು); ಸತ್ಕೃತಮುಮಂ= ಉಪಕಾರವನ್ನೂ (ಸತ್ಕೃತ+ಉಂ+ಅಂ = ಸತ್ಕೃತಮುಮಂ" "ಅಮುಮೆಂದುಸಿರ್ವ ಸಮುಚ್ಚಯ। ದುಮುವಿಧಿ ನಿರುತಂ ದ್ವಿತೀಯೆಯೊಳ್ ಪೊಕ್ಕಿರ್ಕುಂ"–ವೃತ್ತಿ.–ಅಮ್ ಉಮ್ ಎಂದು ಪೇೞ್ವ ಸಮುಚ್ಚಯದ ಉಮ್ ಎಂಬುದು ದ್ವಿತೀಯೆಯ ನಡುವೆ ಪೊಕ್ಕಿರ್ಕುಂ" ಶ. ಮ. ದ. ಸೂತ್ರಂ ॥ ೧೨೨ ॥ ಪೂರ್ವಾರ್ಧದ ಸೂತ್ರ ವೃತ್ತಿಗಳು) ಪಿಂತಿಕ್ಕಿ = ಹಿಂದಿಕ್ಕಿ; ಜೋೞಕ್ಕೆ ತಪ್ಪಿಯುಂ =

ಮೊಂಗುಲಿಗನೆನಾಗಿಯುಮಣ- ।
ಮಾಂ ಗುಣಮನೆ ಬಿಸುಟೆನಿಲ್ಲ ನಿಮಗಂ ಮಗನಾ- ॥
ದಂಗೆನಗೆ ಬಿಸುಡಲಕ್ಕುಮೆ ।
ನೀಂಗಳ ಪಂಬಲನೆ ಬಿಸುಡಿಮಿನ್ನೆನ್ನೆಡಯೊಳ್ ॥ ೧೫ ॥

---

ಸ್ವಾಮಿಯ ಹಂಗಿಗೆ ತಪ್ಪಿನಡೆದೂ ('ಜೋಳ'-ಹಂಗು; ಪೂರ್ವಕಾಲದಲ್ಲಿ ಧನಿಗೆ ಒಕ್ಕಲಿಂದ ಜೋಳದಗೇಣಿ ಸಲತಕ್ಕ ವಾಡಿಕೆಯಿದ್ದುದರಿಂದ, 'ಹಂಗು' ಎಂಬರ್ಥದಲ್ಲಿ 'ಜೋಳ', 'ಜೋಳದ ಪಾಟಿ' ಜೋಳವಾಟಿ, ಜೋಳವಿಳಿ' ಇತ್ಯಾದಿ ಪ್ರಯೋಗಗಳು ರೂಢಿಗೆ ಬಂದಿರಬಹುದೆಂದು ತೋರುವುದು ಪಂಪಭಾರತದಲ್ಲಿ—"ಜೋಳದ ಪಾಟಿ ನಿಜಾಧಿನಾಥನಾಹವದೊಳರಾತಿನಾಯಕರ ಪಟ್ಟನೆ ಪಾಟಿಸೆ ಸಂದ ಪೆಂಪು" ಎಂದು ಪಂಪನು ತನ್ನನ್ನು ಕುರಿತು ಹೇಳಿಕೊಂಡುದನ್ನು ನೋಡಬಹುದು. ಜೋಳದ ಪಾಟಿ ಯೆಂದರೆ, 'ಸ್ವಾಮಿಯ ಉಪ್ಪನ್ನತಿಂದು ಬದುಕಿದ್ದಕ್ಕಾಗಿ, ಭೃತ್ಯನು, ಸೇವಕನು, ಅಡಿಯಾಳು, ಸ್ವಾಮಿಗೆ ಸಲ್ಲಿಸಬೇಕಾದ ಸೇವೆಯ ಹಂಗು.) ಇಂ ಬಾಳ್ವುದೆ= ಇನ್ನು ಜೀವಿಸುವುದೆ ? ಭಯದಿಂದಲೂ ಲೋಭದಿಂದಲೂ, ಪಾಪಕ್ಕೆ ಪಕ್ಕಾಗಿ, ಪಾಟಿಗೆಟ್ಟು, ಸ್ವಾಮಿಯ ಉಪಕಾರವನ್ನು ಸ್ಮರಿಸದೆ ಹಂಗುದೊರೆದು ಬಾಳುವುದರಿಂದೇನು ಪುರುಷಾರ್ಥವು ? ಎಂದು ಕರ್ಣನ ಆಶಯವು ಪೂಣ್ದು =(ಸ್ವಾಮಿಗಾಗಿ ಕಾದುವೆನೆಂದು) ಪ್ರತಿಜ್ಞೆಗೆಯ್ದು [ಪೂಣ್ (ಧಾತು) ಪ್ರತಿಜ್ಞಾಯಾಂ, ಪ್ರತಿಜ್ಞೆಗೆಯ್ ಭಾವನಾಮವು 'ಪೂಣ್ಕೆ'] ನಿಲ್ಲದಿಕೆಯಿಂ = ತಪ್ಪಿ ನಡೆಯುವುದರಿಂದ, (ನಿಲ್ಲದಿಕೆ ='ನಿಲ್' ಎಂಬುದರ ನಿಷೇಧರೂಪ ಭಾವನಾಮವು ಇದು ಪಂಪನ ಅಪೂರ್ವ ಪ್ರಯೋಗಗಳಲ್ಲೊಂದಾಗಿದೆ,) ಬಾಳ್ವಂತು = ಬಾಳುವ ಹಾಗೆ, ಬಾಳುವುದಕ್ಕೆ, ಅಬ್ಬೆ = ಅಮ್ಮಾ, ವಿಖ್ಯಾತ ಕೀರ್ತಿಯ ಪೋಲ್ = ವಿಸ್ತಾರವಾದ ಕೀರ್ತಿಯಹಾಗೆ, ಈಒಡಲ್ = ಈಯೆನ್ನ ಭೌತಿಕ ಶರೀರವು; ಎನಗೆ ಕಲ್ಪಾಂತರಸ್ಥಾಯಿಯೋ ಏಂ ?= ನನಗೆ ಕಲ್ಪಾಂತರಸ್ಥಾಯಿಯೇನು ? ಅನೇಕ ಕಲ್ಪಗಳ ವರೆಗೆ ಬಾಳುವಂತಹದೇನು ? ಅಬ್ಬೆ ಪೇಟಿಂ= ಅಮ್ಮಾ, ಹೇಳಿರಿ ॥ ೧೪ ॥

ಮೊಂಗುಲಿಗಂ— ಇಂತೆಂದು ಕಂದಂ ॥ ಮೊಂಗುಲಿಗನೆಂ ಆಗಿಯುಂ= ಬೆಸ್ತರವನೇ ಆದರೂ; ನೀಚಕುಲದವನೇ ಆಗಿದ್ದರೂ; ಆಂ ಗುಣಮನೆ ಬಿಸುಟೆನಿಲ್ಲ = ನಾನು ಗುಣವನ್ನು ತ್ಯಜಿಸಲಿಲ್ಲ. ಕುಲಹೀನತೆಯನ್ನು ಬಗೆಯದೆ ಈ ವರೇಗೆ ಸದ್ಗುಣವೇ ಭೂಷಣವೆಂಬಂತೆ ಬಾಳಿದೆನು ಎಂಬು ತಾತ್ಪರ ವು, ಹೀಗಿರುವಲ್ಲಿ, ನಿಮಗೆಂ ಮಗನಾದಂಗೆ ಎನಗೆ = ನಿಮಗೂ ಮಗನಾದ ನನಗೆ; (ಸೂತಕುಲೋತ್ಪನ್ನನೆನಿಸಿದ್ದಾಗಳೇ ಗುಣವನ್ನು ಬಿಸುಡದಿದ್ದ ನಾನು ಈಗ ನಿಮ್ಮ ಮಗನಾಗಿ ಉನ್ನತಕುಲೀನನೂ ಯೋಗ್ಯನೂ

ವ ॥ ಎಂಬುದುಂ ಕೊಂತಿ ಭೋಂಕನೆರ್ದೆದೆಱೆದು-

ಅಱೆದೆಂ ನೆಟ್ಟನೆ ಬೆಟ್ಟನಿಂತು ನುಡಿವಯ್ ನೀಂ ಕಂದ ಪೋಗಿಂದೆ ಕೆ-।
ಟ್ಟಱೆದತ್ತಾಗದೆ ಸೋಮವಂಶಮೆನಗಿಂ ಬಾೞ್ವಾಸೆಯೆಲ್ಲಿತ್ತೊ ಬಿ- ॥
ಟ್ಟುಱೆದೆಂ ಮತ್ತಿನ ಮಕ್ಕಳಾಸೆಯುಮನಾನೆಂದಳ್ಗೆ ಶೋಕಾಗ್ನಿ ಪೊಂ-।
ಪುಱೆವೋಗುತ್ತಿರೆ ಕರ್ಣನೆಂದನಿನಿತೇಂ ಪೇೞಬ್ಬೆ ಚಿಂತಾಂತರಂ ॥೧೬॥

---

ಎನಿಸಿ, ಇನ್ನು ಗುಣವನ್ನು, ಬಿಸುಡಲಕ್ಕುಮೆ ? = ತ್ಯಜಿಸಲಾಗುವುದೆ ? ಆದುದರಿಂದ, ನೀಂ ಇನ್ನೆನ್ನೆಡೆಯೊಳ್ ಎನ್ನ ಪಂಬಲನೆ ಬಿಸುಡಿಂ'ಗಳ' = ನೀವಿನ್ನು ನನ್ನ ಕುರಿತು ಹಂಬಲ ವನ್ನೇ ಬಿಟ್ಟುಬಿಡಿರಿ (ಅಥವಾ, 'ನೀಂಗಳ ಪಂಬಲನೆ ಇನ್ನೆನ್ನೆಡೆಯೊಳ್ ಬಿಸುಡಿಂ' ಎಂದಿಟ್ಟುಕೊಂಡು 'ನೀಂಗಳ' ಎಂಬುದಕ್ಕೆ 'ನಿಮ್ಮ' ಎಂದರ್ಥಮಾಡಬಹುದು. 'ನೀಂ' ಎಂಬುದಕ್ಕೆ 'ನೀಂಗಳ' ಎಂದು ಷಷ್ಠೀಬಹುವಚನ ಪ್ರಯೋಗವಿರುವುದೆಂದು ಹಳಗನ್ನಡ ಕಾವ್ಯಗಳಿಂದ ತಿಳಿದುಬರುತ್ತದೆ. ಉದಾ "ನೀಂಗಳ ಕಾಲ್ಗೆರ್ಚಿದ ನೀ । ರುಂ" ಕಾವ್ಯಾವಲೋಕನದಲ್ಲಿ ಶಬ್ದಸ್ಮೃತಿಯ ೧೭ನೆಯ ಸೂತ್ರಕ್ಕೆ ಕೊಟ್ಟ ಉದಾಹರಣೆ ) ॥ ೧೫ ।

ಎಂಬುದುಂ— ಇಂತೆಂದು ವಚನಂ ॥ ಎಂಬುದುಂ = ಕರ್ಣನು ಹೀಗೆನ್ನಲು, ಕೊಂತಿ = ಕುಂತಿ. ಭೋಂಕನೆ ಎರ್ದೆದೆಱೆದು = ಭೋಂಕನೆ ಎದೆಬಿಚ್ಚಿ (ಮಿೂರಿದ ದುಃಖಕ್ಕೆ ಒಳಗಾದಳೆಂದು ಭಾವವು) ಎರ್ದೆ ತೆಱೆದು—ಎರ್ದೆದೆಱೆದು 'ಕತಪಸ್ಸ್ಮೃತೀಯ ಉತ್ತರಪದಾದೇಃ' ಎಂಬ ಸೂತ್ರದಿಂದ, 'ದ'ಕಾರಾದೇಶವು )

ಅಱೆದೆಂ— ಇಂತೆಂದು ಮ. ವಿ. ವೃತ್ತಂ ॥ ಅಱೆದೆಂ = ಕೆಟ್ಟೆನು, ಕಂದ = ಮಗನೇ, ನೀಂ ನೆಟ್ಟನೆ ಇಂತು ಬೆಟ್ಟನೆ ನುಡಿವಯ್ = ನೀನು ನೇರವಾಗಿ ಹೀಗೆ ಕಠಿನವಾಗಿ, ನಿರ್ದಾಕ್ಷಿಣ್ಯದಿಂದ ನುಡಿವೆಯಲ್ಲವೇ, ('ನೆಟ್ಟನೆ' ಪರಿಸ್ಫುಟಾರ್ಥದ ಅವ್ಯಯವು ಬೆಟ್ಟನೆ—ಕಠಿನವಾಗಿ, ನುಡಿವಯ್ ಎಂಬ ಕ್ರಿಯೆಗೆ ವಿಶೇಷಣವು ಪೋಗು—ಹೋಗು, ಸೋಮವಂಶಂ ಇಂದೆ ಕೆಟ್ಟು ಅಱೆದತ್ತು ಆಗದೆ ? = ಚಂದ್ರವಂಶವು ಇಂದೇ ಕೆಟ್ಟು ನಾಶವಾಯ್ತು, ಆಗದೇಕೆ ? ಎನಗೆ ಇಂ ಬಾೞ್ವಾಸೆ ಎಲ್ಲಿತ್ತೊ? = ನನಗಿನ್ನು ಬದುಕುವಾಸೆಯೆಲ್ಲಿಯದು ? ಮತ್ತಿನಮಕ್ಕಳಾಸೆಯುಮಂ ಆಂಬಿಟ್ಟುಱೆದೆಂ = ಉಳಿದ ಮಕ್ಕಳಾಸೆಯನ್ನೂ ನಾನು ಬಿಟ್ಟುಬಿಟ್ಟೆನು, ಮತ್ತಿನಮಕ್ಕಳ= ಇನ್ನುಳಿದ ಮಕ್ಕಳು ಎಂದರೆ ಪಾಂಡವರ, ಎಂದಳ್ಗೆ = ಎಂದು ನುಡಿದವಳಿಗೆ (ಹೀಗೆಂದು ಹೇಳಿದ ಕುಂತಿಗೆ) ಶೋಕಾಗ್ನಿ (ದುಃಖವೆಂಬ ಬೆಂಕಿ) ಸಂತಾಪವು, ಪೊಂಪುಱೆವೋಗುತ್ತಿರೆ = ಹೆಚ್ಚುಹೆಚ್ಚಾಗುತ್ತಿರಲು (ಪೊಂಪುಱೆ = ಹೆಚ್ಚಿಕೆ, ಪೊಂಪುಱೆಪೋಗಾ— ಪೊಂಪುಱೆವೋಗು — ಅತ್ಯಧಿಕವಾಗು) ಕರ್ಣನೆಂದಂ = ಕರ್ಣನು ಹೀಗೆಂದನು ಅಬ್ಬೆ = ಅಬ್ಬೆಯೇ ಇನಿತೇಂ ಚಿಂತಾಂ

ಪಿಡಿಯೆಂ ಪುರಿಗಣೆಯಂ ನರ- ।
ನೆಡೆಗೊಂಡೊಡಮುಱಿದ ನಿನ್ನ ಮಕ್ಕಳನಿನ್ನೇ- ॥
ರ್ದೊಡಮುಱಿಯೆಂ ಪೆರ್ಜಸಮುನ ।
ಪಿಡಿದನ್ನನೆ ರಣದೊಳಱಿವೆ ನಿರವಡಿಯೆತ್ತಿಂ ॥ ೧೭ ॥

ವ ॥ ಎಂದು ಕೊಂತಿಯುಂ ವಿಸರ್ಜಿಸಿ ಚಲದ ಚಾಗದ ಕುಲದ ನನ್ನಿಯು
ನಾವರ್ಜಿಸಿ ರಾಧೇಯನೊಳ್ಪಿಂಗಾಧೇಯಮಾಗಿರ್ದಂ ॥

---

ತರಂ? = ಇಷ್ಟೇನುಚಿಂತಾಂತರವು? ಪೇೞ್ = ಹೇಳು (ಚಿಂತಾಂತರಂ—ಮನಃ ಕ್ಷತವು ) ॥ ೧೬ ॥

ಪಿಡಿಯೆಂ — ಇಂತೆಂದು ಕಂದಂ ॥ ನರಂ ಎಡೆಗೊಂಡೊಡಂ = ಅರ್ಜುನನು ಇದಿರಾಗುವ ಸಂದರ್ಭವಿದ್ದರೂ, (ಪುರಿಗಣೆಯಂ ಪಿಡಿವುದಕ್ಕೆ ನರಂ ಅವಕಾಶವಿತ್ತೊಡಂ, ಹುರಿಗಣೆಯನ್ನು ಪ್ರಯೋಗಿಸುವುದಕ್ಕೆ ಅರ್ಜುನನು ಎಡೆಕೊಟ್ಟರೂ ಕೂಡಾ' ಎಂದು ಭಾವವು) ಪುರಿಗಣೆಯಂ ಪಿಡಿಯೆಂ = ಹುರಿಗಣೆಯನ್ನು ಹಿಡಿಯೆನು. ಉಱಿದ ನಿನ್ನ ಮಕ್ಕಳಂ = ನಿನ್ನ ಮತ್ತಿನ ಮಕ್ಕಳಾದ ಪಾಂಡವರನ್ನು ಇಂ ಏರ್ದೊಡಂ = ಇನ್ನು ಏರಿ ಬಂದರೂ, ಮೇಲ್ಮಲೆತರೂ, (ಏರ್ದೊಡಂ – ನನ್ನನ್ನು ಹೊಡೆದರೂ. ಗಾಯಪಡಿಸಿದರೂ ಎಂಬ ಅರ್ಥವನ್ನೂ ಹೇಳಬಹುದು) ಅಱಿಯೆಂ = (ಅವರನ್ನು) ಕೊಲ್ಲೆನು. ಪೆರ್ಜಸಮುನೆ ಪಿಡಿದು, ವಿಶಾಲಕೀರ್ತಿಯನ್ನೇ ಹಿಡಿದು, [ಪಿರಿದು + ಜಸಂ—ಪೆರ್ಜಸಂ, ವಿಶಾಲ ಕೀರ್ತಿ ] ಎನ್ನನೆ ರಣದೊಳ್ ಅಱಿವೆಂ— ನನ್ನನ್ನೇ ಯುದ್ಧದಲ್ಲಿ ನೀಗಿಕೊಳ್ಳುವೆನು. ಇರದೆ ಅಡಿಯೆತ್ತಿಂ = ತಡವಿಲ್ಲದೆ ಇನ್ನು ಬಿಜಯಂಗೆಯ್ಯಿರಿ, ಅಡಿಯೆತ್ತು = ನಡೆ. ॥೧೭॥

ಎಂದು — ಇಂತೆಂದು ವಚನಂ ॥ ಎಂದು ಕೊಂತಿಯುಂ ವಿಸರ್ಜಿಸಿ = ಎಂದು ಕುಂತಿಯನ್ನು ಕಳುಹಿ ಬಿಟ್ಟು, ರಾಧೇಯಂ = (ರಾಧಾನಂದನನಾದ) ಕರ್ಣನು, ಚಲದ ಚಾಗದಕುಲದ ನನ್ನಿಯುಂ ಆವರ್ಜಿಸಿ = ಚಲದ, ಚಾಗದ, ಮತ್ತು ಕುಲದ ಸತ್ಯನ್ಯಾಯವನ್ನು ಅನುವರ್ತಿಸಿ (ಆವರ್ಜಿಸು – ಸಂಪಾದಿಸು, ಅನುವರ್ತಿಸು, – ಆವರ್ಜಿಸಿ × ವಿಸರ್ಜಿಸಿ, ವರ್ಜಿಸಿ;) ಒಳ್ಪಿಂಗೆ = ಸಚ್ಚರಿತಕ್ಕೆ ('ಒಳ್ಳಿತು' ಎಂಬುದರ ಭಾವನಾಮವು 'ಒಳ್ಪು') ಆಧೇಯಂ ಆಗಿರ್ದಂ = ಆಶ್ರಿತನಾಗಿದ್ದನು ಇಲ್ಲಿ ಯಮಕಾಲಂಕಾರವು ॥

ಎಂಬಲ್ಲಿಗೆ ಕರ್ಣರಸಾಯನದಲ್ಲಿ
ಚತುರ್ಥಗ್ರಾಸಂ ಮುಗಿದುದು



## ಪಂಚಮಸಂಗ್ರಾಮಂ

ವು । ಅತ್ತ ದುರ್ಯೋಧನಂ ಸಹಸ್ರಕಿರಣೋದಯದೊಳನೇಕಸಹಸ್ರನರ ಪತಿಪರಿವೃತನಾಗಿ ಮಂದಾಕಿನೀತನೂಜಂಗೆ ಬಟ್ಟಿಯನಟ್ಟಿ ಬರಿಸಿ ಮಣಿಮಯಪೀಠದೊಳ್ ಕುಳ್ಳಿರಿಸಿ ದೇವಾಸುರಯುದ್ಧದೊಳ್ ಗುಹಂಗೆ ವೀರಪಟ್ಟಮಂ ಕಟ್ಟುವ ಪುರಂದರನಂದಮನೆ ಪೋಲ್ತು ಪರಶುರಾಮನನಂಜಿಸಿದ ವೀರಂಗೆ ವೀರಪಟ್ಟಮಂ ಕಟ್ಟಿ ಪಗೆವರನೆನ್ನ ಮಂಚದ ಕಾಲೊಳ್ ಕಟ್ಟಿದೆನೆಂದು ಪೊಟ್ಟಳಿಸುವ ಸುಯೋಧನನ ನುಡಿಯಾನವಕರ್ಣಿಸಿ ಕರ್ಣನಿಂತೆಂದಂ—

---

ಅವತರಣಿಕೆ—ಭಾರತಯುದ್ಧಕ್ಕೆ ನಾಂದಿಯಂತೆ ಸುಯೋಧನನು ಭೀಷ್ಮರನ್ನು ಸೇನಾನಾಯಕಪದವಿಯಲ್ಲಿ ಅಭಿಷೇಕಿಸಿ, ತಾನು ವೈರಿಗಳನ್ನು ಬಗ್ಗು ಬಡಿದಂತೆಯೇ ಸರಿ ಯೆಂದು ಹಿಗ್ಗಿಕೊಳ್ಳುತ್ತಿದ್ದನು ಅದನ್ನು ನೋಡಿ ಸ್ವಾಮಿನಿಷ್ಠನಾದ ಕರ್ಣನು—"ಒಡೆ ಯನೇ ನೀನಿವರನ್ನು ನಂಬಿ ಮೋಸಹೋಗುತ್ತಿರುವೆಯಲ್ಲಾ! ಈ ಮುದುಕರೆಂದೆಂದಿಗೂ ಆ ಮೊಮ್ಮಕ್ಕಳೊಂದಿಗೆ ಹೃತ್ಪೂರ್ವಕವಾಗಿ ಹೋರಾಡಲಾರರು" ಎಂಬ ಸತ್ಯಾಂಶವನ್ನು ಹೇಳಿಬಿಡುವನು. ಅದನ್ನು ಕೇಳಿ ದ್ರೋಣನು 'ಕಂಡಂತೆ ನುಡಿದರೆ ಕೆಂಡದಂತಹ ಸಿಟ್ಟು' ಎಂಬ ಮಾತಿನಂತೆಯೇ ರಾಧೇಯನನ್ನು ವಿಶೇಷವಾಗಿ ಆಕ್ಷೇಪಿಸುವನು ಆದರೂ, ಸತ್ಯನಿಷ್ಠನೂ ಅಭಿಮಾನಶಾಲಿಯೂ ಸ್ವಾಮಿಭಕ್ತನೂ ಆಗಿರುವ ಕರ್ಣನು ಮುಚ್ಚು ಮರೆಯಿಲ್ಲದೆ "ಈ ಗಾಂಗೇಯನು ಪಾಂಡವರನ್ನು ಗೆದ್ದರೆ ನಾನು ತಪಸ್ಸಿಗೆ ಹೋಗುವೆನು, ಒಂದು ವೇಳೆ ಅದಕ್ಕೆ ವಿಪರೀತವಾದಲ್ಲಿ ನಾನೇ ಹೋರಾಡುವೆನು, ಹಾಗಲ್ಲದೇನೇ ನಾನು ಬಿಲ್ಲು ಹಿಡಿಯಲಾರೆನು," ಎಂದು ಆರೂಢಪ್ರತಿಜ್ಞನಾಗುವನು ॥

ಅತ್ತ —ಇಂತೆಂದುವಚನಂ ॥ ಅತ್ತ ದುರ್ಯೋಧನಂ= (ಅತ್ತ= ಧೃತರಾಷ್ಟ್ರನ ಅರಮನೆಯಲ್ಲಿ) ದುರ್ಯೋಧನನು, ಸಹಸ್ರಕಿರಣೋದಯದೊಳ್ = ಸೂರ್ಯೋದಯದಲ್ಲಿ, ಅನೇಕನರಪತಿಪರಿವೃತನಾಗಿ= ಹಲವು ರಾಜರುಗಳಿಂದ ಸುತ್ತುವರಿಯಲ್ಪಟ್ಟವನಾಗಿ (ರಾಜಾಧಿರಾಜನಾದುದರಿಂದ), ,ಮಂದಾಕಿನೀತನೂಜಂಗೆ= ಗಂಗಾಪುತ್ರನಾದ ಭೀಷ್ಮ ನಿಗೆ, ಬಟ್ಟಿಯನಟ್ಟಿ ಬರಿಸಿ= ದೂತರ ಮೂಲಕ ಹೇಳಿ ಕಳುಹಿಸಿ ಬರಿಸಿ, [ಬಟ್ಟಿ ಯಟ್ಟು (ಧಾತು) ದೂತಪ್ರೇಷಣೇ, ಹೇಳಿ ಕಳಿಸು] ಮಣಿಮಯಪೀಠದೊಳ್ ಕುಳ್ಳಿ ರಿಸಿ= ರತ್ನಮಯವಾದ ಆಸನದಲ್ಲಿ ಕುಳ್ಳಿರಿಸಿ, ದೇವಾಸುರಯುದ್ಧದೊಳ್ ಗುಹಂಗೆ ವೀರಪಟ್ಟವಂ ಕಟ್ಟುವ ಪುರಂದರನ ಅಂದಮನೆಪೋಲ್ತು= ದೇವತೆಗಳಿಗೂ ರಾಕ್ಷಸರಿಗೂ ಯುದ್ಧವಾದಾಗ, ದೇವತೆಗಳ ಪಕ್ಷದ ಸೇನಾನಾಯಕನನ್ನಾಗಿ ಸುಬ್ರಹ್ಮಣ್ಯನಿಗೆ ವೀರ

ಪಟ್ಟವನ್ನು ಕಟ್ಟುವ ದೇವೇಂದ್ರನ ರೀತಿಗೆ ಸಮಾನವಾಗಿ (ಗುಹ = ಸುಬ್ರಹ್ಮಣ್ಯ, ಸ್ವಾಮಿ ಕುಮಾರಸ್ವಾಮಿ, ಸ್ಕಂದ, ಷಡಾನನ ಇತ್ಯಾದಿ ನಾಮಾಂಕಿತನಾದ ಶಿವಕುಮಾರನು, ಶೂರಪದ್ಮ, ತಾರಕ ಮುಂತಾದ ಅಸುರರು ದೇವತೆಗಳೊಡನೆ ಯುದ್ಧಕ್ಕೆ ಬಂದಾಗ, ದೇವತೆಗಳು ಶಿವಪುತ್ರನಾದ ಗುಹನನ್ನು ಸೇನಾನಿಯಾಗಿ ನಿಶ್ಚಯಿಸಿ ಆತನಿಗೆ ಸಂಭ್ರಮದಿಂದ ವೀರಪಟ್ಟವನ್ನು ಕಟ್ಟಿ, ಮುಂದೆ ನಡೆದ ಯುದ್ಧದಲ್ಲಿ ಅಸುರನಾಯಕರನ್ನು ಸಂಹರಿಸಿದರು. ಹಾಗೆಯೇ ಭೀಷ್ಮನಿಗೂ ಕೌರವಬಲಕ್ಕೆ ಅಧಿಪತಿಯಾಗುವಂತೆ ವೀರಪಟ್ಟವನ್ನು ಕಟ್ಟಿ, ಅವನ ಸೇನಾಧಿಪತ್ಯದಲ್ಲಿ ಕಾದಿ ಪಾಂಡವರನ್ನು ಸಂಹರಿಸಬಲ್ಲೆನೆಂದು ದುರ್ಯೋಧನನು ಸಂಭ್ರಮಾಕುಲಿತನಾಗಿದ್ದನು ಅಂದು ಪುರಂದರನು ಹೇಗೆ ಗುಹನಿಗೆ ವೀರಪಟ್ಟವನ್ನು ಕಟ್ಟಿದಾಗ ಸಮರ ಜಯದಲ್ಲಿ ನಿಶ್ಚಿಂತನಾಗಿ ಸಂಭ್ರಮದಿಂದಿದ್ದನೋ ಹಾಗೆ ಇಂದೀ ದುರ್ಯೋಧನನೂ ಸಂಭ್ರಮದಿಂದಿದ್ದು ಭೀಷ್ಮನಿಗೆ ವೀರಪಟ್ಟವನ್ನು ಕಟ್ಟಿದನು ಎಂದು ಭಾವವು) ಇಲ್ಲಿ ಉಪಮಾಲಂಕಾರವು ಪುರಂದರ = (ಗಾಪ್ಸಸರ ಪಟ್ಟಣಗಳನ್ನು ಭೇದಿಸಿದವನು) ದೇವೇಂದ್ರನು, ಪರಶುರಾಮನಂ ಅಂಜಿಸಿದ ವೀರಂಗೆ ವೀರಪಟ್ಟಮಂ ಕಟ್ಟಿ = ಪರಶುರಾಮನನ್ನು ಯುದ್ಧದಲ್ಲಿ ಭಯಪಡಿಸಿದ ವೀರನಾದ ಭೀಷ್ಮನಿಗೆ ವೀರಪಟ್ಟವನ್ನು ಕಟ್ಟಿ, [ಭೀಷ್ಮನು ಪರಶುರಾಮನನ್ನು ಅಂಜಿಸಿದುದು — ಭೀಷ್ಮನು ತನ್ನ ದಾಯಾದನಾದ ವಿಚಿತ್ರವೀರ್ಯನಿಗಾಗಿ ಸ್ವಯಂವರದಲ್ಲಿ ಗೆದ್ದು ತರಲ್ಪಟ್ಟ ಅಂಬೆಯೆಂಬಾಕೆಯು ತನ್ನನ್ನು ಗೆದ್ದು ತಂದ ಭೀಷ್ಮನನ್ನೇ ವರಿಸುವೆನೆಂದು ಹಟಹಿಡಿದಾಗ, ತಾನು ಬ್ರಹ್ಮಚರ್ಯವ್ರತನಿಷ್ಠನಾಗಿ ಅದಕ್ಕೊಪ್ಪದಿರಲು, ಅಂಬೆಯು ಪರಶುರಾಮನಲ್ಲಿ ಹೋಗಿ "ತನ್ನನ್ನು ಭೀಷ್ಮನು ವರಿಸಿಕೊಳ್ಳುವಂತೆ ಮಾಡು" ಎಂದು ದೂರಿಕೊಂಡಳು. ಆಗ ಭಾರ್ಗವನು ಆಕೆಯಲ್ಲಿ ಕೃಪೆದೋರಿ, ಅಂಬೆಯನ್ನು ವಿವಾಹಮಾಡಿಕೊಳ್ಳುವಂತೆಯೂ ಅದಕ್ಕೆ ತಪ್ಪಿದರೆ ತನ್ನೊಡನೆ ಕಾದಬೇಕಾಗುವುದೆಂದೂ ಹೇಳಿಕಳಿಸಿದಾಗ, ಭೀಷ್ಮನು ತನಗೆ ಗುರುವಾದ ಪರಶುರಾಮನ ಮಾತಿಗೊಡಂಬಡದೆ, ತನ್ನ ಬಹ್ಮಚರ್ಯವ್ರತ ಪರಿಪಾಲನೆಯನ್ನೇ ಮುಖ್ಯಕರ್ತವ್ಯವಾಗಿಟ್ಟುಕೊಂಡು, ಪರಶುರಾಮನು ತನ್ನ ಗುರುವೆಂಬುದನ್ನು ಕೂಡ ಲಕ್ಷಿಸದೆ ಆತನೊಡನೆ ಹೋರಾಡಿ ಜಯಿಸಿದನು. ಕ್ಷತ್ರಿಯ ಕುಲಸಂಹಾರಕನೂ ದುರ್ಜಯನೂ ಆದ ಪರಶುರಾಮನನ್ನೇ ಅಂಜಿಸಿದ ಭೀಷ್ಮನು ಸಾಮಾನ್ಯವೀರನೇ ? ಅಂತಹನಿಗೆ ದುರ್ಯೋಧನನು ವೀರಪಟ್ಟವನ್ನು ಕಟ್ಟಿದನೆಂದು ಭಾವವು.] ಪಗೆವರಂ ಎನ್ನ ಮಂಚದಕಾಲೊಳ್ ಕಟ್ಟಿದೆನೆಂದು = ವೈರಿಗಳನ್ನು ನನ್ನ ಮಂಚದ ಕಾಲಿಗೆ ಕಟ್ಟಿದೆನು ಎಂದು ಹೇಳಿಕೊಳ್ಳುತ್ತ; ಪೊಟ್ಟಳಿಸುವ = ಗರ್ವದಿಂದ ಉಬ್ಬುವ; ಸುಯೋಧನನ ನುಡಿಯಂ ಅವಕರ್ಣಿಸಿ ಕೌರವೇಶ್ವರನ ಮಾತನ್ನು ಕೇಳಿ; ಕರ್ಣಂ ಇಂತೆಂದಂ = ಕರ್ಣನು ಹೀಗೆಂದನು ॥

ಭಗವತಿಯೇಱುವೇಟ್ವಿ ತೆರದಿಂ ಕಥೆಯಾಯ್ತುವರೇಱು ನೀನಿದಂ।
ಬಗೆದಿವರಿನ್ನುಮಾಂತಿಱಿವರೆಂದು ವಿಮೋಹಿಸಿ ವೀರಪಟ್ಟಮುಂ॥
ಬಗೆಯದೆ ಕಟ್ಟಿದಯ್ ಗುರುಗಳಂ ಕುಲವೃದ್ಧರನಾಜಿಗುಯ್ದು ಕೆ-।
ಮ್ಮಗೆ ಪಗೆವಾಡಿಯೊಳ್ ನಗಿಸಿಕೊಂಡೊಡೆ ಬಂದಪುದೇಂ
ಸುಯೋಧನಾ ॥ ೧ ॥

---

ಭಗವತಿ— ಇಂತೆಂದು ಚಂ ಮಾ. ವೃತ್ತಂ ॥ ಸುಯೋಧನಾ= ಎಲೈ ಕೌರವೇಶ್ವರನೇ; ಇವರ ಏಱು= ಈ ಭೀಷ್ಮರು ವೀರಪಟ್ಟವನ್ನೇರಿದುದು, ಭಗವತಿ ಏಱುವೇಟ್ವಿ ತೆರದಿಂ ಕಥೆಯಾಯ್ತು= ಭಗವತಿಯು ಉತ್ತಮ ಭವಿಷ್ಯವನ್ನು ಹೇಳುವಕಥೆಯ ಹಾಗಾಯಿತು. ಹಾಸ್ಯಾಸ್ಪದವಾಯ್ತೆಂದು ಭಾವವು ಭಗವತಿಯೇಱುವೇಟ್ವಿತೆರದ ಕಥೆಯಾವುದು? (ದೇವಿಯ ಆವೇಶವಾದವನ ಭವಿಷ್ಯೋಕ್ತಿಯಲ್ಲಿ ನಂಬಿಕೆಯಿಟ್ಟು ಮೋಸಹೋದವನ ಹಾಗೆ) ನೀನಿದಂ ಬಗೆದು= ನೀ ನಿ ದ ನ್ನು ಯೋಚಿಸಿ; ಇವರ್ ಇನ್ನುಂ ಅಂತಿಱಿವರೆಂದು ವಿಮೋಹಿಸಿ= ಇವರು ಇನ್ನೂ ಯುದ್ಧದಲ್ಲಿ ಇದಿರೊಡ್ಡಿ ಕಾದಾಡುವರೆಂದು ಭ್ರಮಿಸಿ, ವೀರಪಟ್ಟಮುಂ ಬಗೆಯದೆ ಕಟ್ಟಿದೈ= ಹಿಂದುಮುಂದು ವಿಚಾರಿಸದೆ ವೀರಪಟ್ಟವನ್ನು ಕಟ್ಟಿದೆಯಯ್ಯಾ, ಗುರುಗಳಂ ಕುಲವೃದ್ಧರಂ= ನಮಗೆ ಪೂಜ್ಯರೂ ಕುಲವೃದ್ಧರೂ ಆದ ಇವರನ್ನು; ಆಜಿಗೆ ಉಯ್ದು= ಕಾಳಗಕ್ಕೆ ಹೋಗುವಂತೆ ಕಳುಹಿಸಿ, ಕೆಮ್ಮಗೆ= ವ್ಯರ್ಥವಾಗಿ, ಪಗೆವಾಡಿಯೊಳ್ ನಗಿಸಿಕೊಂಡೊಡೆ= ವೈರಿಗಳ ರಾವಿನಲ್ಲಿ ನಗೆಗೆ ಎಡೆಮಾಡಿಕೊಂಡರೆ, ಏಂ ಬಂದಪುದು= ಏನುಪ್ರಯೋಜನವು, (ಈ ಕುಲವೃದ್ಧರನ್ನು ಆಜಿಗೆ ಒಯ್ದರೆ, ಇಂತಹ ಹಣ್ಣುಮುದುಕರನ್ನು ನೀನು ಕಾಳಗಕ್ಕೆ ನಿಲ್ಲಿಸಿದುದನ್ನು ನೋಡಿ ಶತ್ರುಪಕ್ಷದವರು ನಿನ್ನ ಅವಿವೇಕಕ್ಕಾಗಿ ನಗದಿರುವರೇ? ಹಾಗೆ ಹಾಸ್ಯಾಸ್ಪದವಾಗಿ ಇವರನ್ನು ಕಳಿಸಿದುದರಿಂದ ನಿನಗೇನು ಪ್ರಯೋಜನವಾದಂತಾಯ್ತು ಎಂದು ಕರ್ಣನ ಮಾತಿನ ಆಶಯವು. ಇಲ್ಲಿ "ಕೆಮ್ಮಗೆ ಪಗೆವಾಡಿಯೊಳ್‌ನಗಿಸಿಕೊಂಡೊಡೆ ಬಂದಪುದೇಂ ಸುಯೋಧನಾ" ಎಂಬ ಮಾತಿನ ಸಾರದಲ್ಲಿಯೇ, ಅದಕ್ಕೆ ಸಂವಾದಿಯಾಗಿಯೆಂಬಂತೆ ಕುಮಾರವ್ಯಾಸಭಾರತದ ಭೀಷ್ಮಪರ್ವದ ೧ನೆಯ ಸಂಧಿಯಲ್ಲಿ—"ತೊಗಲು ಸಡಿಲಿದ ಗಲ್ಲ ಬತ್ತಿದ | ಹೆಗಲು ನಱುಕಿದ ನರೆತಮೀಸೆಯುಜ | ಗುಳ್ದ ಹಲುಗಳ ಹಾಯಿದೆಲುಗಳ ನೆಗ್ಗಿದವಯವದ ॥ ಅಗಿಯಲಲುಗುವ ತಲೆಯ ಮುಪ್ಪಿನ । ಮುಗುದನೀತನ ಕಾದ ಹೇಳಿದು ನಗೆಯ ಸುರಿದೈರಾಯಕಟಕದೊಳೆಂದನಾ ಕರ್ಣ ॥ ೩೫ ॥ ಇಲ್ಲಿ ಭೀಷ್ಮನು ರಾಘವನ ಬಲ । ದಲ್ಲಿ ಜಾಂಬವನುಭಯ ವೀರರು । ಬಲ್ಲಿದರು ಬಳಿಕುಳಿದ ಸುಭಟರ ಶೌರ್ಯವೊಪ್ಪುವುದೆ ॥ ನಿಲ್ಲುನೀಕೊಲಲೆಳಸುವರೆ ಹಗೆ । ಯಲ್ಲಿಗೊಪ್ಪಿಸಿ ಕೊಲಿಸ

ಕಟ್ಟಿದ ಪಟ್ಟಮೆ ಸರವಿಗೆ ।
ನೆಟ್ಟನೆ ದೊರೆ ಪಿಡಿದ ಬಿಲ್ಲೆ ದಂಟಿಂಗೆಣೆ ಕ-॥
ಣ್ಗೆಟ್ಟ ಮುದುಪಂಗೆ ಪಗೆವರ ।
ನಿಟ್ಟೆಲ್ವಂ ಮುಱಿವೊಡೆನಗೆ ಪಟ್ಟಂಗಟ್ಟಾ ॥ ೨ ॥
ಆದಿಯೊಳವರಂ ಪಿರಿದೊಂ- ।
ದಾದರದಿಂ ನಡಪಿದಜ್ಜರಪ್ಪುದಱಿಂದಂ ॥
ಕಾದರಿವರವರೊಳವರುಂ ।
ಕಾದರ್ ನೆರೆದಿವರೊಳೆಂತು ನಂಬುವೆ ನೃಪತೀ ॥ ೩ ॥

---

ಲೇತಕೆ । ಬಿಲ್ಲಿನಲಿ ಬಡಿದಡ್ಡಗೆಡಹುವೆನೆಂದನಾ ಕರ್ಣ ॥ ೩೬ ॥" ಎಂಬ ಪದ್ಯಗಳನ್ನು ಹೋಲಿಸಿಕೊಳ್ಳಬಹುದು "ನಿಲ್ಲು ನೀಕೊಲಲೆಳಸುವರೆ ಹಗೆ । ಯಲ್ಲಿಗೊಪ್ಪಿಸಿ ಕೊಲಿಸಲೇತಕೆ" ಎಂಬ ವಾಕ್ಯಾಭಿಪ್ರಾಯವು "ಕೆಮ್ಮಗೆ ಪಗೆವಾಡಿಯೊಳ್ಪುಗಿಸಿ ಕೊಂದೊಡೆ ಬಂದಪುದೇಂ ಸುಯೋಧನಾ" ಎಂದು ಮಾರ್ಪಡಿಸಿದರೆ ಸರಿ ಹೋಗುವುದು ) ॥ ೧ ॥

ಕಟ್ಟಿದ — ಇಂತೆಂದು ಕಂದಂ ॥ ಕಣ್ಗೆಟ್ಟ ಮುದುಪಂಗೆ= ಈ ಕುರುಡು ಮುದುಕನಿಗೆ, ಕಟ್ಟಿದ ಪಟ್ಟಮೆ=(ನೀನೀಗ) ಕಟ್ಟಿದ ಪಟ್ಟಬಂಧವೇ, ನೆಟ್ಟನೆ ಸರವಿಗೆ ದೊರೆ= ನೇರಾಗಿ ಹಗ್ಗಕ್ಕೆ ಸಮಾನವು, ಪಿಡಿದ ಬಿಲ್ಲೆ=(ಈತನು ತನ್ನ ಕೈಯಲ್ಲಿ) ಹಿಡಿದ ಬಿಲ್ಲೇ, ದಂಟಿಂಗೆ ಎಣೆ= ದಂಟಿಗೆ ಸಮಾನವು, ಹೀಗಿರುವಲ್ಲಿ, ಈತನು ಪಗೆವರೊಡನೆ ಕಾದಿಗೆಲ್ವುದು ಸಾಧ್ಯವೇ? ಅಲ್ಲವು ಆದುದರಿಂದ, ಪಗೆವರ ನಿಟ್ಟೆಲ್ವಂ ಮುಱಿವೊಡೆ= ವೈರಿಗಳ ನಿಟ್ಟೆಲುಬನ್ನು ಮುರಿಯಬೇಕಿದ್ದರೆ (ಶತ್ರು ಸಂಹಾರವಾಗಬೇಕೆಂದು ನಿನ್ನ ಇಚ್ಛೆಯಿದ್ದರೆ) ಎನಗೆ ಪಟ್ಟಂಗಟ್ಟಾ= ನನಗೆ ಪಟ್ಟ ಕಟ್ಟಯ್ಯಾ ॥ [ಪಟ್ಟಂಗಟ್ಟಾ= ಮಧ್ಯಮಪುರುಷೈಕವಚನದ ಧಾತುಗೆ ವಿಧ್ಯರ್ಥ ದಲ್ಲಾದ ಅತ್ವಕ್ಕೆ ಪ್ರಶ್ನಾರ್ಥದಲ್ಲಿ ದೀರ್ಘಾದೇಶವು] ॥ ೨ ॥

ಆದಿಯೊಳ್ — ಇಂತೆಂದು ಕಂದಂ ॥ (ಇವರ್) ಅವರಂ= ಆ ಪಾಂಡು ತನಯರನ್ನು, ಆದಿಯೊಳ್= ಬಾಲ್ಯದಲ್ಲಿ, ಪಿರಿದೊಂದು ಆದರದಿಂ= ಬಹಳ ಮಮತೆಯಿಂದ, ನಡಪಿದ= ನಡಸಿದ [ನಡಪು (ಧಾತು) ಸಾಕು, ಸಲಹು.] ಅಜ್ಜರ ಪ್ಪುದಱಿಂದಂ= ಅಜ್ಜರಾದುದರಿಂದ, [ಅಜ್ಜ (ಸಂ) ಆರ್ಯ] ಇವರ್ ಅವರೊಳ್ ಕಾದರ್= ಇವರು ಅವರೊಡನೆ ಯುದ್ಧಮಾಡರು, [ಕಾದು (ಧಾತು) ಹೋರಾಡು] ಅವರುಂ ನೆರೆದು ಇವರೊಳ್ ಕಾದರ್= ಅವರೂ ಇವರೆದುರಾಗಿ ಹೋರಾಡಲಿಕ್ಕಿಲ್ಲ [ನೆರೆ (ಧಾತು) ಸಂಯೋಗೇ, ಆಶ್ಲೇಷೇಚ, ನೆಱೆ= ಸಮಗ್ರತ್ವೇ] ನೃಪತೀ=

ವ ॥ ಎಂಬುದುಮಾನುಡಿಗೆ ಸಿಡಿಲ್ದು* ಕುಭಸಂಭವನಿಂತೆಂದಂ—

ಸಿಂಗದ ಮುಪ್ಪುಂ ನೆಗೞ್ದೀ* ।
ಗಾಂಗೇಯರ ಮುಪ್ಪುಮಿೞಿಕೆವಡೆಗುಮೆ ವನಮಾ- ॥
ತಂಗಂಗಳಿನಸುಹೃಚ್ಚತು- ।
ರಂಗಬಲಂಗಳಿನದೆಂತುಮಂಗಾಧಿಪತೀ ॥ ೪ ॥

---

ಅರಸನೇ, (ನೃಪತೀ-ಸಂಬೋಧನೆಯಲ್ಲಿ ಲಿಂಗದ ಏಕವಚನಕ್ಕೆ ದೀರ್ಘವು— "ಎಲ್ಲಿಯುಮಾಮಂತ್ರಣದೊಳ್ | ಬಲ್ಲರ್ ಪ್ರಥಮೈಕವಚನಮಂ ಲೋಪಿಸುವರ್। ನಿಲ್ಲದೆ ವಿಕಲ್ಪಮುಖದಿಂ | ಸೊಲ್ಲಿಸುವರ್ ಹ್ರಸ್ವದೀರ್ಘಕಾಕುಗಳೆರಡಂ || ಶ ಮ ದ ಸೂ. || ೧೨೩ || ಎಂತುನಂಬುವೆ= ಹೇಗೆ ನಂಬುವೆಯೋ? (ಈ ಭೀಷ್ಮರಿಗೆ ಪಾಂಡುತನಯರಲ್ಲಿ ಸಹಜವಾದ ಮಮತೆಯಿರುವುದರಿಂದ, ಇವರು ಅವರೊಡನೆ ಮನಃಪೂರ್ವಕವಾಗಿ ಕಾದುವರೆಂಬುದನ್ನು ನೀನು ನಂಬಕೂಡದು ಎಂದು ಕರ್ಣನ ಅಭಿಪ್ರಾಯವು || ३ ||

ಎಂಬುದುಂ—ಇಂತೆಂದು ವಚನಂ ॥ ಎಂಬುದುಂ= (ಕರ್ಣನು ಹೀಗೆ) ಹೇಳಲು, ಆ ನುಡಿಗೆ ಸಿಡಿಲ್ದು = ಆ ಮಾತಿಗೆ ರೇಗಿಬಿದ್ದು [ಸಿಡಿಲ್ (ಧಾತು) ರೇಗು] ಕುಂಭಸಂಭವಂ = ದ್ರೋಣನು, ಇಂತೆಂದಂ= ಹೀಗೆಂದನು ॥

ಸಿಂಗದ—ಇಂತೆಂದು ಕಂದಂ ॥ ಅಂಗಾಧಿಪತೀ = ಅಂಗದೇಶಾಧೀಶ್ವರನಾದ ಕರ್ಣನೇ, (ಸಂಬುದ್ಧಿಯಲ್ಲಿ ದೀರ್ಘ) ವನಮಾತಂಗಂಗಳಿಂ= ಕಾಡಾನೆಗಳಿಂದ, ಸಿಂಗದ ಮುಪ್ಪುಂ= ಸಿಂಹದ ಮುದಿತನವೂ, ಅಸುಹೃಚ್ಚತುರಂಗಬಲಂಗಳಿಂ= (ಸುಹೃತ್–ಮಿತ್ರನು; ನ ಸುಹೃತ್ = ಮಿತ್ರನಲ್ಲದವನು–ಅಸುಹೃತ್;) ವೈರಿಗಳ ಗಜರಥತುರಗ ಪದಾತಿಗಳೆಂಬ ನಾಲ್ಕು ಅಂಗಗಳುಳ್ಳ ಸೈನ್ಯಗಳಿಂದ, ಈ ಗಾಂಗೇಯರ ಮುಪ್ಪುಂ = ಪ್ರಸಿದ್ಧರಾದ ಈ ಭೀಷ್ಮರ ಮುದಿತನವೂ; ಅದೆಂತುಂ= ಅದು ಹೇಗಿದ್ದರೂ; ಇೞಿಕೆ ವಡೆಗುಮೆ = ಹೀನಾವಸ್ಥೆಯನ್ನು ಪಡೆವುವೆ? [ಇೞಿಕೆವಡೆ = ತಿರಸ್ಕಾರವನ್ನು ಹೊಂದು, ಇೞಿಕೆವಡೆಗುಮ್+ಎ–ಇೞಿಕೆವಡೆ ಎಂಬುದಕ್ಕೆ ವರ್ತಮಾನಕಾಲದ ಗುಮಾಗಮ] ಸಿಂಹವು ಎಷ್ಟು ಮುಪ್ಪಾಗಿದ್ದರೂ ವನಮಾತಂಗಗಳನ್ನು ಕೊಲ್ಲುವುದಕ್ಕೆ ಸಮರ್ಥ ವಪ್ಪುದು; ಅದರಂತೆ ಆ ಗಾಂಗೇಯರು ಎಷ್ಟು ಮುಪ್ಪಿನಲ್ಲಿದ್ದರೂ ಅಸುಹೃಚ್ಚತುರಂಗ ಬಲಗಳನ್ನು ಇೞಿವುದಕ್ಕೆ ಸಮರ್ಥರಪ್ಪರು! ಎಂದು ದ್ರೋಣನ ಮಾತಿನ ತಾತ್ಪರ್ಯವು॥ ಯಥಾಸಂಖ್ಯ ದೀಪಕಾಲಂಕಾರಗಳು. ॥ ೪ ॥

ಕುಲಜರನುದ್ಧತರಂ ಭುಜ ।
ಬಲಯುತರಂ ಹಿತರನೀಸಭಾಮಧ್ಯದೊಳ್– ॥
ಗ್ಗಲಿಸಿದ ಮದದಿಂ ನಾಲಗೆ ।
ಕುಲಮಂ ತುಬ್ಬುವವೊಲುಱದೆ ನೀಂ ಕಿಡೆನುಡಿವಯ್ ॥ ೫ ॥

ವ ॥ ಎಂದು ನುಡಿದ ಗುರುವಿನ ಕರ್ಣಕಠೋರವಚನಂಗಳ್ಗೆ ಕರ್ಣಂ ಕಿನಿಸಿ-

ಕುಲಮನೆ ಮುನ್ನಮುಗ್ಗಡಿಪಿರೇಂ ಗಳ ನಿಮ್ಮ ಕುಲಂಗಳಾಂತು ಮಾ–।
ರ್ಮಲೆವರನಟ್ಟಿ ತಿಂಬುವೆ ಕುಲಂ ಕುಲಮಲ್ತು ಛಲಂ ಕುಲಂ ಗುಣಂ॥
ಕುಲಮಭಿಮಾನಮೊಂದೆ ಕುಲಮಣ್ಮು ಕುಲಂ ಬಗೆವಾಗಳೀಗಳೀ ।
ಕಲಹದೊಳಣ್ಣ ನಿಮ್ಮ ಕುಲಮಾಕುಲಮಂ ನಿಮಗುಂಟು
ಮಾಡುಗುಂ ॥ ೬ ॥

---

ಕುಲಜರಂ — ಇಂತೆಂದು ಕಂದಂ ॥ ಕುಲಜರಂ = ಸತ್ಕುಲೀನರೂ, ಉದ್ಧತರಂ = ಧೀರೋದ್ಧತರೂ, ಭುಜಬಲಯುತರಂ = ಬಾಹುಪರಾಕ್ರಮವುಳ್ಳವರೂ, ಹಿತರಂ = ಹಿತೈಷಿಗಳೂ ಆದ ಈ ಭೀಷ್ಮರನ್ನು (ಕುಲಜರಂ, ಉದ್ಧತರಂ, ಭುಜಬಲಯುತರಂ, ಹಿತರಂ = ಈ ವಿಶೇಷಣಗಳು ಭೀಷ್ಮನನ್ನೇ ವರ್ಣಿಸುವುವು) ಈ ಸಭಾಮಧ್ಯದೊಳ್ = ಇಂತೀ ಸಭಾಮಧ್ಯದಲ್ಲಿ, ಅಗ್ಗಲಿಸಿದಮದದಿಂ = ಮಿತಿಮೀರಿದ ಸೊಕ್ಕಿನಿಂದ, ನಾಲಗೆ ಕುಲಮಂತುಬ್ಬುವವೊಲ್ = ನಾಲಗೆ ಕುಲವನ್ನು ಪ್ರಕಟಿಸಿಕೊಳ್ಳುವ ಹಾಗೆ, (ನಾಲಗೆ ಕುಲವನ್ನು ತುಬ್ಬುವುದು ಎಂಬುದು ನಾಣ್ಣುಡಿ, ಮಾತಿನಿಂದ ಕುಲವನ್ನರಿಯಬಹುದೆಂಬುದು ತಾತ್ಪರ್ಯವು) ನೀಂ ಉಱದೆ = ನೀನು ನಿರ್ಲಕ್ಷ್ಯವಾಗಿ, ಕಿಡೆನುಡಿವೈ = ಹೀನೈಸಿನುಡಿವೆಯಲ್ಲಾ ! [ಕಿಡೆನುಡಿ (ಧಾತು) ನಿಂದಿಸಿ ಮಾತಾಡು] ಕೆಡೆನುಡಿ ಮತ್ತು ಕಿಡೆನುಡಿ ಇವುಗಳೊಳಗಣ ಅರ್ಥವ್ಯತ್ಯಾಸವನ್ನು ಗ್ರಹಿಸಿಕೊಳ್ಳುವುದು ॥ ಈ ಪದ್ಯದಲ್ಲಿ ಲೋಕೋಕ್ತ್ಯಲಂಕಾರವು ॥ ೫ ॥

ಎಂದು ನುಡಿದ — ಇಂತೆಂದು ವಚನಂ ॥ ಎಂದು ನುಡಿದ ಗುರುವಿನ ಕರ್ಣಕಠೋರ ವಚನಂಗಳ್ಗೆ – ಹೀಗೆ ಹೇಳಿದ ದ್ರೋಣನ ಆ ಕರ್ಣಕಠೋರವಾದ ಮಾತುಗಳಿಗೆ (ಕರ್ಣನು) ಕಿನಿಸಿ = ಕೋಪಿಸಿ, [ಕಿನಿಸು (ಧಾತು) ಕೋಪೇ; ಸಿಟ್ಟುಗೊಳ್ಳು,]

ಕುಲಮನೆ — ಇಂತೆಂದು ಚಂ. ಮಾ. ವೃತ್ತಂ ॥ ಕುಲುಮನೆ ಮುನ್ನಂ ಉಗ್ಗಡಿಪಿರ್ ಏಂಗಳ ? ಕುಲವನ್ನೇ ಮೊದಲು ಉಗ್ಗಡಿಸಿ ಮಾತಾಡುವಿರೇಕೆಯೊ ? [ಉಗ್ಗಡಿಸು (ಧಾತು) ಉಗ್ಗಡ + ಇಸು = ಉತ್ಕಟ + ಇಸು = ಸಂಭಾವಿಸಿ ಹೇಳು; ಅಧಿಕರಿಸಿ ಹೇಳು ('ಗಡ'·'ಗಳ' ಸಮಾನಾರ್ಥಕಗಳು। ಮಾತುಮಾತಿಗೂ ಮೊದಲು ಕುಲವೆಂಬು

ದನ್ನೇ ಪರ್ವತಸದೃಶವಾಗಿ ಸಂಭಾವಿಸಿ ಹೆಮ್ಮೆಯಿಂದ ಮಾತಾಡುತ್ತೀರಲ್ಲಾ! ಏಕೆಯೋ) ನಿಮ್ಮ ಕುಲಂಗಳು = ನಿಮ್ಮ ಕುಲಗಳೆಂದೆನ್ನಿಸುವಂತಹವು, ಮಾರ್ಮಲೆವನಂ = ಇದಿರೊಡ್ಡುವ ವೈರಿಯನ್ನು; ಅಟ್ಟಿತಿಂಬುವೆ ? = ಅಟ್ಟಿ ತಿನ್ನುವುವೇ ? (ಬರೀ 'ಕುಲಕುಲ'ವೆಂದು ಬಾಯ್ಮಾತಿನ ಹೆಮ್ಮೆಯಿಂದ ವೈರಿಗಳ ನಾಶವಾಗುವುದಿಲ್ಲವೆಂದು ಭಾವವು.) ಏಕೆಂದರೆ, ಕುಲಂಕುಲಮಲ್ತು = (ಲೋಕಸಾಮಾನ್ಯದೃಷ್ಟಿಯಿಂದ ನೀವು ಆವುದನ್ನು ಕುಲವೆಂದು ತಿಳಿದಿರುವಿರೋ ಅಂತಹ) ಕುಲವು ನಿಜವಾದ ಕುಲವಲ್ಲವು (ನೀವು ಶರೀರಜನ್ಮೋತ್ಪತ್ತಿಗೆ ಕಾರಣಸ್ಥಾನವನ್ನಷ್ಟೇ 'ಕುಲ'ವೆಂದು ಕರೆವಿರಿ. ಆದರೆ ಆ ಭಾವನೆಯು ಸರಿಯಲ್ಲವೆಂಬ ಕರ್ಣನ ಸ್ವಾಭಿಪ್ರಾಯಸಮರ್ಥನೆಗಾಗಿಯೇ 'ಕುಲಂ ಕುಲಮಲ್ತು' ಎಂದು ಹೇಳಿ, ನಿಜವಾದ ಕುಲವನ್ನು ನಿರ್ಣಯಿಸಬೇಕಾದುದೇತರಿಂದೆಂಬುದನ್ನು ಮುಂದೆ ಹೇಳುತ್ತಾನೆ.) ಚಲಂ ಕುಲಂ, ಗುಣಂ ಕುಲಂ, ಅಭಿಮಾನಮೊಂದೆ ಕುಲಂ, ಅಣ್ಮು ಕುಲಂ = ಚಲ, ಗುಣವು, ಅಭಿಮಾನ, ಅಣ್ಮು — ಇವುಗಳ ಮೇಲ್ಮೆಯಿಂದಲಾಗಿ ಪ್ರತಿಯೊಂದೂ ಕುಲಶಬ್ದವಾಚ್ಯಗಳು, ಎಲ್ಲ ಚಲವಿದೆಯೋ ಅಲ್ಲಿ ಕುಲವಿದೆ, ಎಲ್ಲಿ ಗುಣವಿದೆಯೋ ಅಲ್ಲಿ ಕುಲವಿದೆ, ಎಲ್ಲಿ ಅಭಿಮಾನವೊಂದೆಯಿದೆಯೋ ಅಲ್ಲಿ ಕುಲವಿದೆ, ಎಲ್ಲಿ ಸಾಮರ್ಥ್ಯವಿದೆಯೋ, ಅಲ್ಲಿ ಕುಲವಿದೆ, ಎನ್ನಬೇಕಲ್ಲದೆ, ನೀವೆಣಿಸಿರುವಂತೆ, ಕೇವಲ ಜನ್ಮಸ್ಥಾನನಿರ್ದೇಶಮಾತ್ರದಿಂದ ಕುಲದ ನಿರ್ಣಾಯಕವಾಗುವುದಿಲ್ಲ. 'ಕುಲಮೆಂಬುದುಂಟೆ? ಬೀರಮೆ ಕುಲಮಲ್ಲದೆ ಕುಲಮುನಿಂತು ಪಿಕ್ಕದಿರಿಂ, ನೀಮೊಲಿದೆಲ್ಲಿ ಪುಟ್ಟಿಬಳೆದಿರೊ ಕುಲಮಿರ್ದುದೆ ಕೊಡದೊಳಂ ಶರಸ್ತಂಬದೊಳಂ" ಎಂದು ದುರ್ಯೋಧನನು ದ್ರೋಣ–ಕೃಪರನ್ನು ಕುರಿತು ಹೇಳಿದ ಮರ್ಮಭೇದಕವಚನವನ್ನು ಕರ್ಣನ ಈ ಮಾತಿನೊಡನೆ ಹೋಲಿಸಬಹುದು) ಹಿಂದೊಮ್ಮೆ ವ್ಯಾಯಾಮರಂಗದಲ್ಲಿಯೂ ಕುಲಹೀನತೆಯನ್ನು ಉಗ್ಗಡಿಸಿ, ತಾನು ಸಿಗ್ಗುಗೊಂಡಿದ್ದು ಈಗಲೂ ಭೀಷ್ಮರ ಮುಂದೆ ತನ್ನ ಕುಲಹೀನತೆಯನ್ನೇ ಪ್ರಸ್ತಾಪಿಸಿದುದರಿಂದ, ದ್ರೋಣನು ಮಾತುಮಾತಿಗೆ ಕುಲವನ್ನೇ ಮುಂದುಮಾಡುತ್ತಿರುವನೆಂಬ ಕರ್ಣನ ಅಂತರಾರ್ಥವು 'ಕುಲಮನೆ ಮುನ್ನಂ ಉಗ್ಗಡಿಪಿರೇಂಗಳ' ಎಂಬ ಮಾತಿನ 'ಮುನ್ನಂ'–ಎಂಬ ಪದದಿಂದ ತಿಳಿಯಬೇಕಾಗುವುದು) ಬಗೆವಾಗಳ್ = ಯೋಚಿಸಿ ನೋಡಿದಾಗ, ವಿಚಾರಿಸಿದಪಕ್ಷದಲ್ಲಿ, ಈಗಳ್ ಈ ಕಲಹದೊಳ್ = ಈಗ ಈ ಜಗಳದಲ್ಲಿ, ಅಣ್ಣ! ನಿಮ್ಮ ಕುಲಂ = ಪ್ರಿಯ ಮಹಾಶಯ! ನಿಮ್ಮ ಕುಲವೃತ್ತಾಂತವು, ನಿಮಗೆ ಆಕುಲಮಂ ಉಂಟುಮಾಡುಗುಂ = ನಿಮಗೆ ಮನೋವ್ಯಾಕುಲವನ್ನುಂಟುಮಾಡುವುದು ('ಉಂಟುಮಾಡುಗುಂ'–'ಉಂಟುಮಾಡು' ಎಂಬ ಧಾತುಗೆ 'ಗುಂ' ವರ್ತಮಾನಕಾಲದ ಪ್ರತ್ಯಯವು) ಈ ವೃತ್ತದಲ್ಲಿ 'ಯಮಕ'ವೆಂಬ ಶಬ್ದಾಲಂಕಾರವು ॥ ೬ ॥

ಗಂಗಾಸುತಂ ವೃಥಾಸುತ- ।
ರಂ ಗೆಲ್ದೊಡ ತಪಕೆ ಪೋಪೆನವರ್ಗಳ ಕೆಯ್ಯೊಳ್ ॥
ಗಾಂಗೇಯನಟಿದೊಡಹಿತರ- ।
ನಾಂಗೆಲೆ ತಟ್ಟಿಱಿವೆನನ್ನೆಗಂ ಬಿಲ್ವಿಡಿಯೆಂ ॥ ೭ ॥

ವ ॥ ಎಂದು ಕರ್ಣಂ ಪ್ರತಿಜ್ಞೆಗೆಯ್ವುದುಂ ಸಿಂಧುತನೂಜನಿಂತೆಂದಂ—
ಕಲಿತನದುರ್ಕು ಜವ್ವನದ ಸೊರ್ಕು ನಿಜೇಶನ ನಚ್ಚು ಮಿಕ್ಕ ತೋ- ।
ಳ್ವಲದ ಪೊಡರ್ಪು ಕರ್ಣನಿನಗುಳ್ಳನಿತೇನೆನಗುಂಟೆ ಭಾರತಂ ॥
ಕಲಹಮಿದಿರ್ಚುವಂ ಹರಿಗನಪ್ಪೊಡೆ ಮೊಕ್ಕಳಮೇಕೆ ನೀಂ ಪಳಂ- ।
ಚಲೆದಪೆಯಣ್ಣ ಸೂಟ್ಪಡೆಯಲಪ್ಪುದು ಕಾಣ ಮಹಾಜಿರಂಗ
ದೊಳ್ ॥ ೮ ॥

---

ಗಂಗಾಸುತಂ— ಇಂತೆಂದು ಕಂದಂ ॥ ಗಂಗಾಸುತಂ= ಭೀಷ್ಮನು, ಪೃಥಾಸುತರಂ = ಕುಂತಿಯ ಮಕ್ಕಳನ್ನು, ಕೌಂತೇಯರನ್ನು, ಗೆಲ್ದೊಡೆ = ಗೆದ್ದರೆ, ತಪಕ್ಕೆ ಪೋಪೆಂ - ನಾನು ತಪಸ್ಸಿಗಾಗಿ ಹೊರಟುಹೋಗುವೆನು ಗಾಂಗೇಯಂ, ಅವರ್ಗಳ ಕೆಯ್ಯೊಳ್ ಅಟಿದೊಡೆ= ಭೀಷ್ಮನು ಅವರಕೆಯ್ಯಿಂದ ಕೊಲ್ಲಲ್ಪಟ್ಟರೆ,ಅಹಿತರಂ,ಆಂಗೆಲೆ, ತಟ್ಟಿಱಿವೆಂ = ವೈರಿಗಳನ್ನು ಕಾದಿ ಗೆಲ್ಲುವೆನು. ಎಂಬ ತಾತ್ಪರ್ಯವು. (ಅಹಿತರಂ = ಹಿತರಲ್ಲದವರುಗಳನ್ನು ಆಂಗೆಲೆ 'ನಾನು ಗೆಲ್ಲುತ್ತಿರುವಲ್ಲಿ' ಸತಿಸಪ್ತಮಿ, ತಟ್ಟಿಱಿವೆಂ = ಸೊಕ್ಕು ಕಾದುವೆನು.) ಅನ್ನೆಗಂ ಬಿಲ್ವಿಡಿಯೆಂ = ಆ ವರೆಗೆ ಬಿಲ್ಲುಹಿಡಿಯೆನು ॥ ೭ ॥

ಎಂದು — ಇಂತೆಂದು ವಚನಂ ॥ ಎಂದು ಕರ್ಣಂ ಪ್ರತಿಜ್ಞೆಗೆಯ್ವುದುಂ = ಹೀಗೆಂದು ಕರ್ಣನು ಶಪಥಮಾಡಿಕೊಂಡಾಗ, ಸಿಂಧುತನೂಜಂ ಇಂತೆಂದಂ = ಭೀಷ್ಮನು ಇಂತು ನುಡಿದನು ॥

ಕಲಿತನದುರ್ಕು — ಇಂತೆಂದು ಚಂ ಮಾ. ವೃತ್ತಂ॥ಕರ್ಣ= ಎಲಾ ಕರ್ಣನೇ, ಕಲಿತನದ ಉರ್ಕು = ಕಲಿತನದ ಔದ್ಧತ್ಯವೂ, (ಉರ್ಕು—ಔದ್ಧತ್ಯೇ) ಜವ್ವನದ ಸೊರ್ಕು = ಜವ್ವನದ ಮದವು, ಸೊರ್ಕು—ಸೊಕ್ಕು, ನಿಜೇಶನ ನಚ್ಚು = ತನ್ನಾಳ್ದನ ವಿಶ್ವಾಸವು (ನಿಜ+ಈಶ—ನಿಜೇಶ= ತನ್ನ ಒಡೆಯನ) ಮಿಕ್ಕ= ಮೀರಿದ, ತೋಳ್ವಲದ ಪೊಡರ್ಪು = ಬಾಹುಬಲದ ಸಾಮರ್ಥ್ಯವು, ನಿನಗೆಉಳ್ಳನಿತು ಎನಗೆ ಉಂಟೇ ಏಂ ? = ನಿನಗಿರುವಷ್ಟು ನನಗುಂಟೇನು ? ಭಾರತಂ ಕಲಹಂ = ಕಾಳಗವಾದರೋ, ಭಾರತ ಯುದ್ಧವು (ಭರತವಂಶೀಯರಿಗೆ ಸಂಬಂಧಿಸಿದ ಕಲಹವು ಭಾರತಕಲಹವು ) ಇದಿರ್ಚು ವಂ= ಇದಿರೊಡ್ಡುವವನಾದರೋ ಹರಿಗಂ = ವಿಕ್ರಮಾರ್ಜುನನು. ('ಪಂಪಕವಿಯ

ವ ॥ ಎಂದು ಮತ್ತಮಿಂತೆಂದಂ—

ಮುದುಪರ ಬಿಲ್ಬಲ್ಮೆಯುಮಿಱಿ- ।
ಪದಟುಂ ಬಗೆವಾಗಳಣ್ಣನೆಂದಂತುಟೆ ತ- ॥
ಪ್ಪದು ಕರಮೆ ತುಚ್ಛಮಕ್ಕುಂ ।
ಕದನದೊಳಿನ್ನೆನ್ನ ನುಡಿದ ನುಡಿಯಂ ಕೇಳಿಂ ॥ ೯ ॥

---

ಸ್ವಾಮಿಯಾದ ಅರಿಕೇಸರಿಯ ಇನ್ನೊಂದು ಹೆಸರು. ಅಭೇದಪ್ರತಿಪತ್ತಿಯಿಂದ ಇಲ್ಲಿ 'ಅರ್ಜುನನಿಗೆ ಅನ್ವಯಿಸುವುದು) ಅಪ್ಪೊಡೆ = (ಹೀಗೆ) ಆಗಿರುವಾಗ, ಅಣ್ಣ = ಗೆಳೆಯಾ! ನೀನೇಕೆ ಮೊಕ್ಕಳಂ ಪಳಂಚಲೆದಪೆ ? = ನೀನೇಕೆ ವ್ಯರ್ಥವಾಗಿ ವಿರೋಧಿಸಿರುವೆ ? 'ಮೊಕ್ಕಳಂ' ಅಧಿಕಾರ್ಥದ ಅವ್ಯಯವು ಪಳಂಚಲೆ (ಧಾತು) ಪಳಂಚು + ಅಲೆ = ಪಳಂಚಲೆ [ಸಂಯುಕ್ತ, ಧಾತು ಪಳಂಚು (ಧಾತು) ತಾಗು, ಸಂಘಟ್ಟನೇ ಅಲೆ (ಧಾತು) ಪರೀಭಾವೇ (ತಿರಸ್ಕರಿಸಿ) "ವಿರೋಧದಿಂದ ತಿರಸ್ಕರಿಸಿ ಮಾತಾಡು" ಮಹಾಜಿ ರಂಗದೊಳ್ = ಮಹಾರಣರಂಗದಲ್ಲಿ (ಮಹಾ + ಆಜಿರಂಗ = ಮಹಾಜಿರಂಗ) ಸ ದೀ ಸಂಧಿ. ಸೂಳ್ಪಡೆಯುಲಪ್ಪುದು ಕಾಣ =(ಸೂಟಿಂ ಪಡೆಯಲ್–ಸೂಳ್ಪಡೆಯಲ್ = ಅವಸರವನ್ನು ಪಡೆಯಲು) ಅವಸರವನ್ನು ಪಡೆಯಲಾಗುವುದು (ಮಹಾಯುದ್ಧದಲ್ಲಿ ನನ್ನ ಬಿಲ್ಬಲ್ಮೆಯನ್ನು ಪರೀಕ್ಷಿಸುವ ಸಂದರ್ಭವನ್ನು ಪಡೆದಾಗ, ನೀನು ನೋಡಬಹುದು ) ('ಕಾಣ'–ಕಾಣ್ ಧಾತುಗೆ ಮಧ್ಯಮಪುರುಷದ ಏಕವಚನದಲ್ಲಿ, ವಿಧ್ಯರ್ಥದಲ್ಲಿ ಅಕಾರಾ ಗಮವು ) ಕಾಣಯ್ಯ. ಅಪ್ಪುದು < ಆಗುವುದು ಹೊಸಗನ್ನಡದಲ್ಲಿ 'ಅಹುದು' 'ಹೌದು' ॥ ೮ ॥

ಎಂದು — ಇಂತೆಂದು ವಚನಂ ॥ ಎಂದು ಮತ್ತಂ ಇಂತೆಂದಂ = ಎಂದು ಮತ್ತು ಹೀಗೆಂದನು (ಮುಂದಿನ ಮಾತು ಸಭಿಕರನ್ನು ನೋಡಿ ಹೇಳಿದುದು.)

ಮುದುಪರ — ಇಂತೆಂದು ಕಂದಂ ॥ ಮುದುಪರ ಬಿಲ್ಬಲ್ಮೆಯುಂ ಇಱಿವ ಅದಟುಂ = ಮುದುಕರ ಬಿಲ್ಲ ಜಾಣ್ಮೆಯೂ, ಕಾದುವ ಸಾಮರ್ಥ್ಯವೂ, ಬಗೆವಾಗಳ್ = ಯೋಚಿಸಿದಾಗ, ಅಣ್ಣನೆಂದಂತುಟೆ ತಪ್ಪದು = ಈ ಗೆಳೆಯನಾದ ಕರ್ಣನು (ಅಣ್ಣಂ) ಹೇಳಿದಂತೆಯೇ ಸರಿ. ಕದನದೊಳ್ = ಕಾಳೆಗದಲ್ಲಿ; ಕರಮೆ ತುಚ್ಛಂ ಅಕ್ಕುಂ = ಬಹು ಕ್ಷುದ್ರವೆನಿಸುವುದು, ಅತೀ ಹೀನವೆನಿಸುವುದು. ಇನ್ನೆನ್ನ ನುಡಿದ ನುಡಿಯಂ ಕೇಳಿಂ = ನಾನು (ಪ್ರತಿಜ್ಞೆಮಾಡಿ) ಹೇಳುವ ಮಾತನ್ನು ಕೇಳಿರಿ. 'ಎನ್ನ ನುಡಿದ ನುಡಿಯಂ ಕೇಳಿಂ' ಎಂಬುದು 'ಎನ್ನ ನುಡಿಯಂ ಕೇಳಿಂ' ಎಂಬುದರ ವಿಸ್ತೃತರೂಪವು ॥ ೯ ॥

ಪಿಡಿಯೆಂ ಚಕ್ರಮನೆಂಬ ಚಕ್ರಿಯನಿಳಾಚಕ್ರಂ ಭಯಂಗೊಳ್ವಿನಂ ।
ಪಿಡಿಯಿಪ್ಪೆಂ ಕರಚಕ್ರಮಂ ನರರಥಂ ತೂಳ್ದಾ ಕುರುಕ್ಷೇತ್ರದಿಂ ॥
ಪಡುವೆಣ್ಗಾವುದು ಪೋಗೆ ಪೋಗಡಿಸುವೆಂ ನಿಚ್ಚಂ ಧರಾಧೀಶರಂ ।
ಪಡಲಿಟ್ಟಂತಿರೆ ಮಾಟಿಪ್ಪೆನೋವದೆ ಪಯಿಂಛಾಸಿರ್ವರಂ
ಯುದ್ದದೊಳ್ ॥ ೧೦ ॥

---

ಪಿಡಿಯೆಂ— ಇಂತೆಂದು ಮ ವಿ ವೃತ್ತಂ ॥ ಚಕ್ರಮಂ ಪಿಡಿಯೆಂ ಎಂಬ ಚಕ್ರಿಯಂ = (ಕಾಳೆಗದಲ್ಲಿ) ಚಕ್ರವನ್ನು ಹಿಡಿಯೆನೆಂದು (ಪ್ರತಿಜ್ಞೆಗೆಯ್ದ) ಶ್ರೀಕೃಷ್ಣನನ್ನು (ಚಕ್ರವನ್ನು ಕೆಯ್ಯಲ್ಲಿ ಉಳ್ಳವನು 'ಚಕ್ರಿ'ಯು, 'ಚಕ್ರಧಾರಿ' ಕೃಷ್ಣನು.) ಇಳಾ ಚಕ್ರಂ = ಭೂಮಂಡಲವು; ಭಯಂಗೊಳ್ವಿನಂ = ಭಯುಗೊಳ್ಳುವ ತೆರದಲ್ಲಿ, ಕರ ಚಕ್ರಮಂ = ಕೈಯ್ಯ ಚಕ್ರಾಯುಧವನ್ನು, ಪಿಡಿಯಿಪ್ಪೆಂ = ಹಿಡಿವಂತೆ ಮಾಡುವೆನು. (ಪಿಡಿಯಿಸುವೆಂ-ಪಿಡಿಯಿಪ್ಪೆಂ-ಹಿಡಿಸುವೆನು) ನರರಥಂ – ಅರ್ಜುನನ ತೇರು, ತೂಳ್ದು = ಹಿಂಜರಿದು [ತೂಳ್ (ಧಾತು) ಅವಸರ್ಪಣೇ, ಹಿಂದಿರುಗಿ ಓಡು] ಆ ಕುರುಕ್ಷೇತ್ರ ದಿಂ ಪಡು ಎಣ್ಗಾವುದು ಪೋಗೆ = ಆ ಕುರುಕ್ಷೇತ್ರದಿಂದ ಪಡುಗಡೆಗೆ ಎಣ್ಬುಗಾವುದ ದೂರ ಸರಿಯುವಂತೆ, ಇಸುವೆಂ ಪೋಗಡ' = (ಸುಲಭವಾಗಿ) ಬಾಣ ಹೊಡೆಯುವೆನು (ಪೋ' ಗಡ'–ಹೋಗಂತೆ'' ಉಚಿತ ಸಂಭಾಷೆಯಲ್ಲಿ ಉಪಚಾರೋಕ್ತಿ. 'ಹೋಗಂತೆ, ಹೋಗುನೋಡುವ' ಇಂತೆಂದು ಹೊಸಗನ್ನಡದಲ್ಲಿ ಸಂಭಾಷಣಾವಸರದಲ್ಲಿ ಪ್ರಯೋಗ ವುಂಟು ಇಸು (ಧಾತು)–ಬಾಣಪ್ರಯೋಗೇ; ಬಾಣವನ್ನು ಹೊಡೆ; ಹಾಗೆ ಇಸ್ಸುವುದು ತನಗೊಂದು ಶ್ರಮದ ಕಾರ್ಯವಲ್ಲವೆಂಬ ಭಾವವನ್ನು ವ್ಯಕ್ತಪಡಿಸುವುದಕ್ಕಾಗಿ 'ಪೋ! ಗಡ!' ಎಂಬ ಪ್ರಯೋಗವು. ಆದುದರಿಂದ, 'ಇಸುವೆಂ ಪೋಗಡ' ಎಂಬುದಕ್ಕೆ ಸುಲಭವಾಗಿ ಬಾಣಹೊಡೆವೆನು ಎಂದರ್ಥವನ್ನು ಕೊಟ್ಟಿದು 'ಪೋಗಡಿಸುವೆಂ'– ಹೋಗುವಂತೆ ಮಾಡುಪೆನು ಎಂದರ್ಥ ಹೇಳಬೇಕಾದರೆ, 'ಪೋಗಡಿಸು' = (ಹೋಗುವಂತೆ ಮಾಡು) ಎಂಬುದನ್ನು ಧಾತುವೆಂದು ಭಾವಿಸಬೇಕಾಗುವುದು, ನಿಚ್ಚಂ = ನಿತ್ಯವೂ [ನಿಚ್ಚಂ–ನಿತ್ಯಂ (ಸಂ), ದಿನಂಪ್ರತಿಯೂ] ಯುದ್ಧದೊಳ್ = ಕಾಳೆಗದಲ್ಲಿ, ಧರಾ ಧೀಶರಂ = ಅರಸರನ್ನು ಪಯಿಂಛಾಸಿರ್ವರಂ = ಹತ್ತುಸಾವಿರ ಮಂದಿಯನ್ನು (ಪತ್ತು+ ಸಾಸಿರ+ವರ್–ಪಯಿನ್ಛಾಸಿರ್ವರಂ ದ್ವಿಗುಸಮಾಸವು, ಪತ್ತು ಎಂಬುದಕ್ಕೆ ಸಮಾಸ ದಲ್ಲಿ ಪಯಿನ್ ಆದೇಶವು. "ಪತ್ತಕ್ಕೆ ಪಯಿನ್ನೆಂದಾ । ದತ್ತಾದೇಶಂ ಸಮಂತು ಸಾಸಿರ ಮಿದಿರೊಳ್ । ಪತ್ತುಗೆಗೊಳೆ ನೂಱಿರ್ಕಂ । ಮತ್ತಂ ಸಾಸಿರಕ ಮಂತ್ಯಲೋಪಂ ವಿರಳಂ ॥ ಶ. ಮ ದ ಸೂತ್ರ ॥ ೧೯೧ ॥ ಮತ್ತು ಸಮಾಸದಲ್ಲಿ ಉತ್ತರಪದದ ಆದಿಯ ಸಕಾರಕ್ಕೆ 'ಛ'ಕಾರಾದೇಶವು. "ಅರೆ ಎಡೆಯೊಳ್ ಸಂಖ್ಯೆಯಾಗೆ ನಿಯತಂ ಛತ್ವಂ"

ವ ॥ ಎಂದು ಮಹಾಪ್ರತಿಜ್ಞಾರೂಢನಾದ ಗಾಂಗೇಯನಳವನಳವಲ್ಲದೆ ಪೊಗಟ್ದುವರಂಬೀಡಿಂಗೆ ಬಿಜಯಂಗೆಯ್ಯಿಮೆಂದು ಕಳಿಪಿ, ಮಱುದಿವಸಂ ದುರ್ಯೋಧನಂ ಯುದ್ಧಸನ್ನದ್ಧನಾಗಿ ಪ್ರಯಾಣಭೇರಿಯಂ ಪೊಯ್ಸಿದಂ ॥

---

ಶ ಮು. ದ. ಸೂತ್ರ ॥ ೬೦ ॥ ಕೇಶಿರಾಜನು, ಶ ಮು. ದ ಸೂತ್ರ ॥ ೧೯೧ ॥ಕ್ಕೆ ಲಕ್ಷ್ಯವಾಗಿ, "ಪಡಲಿಟ್ಟಂತಿರೆ ಮಾಟ್ಪೆನೋವದೆ ಪಯಿಂಛಾಸಿರ್ವರಂ ಯುದ್ಧದೊಳ್ ॥ ಎಂಬೀ ವೃತ್ತದ ಭಾಗವನ್ನೇ ಉದಾಹರಿಸಿದ್ದಾನೆ.) ಓವದೆ= ದಯೆತೋರದೆ, ನಿರ್ದಾಕ್ಷಿಣ್ಯವಾಗಿ, ದಾಕ್ಷಿಣ್ಯದಿಂದ ಕಾಪಾಡದೆ. [ಓ (ಧಾತು)–ಸ್ನೇಹೇ, ಓ ಧಾತುವಿನ ಪ್ರತಿಷೇಧರೂಪವು ಓವದೆ, ಅಥವಾ 'ಓವು (ಧಾ) ಪಾಲನೇ', 'ಓವು' ಧಾತುವಿನ ಪ್ರತಿಷೇಧರೂಪವೆಂದೂ ಇಟ್ಟುಕೊಳ್ಳಬಹುದು. 'ದಾಕ್ಷಿಣ್ಯದಿಂದ ಕಾಪಾಡದೆ' ಎಂದು ಸಮುಚ್ಚಯಾರ್ಥವು ] ಪಡಲಿಟ್ಟಂತಿರೆ ಮಾಟ್ಪೆನು= ಕೆಡೆವಂತೆ ಮಾಡುವೆನು (ಕೊಂದು ಕೆಡಹುವೆನೆಂದು ಭಾವವು.) [ಪಡಲಿಡು (ಧಾತು) ಕಡೆವಂತೆ ಬೀಳಿಸು ಮಾಟ್ಪೆಂ<ಮಾಡುವೆಂ ] ಯಮಕವಿದೆ ॥ ೧೦ ॥

ಎಂದು — ಇಂತೆಂದು ವಚನಂ ॥ ಎಂದು ಮಹಾಪ್ರತಿಜ್ಞಾರೂಢನಾದ ಗಾಂಗೇಯನ= ಹೀಗೆಂದು ಮಹಾಪ್ರತಿಜ್ಞೆಯನ್ನು ಕೈಕೊಂಡ ಭೀಷ್ಮನ, ಅಳವಂ= ಪರಾಕ್ರಮವನ್ನು, ಅಳವಲ್ಲದೆ ಪೊಗಟ್ದು= ಮಿತಿಯಿಲ್ಲದ ಹೊಗಳಿ [ಅಳವು–ಪರಾಕ್ರಮ, ಸಾಮರ್ಥ್ಯ, ಬಲ್ಮೆ, ಪ್ರಮಾಣ, ಮಿತಿ ಎಂದನೇಕಾರ್ಥಗಳು, ಪೊಗಟ್ (ಧಾತು)– ಪ್ರಶಂಸಾಯಾಂ, ಹೊಗಳು] ಅವರಂ ಬೀಡಿಂಗೆ ಬಿಜಯಂಗೆಯ್ಯಿಮೆಂದು ಕಳಿಪಿ = ಅವರನ್ನು ಬೀಡಿಗೆ ದಯಮಾಡಿಸಿರೆಂದು ಕಳುಹಿಸಿ, ಮಱುದಿವಸಂ = ಮರುದಿನದಲ್ಲಿ, ದುರ್ಯೋಧನಂ = ದುರ್ಯೋಧನನು; ಯುದ್ಧಸನ್ನದ್ಧನಾಗಿ = ಕಾಳೆಗಕ್ಕೆ ಸಕಲಸನ್ನಾಹಗಳನ್ನು ಸಜ್ಜುಗೊಳಿಸಿದವನಾಗಿ, ಪ್ರಯಾಣ ಭೇರಿಯುಂ ಪೊಯಿಸಿದಂ = ಪ್ರಯಾಣ ಭೇರಿಯನ್ನು ಹೊಡೆಯಿಸಿದನು, 'ಪ್ರಯಾಣ ಭೇರಿ' ಯುದ್ಧಕ್ಕೆ ಹೊರಡುವ ಕಾಲದಲ್ಲಿ ಧ್ವನಿಗೆಯ್ವ ಭೇರಿ, ಪೊಯಿಸು = ತಾಡನೇ (ಹೊಡೆ) ಪೊಯ್ + ಇಸು = ಪೊಯಿಸು, ಹೊಡೆಯಿಸು ॥

ಎಂಬಲ್ಲಿಗೆ ಕರ್ಣರಸಾಯನದಲ್ಲಿ
ಪಂಚಮಗ್ರಾಸವು ಮುಗಿದುದು



## ಷಷ್ಠ ಗ್ರಾಸಂ

ವ ॥ [ಕಳಶಜನಿಂ ಬಟಿಕ್ಕೆ ಕರ್ಣಂಗೆಂದು ನುಡಿದ ವೀರಪಟ್ಟಮಂ
ಅಶ್ವತ್ಥಾಮಂಗೆಂತು ಕಟ್ಟುವೆನೆಂದು ಕೌರವೇಶ್ವರನೆಂದೊಡೆ]
ಅಶ್ವತ್ಥಾಮನಿಂತೆಂದಂ–
ನಿಜದೊಳ ಭೂಪರೆಂಬರವಿವೇಕಿಗಳಪ್ಪರದರ್ಕೆ ನೀಂ ಫಣಿ–।
ಧ್ವಜ ಕಡುಕೆಯ್ದು ಕರ್ಣನನೆ ನಚ್ಚುವೆಯಪ್ಪೊಡೆ ಯುದ್ಧದೊಳ್
ವೃಷ– ॥

---

ಅವತರಣಿಕೆ — ಭಾರತ ಯುದ್ಧದಲ್ಲಿ ಭೀಷ್ಮನು ಶರಶಯನಗತನೂ ದ್ರೋಣನು ಮೃತನೂ ಆದಾಗ ಮುಂದೆ ಕೌರವಬಲದ ನಾಯಕನಾಗಿ ಕರ್ಣನಿಗೆ ವೀರಪಟ್ಟವನ್ನು ಕಟ್ಟಬೇಕೆಂದು ದುರ್ಯೋಧನನು ನಿಶ್ಚಯಿಸಿದಾಗ, ಅಶ್ವತ್ಥಾಮನು ಏವಗೊಂಡು ಕರ್ಣನನ್ನು ಹೀನೈಸಿ ನುಡಿದನು. ಕರ್ಣಾಶ್ವತ್ಥಾಮರೊಳಗೆ ಪರಸ್ಪರ ಕಲಹವಾಗುವ ಸಂಭವವನ್ನು ಕೃಪನು ಎಡೆವೊಕ್ಕು ಮಾಣಿಸಿದನು ಬಳಿಕ ಕರ್ಣನಿಗೆ ವೀರಪಟ್ಟವಾಗುವುದು ಈ ಕಥಾಸಂದರ್ಭವು ಈ ಗ್ರಾಸದಲ್ಲಿ ವರ್ಣಿತವಾಗಿದೆ. ಕುಮಾರವ್ಯಾಸನ ಭಾರತದಲ್ಲಿ ಈ ಕಥಾಭಾಗಕ್ಕೆ ಸಂವಾದಿಯಾದ ಅಂಶವು ಸ್ವಲ್ಪ ವ್ಯತ್ಯಸ್ತವಾಗಿ ಕರ್ಣಪರ್ವದ ಮೊದಲನೆಯ ಪದ್ಯಗಳು ೨೨—೩೦ರಲ್ಲಿರುವುದನ್ನು ಹೋಲಿಸಿ ನೋಡಬಹುದು—

ಕಳಶಜನಿಂ — ಇಂತೆಂದು ವಚನಂ ॥ ಕಳಶಜನಿಂ ಬಟಿಕ್ಕೆ=ದ್ರೋಣನ ಅನಂತರದಲ್ಲಿ, (ಕಳಶ–ಮಡಕೆಯಲ್ಲಿ; ಜ–ಹುಟ್ಟಿದವನು) "ಬಟಿಕಂ" ಬಟಿಯಂ, ಬಟಿಕೆ, ಬಟಿಕ್ಕೆ ಇವು ಸಮಾನಾರ್ಥಕಗಳು) ಕರ್ಣಂಗೆಂದು ನುಡಿದ=ಕರ್ಣನಿಗೆ ಎಂದು ಹೇಳಿ (ನಿಶ್ಚಯಿಸಿದ), ವೀರಪಟ್ಟಮಂ=ವೀರಪಟ್ಟವನ್ನು, ಅಶ್ವತ್ಥಾಮಂಗೆ ಎಂತು ಕಟ್ಟುವನೆಂದು=ಅಶ್ವತ್ಥಾಮನಿಗೆ ನಾನು ಹೇಗೆ ಕಟ್ಟಲಿ ಎಂದು, ಕೌರವೇಶ್ವರಂ ಎಂದೊಡೆ=ಕೌರವರ ಒಡೆಯನಾದ ದುರ್ಯೋಧನನು ಹೇಳಿದಾಗ, ಅಶ್ವತ್ಥಾಮಂ ಇಂತೆಂದಂ=ದ್ರೋಣನಮಗನಾದ ಅಶ್ವತ್ಥಾಮನು ಹೀಗೆಂದನು, (ದ್ರೋಣನಮಗನಿಗೆ ಅಶ್ವತ್ಥಾಮನೆಂದು ಹೆಸರು ಬರುವುದಕ್ಕೆ ಕಾರಣವನ್ನು ಪಂಪಭಾರತದಲ್ಲಿ ಹೀಗೆ ಹೇಳಿದೆ—ದಿವಿಜಾಶ್ವತ್ಥಾಮದೊಳೀ । ಭುವನಂಗಳ್ನಡುಗೆ ಶಿಶುಸರಂಗೆಯ್ದೊಡೆ ನ । ಕ್ಕವಯವದೆ ಕುಂಭಸಂಭವ। ನಿವನಶ್ವತ್ಥಾಮನೆಂದು ಪೆಸರಿಡೆ ನೆಗಟ್ದಂ ॥ ೨–೪೪ ॥ ಅಶ್ವತ್ಥಮ=ಕುದುರೆಯ ಶಕ್ತಿ ಅಶ್ವತ್ಥಾಮನು ತ್ರಿಣೇತ್ರಾಂಶಸಂಭೂತನೆಂದು ಪ್ರಸಿದ್ಧಿ )

ನಿಜದೊಳೆ — ಇಂತೆಂದು ಚಂ ಮಾ. ವೃತ್ತಂ ॥ ನಿಜದೊಳೆ=ನಿಜವಾಗಿಯೂ, ಭೂಪರ್ ಎಂಬರ್=ಅರಸುಗಳೆಂಬವರು, ಅವಿವೇಕಿಗಳ್ ಅಪ್ಪರ್=ವಿವೇಕವಿಲ್ಲ

ಧ್ವಜನುಮನಿಕ್ಕಿ ಗೆಲ್ದರಿಗನೊಳ್ ತಲೆವಟ್ಟೆದಿರಾಗಿ ನಿಂದು ಸೂ- ।
ತಜನಿಱಿವಂಗಡಂ ವಗೆಯನೇಂಗಳ ಪಟ್ಟಮೆ ವಾಱಿ ತಿಂಬುದೇ ॥ ೧ ॥

---

ದವರಾಗಿರುವರು, (ವಿವೇಕವೆಂದು ವಿಮರ್ಶಿಸಿತಿಳಿವ ಬುದ್ಧಿಶಕ್ತಿಯು ಅದುಳ್ಳವನು ವಿವೇಕಿಯು, ಅದಿಲ್ಲದವನು ಅವಿವೇಕಿಯು) ಅಪ್ಪರ್=ಆಗುವರು, (ಹೊಸಗನ್ನಡದಲ್ಲಿ ಅಹರ್ ಎಂದೂ ಉಂಟು) ಅದರ್ಕೆ (ಎಂಬ ಪಾರದಂತೆ) ಆದ್ದರಿಂದಲಾಗಿ, ಆದುದರಿಂದ, ಅದಕ್ಕಾಗಿ ಎಂದರ್ಥವು, ಅದು+ಅಕ್ಕೆ= ಅದು (ಹಾಗೆ) ಆಗಲಿ, (ಅಗು+ಗೆ, ಅಥವಾ ಆಗು+ಕೆ=ವಿಧ್ಯರ್ಥದಲ್ಲಿ ಪ್ರಥಮಪುರುಷದ ಏಕವಚನಕ್ಕೆ 'ಗೆ' 'ಕೆ'ಗಳೆಂಬ ಪ್ರತ್ಯಯಗಳು ಬರುವುವು "ಸೊಗಯಿಪುವು ಗೆಕೆಗಳ ನ್ಯೋಕ್ತಿಗೆ ವಿಧ್ಯರ್ಥಕ್ಕೆ - ಶ. ಮ ದ ಸೂ. ॥ ೨೨೯ ॥ ಕೆಕಾರಕ್ಕೆ ದ್ವಿತ್ವವು. ಕೆಕಾರ ಪರವಾದಾಗ "ಆಗು" ಎಂಬುದಕ್ಕೆ "ಅಕ್" ಆದೇಶವು "ಪರದೊಳ್ ವಿಧಿಯ ಕೆಕಾರಂ । ಬರೆ ಕುಂಬರೆ, ಪೋಗೆನಿಪ್ಪ ಧಾತುವಿನಂತ್ಯಾ । ಕ್ಷರಲೋಪಂ ಚರಮಂ ವಿ।ಸ್ವರಮಾದ್ಯಂ ಹ್ರಸ್ವಮಕ್ಕು ಮಾಗೆಂಬುದಱೊಳ್ ॥ ಶ ಮ. ದ ಸೂತ್ರ-೨೪೩-) ಫಣಿಧ್ವಜ=ದುರ್ಯೋಧನಾ, (ಫಣಾ ಎಂದರೆ ಹೆಡೆ'ಯುಳ್ಳದು 'ಫಣಿ'=ಸರ್ಪವು. ಧ್ವಜ ಎಂದರೆ, ಪತಾಕೆಯಲ್ಲಿ ಸರ್ಪದ ಚಿಹ್ನೆಯುಳ್ಳವನು ದುರ್ಯೋಧನನು, 'ಪನ್ನಗ ಕೇತು' ಎಂದು ಹಿಂದೆ ಹೇಳಿರುವುದು ನೀಂ ಕರ್ಣನನೆ=ನೀನು ಕರ್ಣನನ್ನೇ ಕಡುಕೆಯ್ದು ನಚ್ಚುವೆಯಪ್ಪೊಡೆ= ತೀವ್ರವಾಗಿ ನಂಬುವಯೆಂದಾದರೆ, [ಕಡುಕೆಯ್ (ಧಾತು)-ತೀವ್ರತ್ವೇ] ಯುದ್ಧದೊಳ್ ವೃಷಧ್ವಜನುಮಂ ಇಕ್ಕಿಗೆಲ್ದ ಅರಿಗನೊಳ್= ಯುದ್ಧದಲ್ಲಿ ಶಂಕರನನ್ನೂ ಕೂಡ ಕೆಡಹಿ ಬೀಳಿಸಿ ಗೆದ್ದಂತಹ ವಿಕ್ರಮಾರ್ಜುನನಲ್ಲಿ [ವೃಷಧ್ವಜ=ಈಶ್ವರನು, ಶಂಕರನು ವೃಷ=ಎತ್ತು ಧ್ವಜವಾಗಿರುವವನು ಇಕ್ಕು (ಧಾತು) ತ್ಯಾಗಹನನಯೋಃ (ಹೊಡೆ) 'ಅರಿಗಂ'-ಅರಿಕೇಸರಿರಾಜನು 'ಅರಿಕೇಸರಿ' ಯೆಂಬುದರ ಸಂಕ್ಷಿಪ್ತಾಂಶರೂಪವು 'ಅರಿಗಂ'-ಹರಿಗಂ-ಇವು ಸಮಾನಾರ್ಥಕಗಳು ಅಭೇದಪ್ರತಿಪತ್ತಿಯಿಂದ ಇಲ್ಲಿ ಅರ್ಜುನನು "ಅರಿಗಂ ಯುದ್ಧದೊಳ್ ವೃಷಧ್ವಜನುಮಂ ಇಕ್ಕಿಗೆಲ್ದು" ಎಂಬುದು ಇಂದ್ರಕೀಲವಿಜಯವನ್ನು ಸೂಚಿಸುವುದು. (ಅರ್ಜುನನು ಪಾಶುಪತಾಸ್ತ್ರವನ್ನು ಪಡೆಯುವುದಕ್ಕೆ ಈಶ್ವರನನ್ನು ಕುರಿತು ತಪಸ್ಸುಮಾಡಿದನು. ಈಶ್ವರನು ಮೂಕದಾನವನನ್ನು ಸಂಹರಿಸುವ ನೆವದಿಂದ ಶಬರನಾಗಿ ಬಂದು ಅರ್ಜುನನೊಡನೆ ಯುದ್ಧಮಾಡಬೇಕಾಗಿಬಂತು. ಅಲ್ಲಿ ಅರ್ಜುನನು ಈಶ್ವರನನ್ನು ಹೊಡೆದು ಕೆಡವಿ ಗಂಟಲಂ ಮೆಟ್ಟಿದಾಗ ಆತನಿಗೆ ಶಬರನಾಗಿದ್ದ ಶಿವನು ಪ್ರತ್ಯಕ್ಷನಾಗಿ ಪಾಶುಪತಾಸ್ತ್ರವನ್ನು ಕೊಟ್ಟನೆಂದು ಪೂರ್ವಕಥೆಯು ಈ ವೃತ್ತಾಂತವು ಪಂ ಭಾ ಆಶ್ವಾಸ ೭।೭೮ರಿಂದ ೮।೨೬ರ ವರೆಗಿನ ಭಾಗದಲ್ಲಿ ವರ್ಣಿತವಾಗಿದೆ.

ವ ॥ ಎಂಬುದುಮಂಗರಾಜಂ ಗುರುತನೂಜನನಿಂತೆಂದಂ —

ಎನಿತಳವುಳ್ಳೊಡಂ ದ್ವಿಜನ ಗಂಡಗುಣಕ್ಕಗಿವನ್ನರಾರೊ ನೆ- ।
ಟ್ಟನೆ ವಿಷವೊಳ್ಳೆಗುಳ್ಳೊಡಮದೊಳ್ಳೆಯೆ ಕಾಳಿಯ ನಾಗನಾಗದ- ॥
ಣ್ಮಿನ ಪಡೆಮಾತದೊಂದೆ ನೆವಮಾಗಿರೆ ಕೆಯ್ದುವನಿಕ್ಕಿ ಸತ್ತ ನಾ- ।
ವಿನ ಪಡಿಚಂದಮಾಗಿಯುಮಿದೇಂ ನಿಮಗಟ್ಟಿಯೊ
ಗಂಡವಾತುಗಳ್ ॥ ೨ ॥

---

ಯುದ್ಧದಲ್ಲಿ ಈಶ್ವರನನ್ನೇ ಗೆದ ಅರ್ಜುನನೊಡನೆ ಸಾಮಾನ್ಯನಾದ ಕರ್ಣನು ಕಾದುವನೆಂಬುದು ಹಾಸ್ಯಾಸ್ಪದವೆಂದು ಅಶ್ವತ್ಥಾಮನ ಅಭಿಪ್ರಾಯವು ) ತಲೆವಟ್ಟು ಇದಿರಾಗಿ ನಿಂದು = ತಲೆಗೆ ತಲೆಗೆತಾಗಿ ಇದಿರೊಡ್ಡಿನಿಂದು 'ತಲೆವಟ್ಟು ಇದಿರಾಗು' — ಖಾಡಾಖಾಡಿಯೆಂಬರ್ಥದ ಹಳೆಗನ್ನಡದ ಪಡಿನುಡಿ. ಒಬ್ಬರಿಗೊಬ್ಬರನ್ನು ಹಗೆಗೊಳಿಸುವುದಕ್ಕೆ 'ತಲೆತಲೆತಾಗಿಸುವುದು' ಎಂದು ವಾಡಿಕೆಯಾಗಿ ಹೇಳುವುದುಂಟು ಅಥವಾ ಕೋಡುಳ್ಳ ಮೃಗಗಳು ಒಂದಕ್ಕೊಂದು ಹಾಯುವಾಗ ತಲೆಯನ್ನು ಮುಂದುಮಾಡಿಕೊಂಡು ಇದಿರಾಗುವುದುಂಟಷ್ಟೆ! ಅದರಿಂದ 'ವಿರೋಧಗೊಂಡು ಪ್ರತಿಭಟಿಸು' ಎಂಬ ಅರ್ಥವಾಗಿ 'ತಲೆವಟ್ಟಿದಿರಾಗು' ಎಂಬ ಪ್ರಯೋಗವು ಬಳಕೆಗೆ ಬಂದಿರಲೂ ಬಹುದು.) ಸೂತಜಂ ಇಱಿವಂಗಡಂ = ಸೂತಪುತ್ರನಾದ ಕರ್ಣನು ಇರಿಯುವನಂತೆ, (ಸೂತಜಂ ಎಂದುದರಿಂದ ಕರ್ಣನನ್ನು ಹೀನಕುಲದವನೆಂದು ಅರ್ಥವತ್ತಾಗಿ ಹೀನೈಸಿದಹಾಗಾಯ್ತು. 'ಗಡಂ' ಆಶ್ಚರ್ಯಭಾವವನ್ನು ಸೂಚಿಸುವ ಅವ್ಯಯವು) ಪಗೆಯಂ ಪಟ್ಟಮೆ ಪಾಱಿ ತಿಂಬುದೇಂಗಳ ? = ವೈರಿಯನ್ನು ಪಟ್ಟವೇ ಹಾರಿ ತಿನ್ನುವುದೇನೋ ? (ಕರ್ಣನಿಗೆ ವೀರಪಟ್ಟವನ್ನು ಕಟ್ಟಿದಮಾತ್ರಕ್ಕೆ ಅತನು ಅರ್ಜುನನನ್ನು ಗೆಲ್ಲಲಾಪನೇ ? ಪಟ್ಟವು ಹಗೆಯನ್ನು ಹಾರಿತಿನ್ನುತ್ತದೆಯೇನು ಎಂಬ ಭಾವವು ) ಕಾವ್ಯಲಿಂಗಾಲಂಕಾರವು ॥ ೧ ॥

ಎಂಬುದುಂ — ಇಂತೆಂದು ವಚನಂ ॥ ಎಂಬುದುಂ = ಅಶ್ವತ್ಥಾಮನು ಇಂತೆಂದಾಗ; ಅಂಗರಾಜಂ = ಕರ್ಣನು, ಗುರುತನೂಜನಂ = ಅಶ್ವತ್ಥಾಮನೊಡನೆ, ಇಂತೆಂದಂ = ಹೀಗೆಂದನು

ಎನಿತಳವು — ಇಂತೆಂದು ಚಂ. ಮಾ ವೃತ್ತಂ ॥ ಎನಿತು ಅಳವು ಉಳ್ಳೊಡಂ = ಎಷ್ಟು ಸಾಮರ್ಥ್ಯವಿದ್ದರೂ, ದ್ವಿಜನ = ಬ್ರಾಹ್ಮಣನ, (ಜನ್ಮನಾಜಾಯತೇ ಜಂತುಃ ಕರ್ಮಣಾಜಾಯತೇ ದ್ವಿಜಃ । ಎಂಬುದರಿಂದ ಉಪನಯನಸಂಸ್ಕಾರವಾದ ಪ್ರಥಮವರ್ಣದವನು ದ್ವಿಜನು. ಸಾಮಾನ್ಯಾರ್ಥದಲ್ಲಿ ಬ್ರಾಹ್ಮಣನು ವೇದಾಧ್ಯಯನದಿಂದ ವಿಪ್ರನೂ, ಬ್ರಹ್ಮಜ್ಞಾನಸಿದ್ಧಿಯಿಂದ ಬ್ರಾಹ್ಮಣನೂ ಆಗುವನೆಂದು ಶಾಸ್ತ್ರೋಕ್ತಿಯಿದ್ದರೂ

ದ್ವಿಜ, ವಿಪ್ರ, ಬ್ರಾಹ್ಮಣ ಇವುಗಳಿಗೆ ಕವಿಸಮಯಾನುಸಾರ ಐಕ್ಯವು ಹೇಳಲ್ಪಟ್ಟಿರುವುದು. ದ್ವಿಜ ಎಂಬುದಕ್ಕೆ ಪಕ್ಷಿ, ಹಲ್ಲು ಮೊದಲಾದ ಅನೇಕಾರ್ಥಗಳಿವೆ ) ಗಂಡಗುಣಕ್ಕೆ = ಪೌರುಷಕ್ಕೆ, ಅಗಿವನ್ನರ್ ಆರೊ ? = ಹೆದರುವವರು ಯಾರೊ ? [ಅಗಿ (ಧಾತು) ಭಯೇ ] ದ್ವಿಜನು ಎಷ್ಟು ಪೌರುಷವುಳ್ಳವನಾದರೂ ಆತನು ದ್ವಿಜನೇ ಸರಿ; ಕ್ಷತ್ರಿಯನಂತೆ ಆಗಲಾರನು, ಆದುದರಿಂದ ಅವನ ಪೌರುಷಕ್ಕೆ ಹೆಗರುವಂತಹರು ಯಾರೂ ಇಲ್ಲ ಎಂದು ಕರ್ಣನ ಅಭಿಪ್ರಾಯವು. ನೆಟ್ಟನೆ ವಿಷಂ ಒಳ್ಳೆಗೆ ಉಳ್ಳೊಡಂ ಅದು ಒಳ್ಳೆಯೆ = ನೇರಾಗಿ ಒಳ್ಳೆಗೆ ಕೂಡ ವಿಷವು ಇದ್ದರೂ, ಅದು ಒಳ್ಳೆಯೇ (ಒಳ್ಳೆ = ನೀರುಹಾವು; ಅದು ಕಚ್ಚಿತೆಂದರೆ ಅಂದು ರಾತ್ರಿ ಊಟಬಿಟ್ಟರೆ ಪರಿಹಾರವೆಂಬುದು ರೂಢಿ) ಕಾಳಿಯನಾಗಂ ಆಗದು = ಕಾಳಸರ್ಪವಾಗದು. ಕಾಳಿಯನಾಗ = ಮಹಾವಿಷವುಳ್ಳ ಕಾಳಿಯಸರ್ಪವೆಂದು ಪ್ರಸಿದ್ಧವಾದ ಹಾವು (ಶ್ರೀಕೃಷ್ಣನು ಕಾಳಿಯನಾಗನನ್ನು ಮರ್ದಿಸಿದ ಕಥೆಯನ್ನು ನೆನೆದುಕೊಳ್ಳಬಹುದು) ದೃಷ್ಟಾಂತಾಲಂಕಾರವು ಅಣ್ಮಿನ ಪಡೆಮಾತು ಅದೊಂದೆನೆವಂ ಆಗಿರೆ = ಪರಾಕ್ರಮ ಖ್ಯಾತಿಯೊಂದೇ ನೆಪವಾಗಿರಲು, ಕೆಯ್ದುವಂ ಇಕ್ಕಿ = ಆಯುಧವನ್ನು ಬೀಸಾಡಿ [ಇಕ್ಕು (ಧಾತು) ತ್ಯಾಗೇ, ಬಿಸುಡು] ಸತ್ತಸಾವಿನ ಪಡಿಚಂದಮಾಗಿಯುಂ = ಸತ್ತುದಕ್ಕ ಸಮಾನವಾಗಿದ್ದೂ [ಪಡಿಚಂದ (ಸಂ) ಪ್ರತಿಚ್ಛಂದ = ಸಮಾನ ರೀತಿ] ಸತ್ತಸಾವು, ಪಟ್ಟಪಾಡು, ಕೊಟ್ಟಕೋಡು, ಬಿಟ್ಟಬೀಡು" — ಇತ್ಯಾದಿ ಪ್ರಯೋಗಗಳು ಕನ್ನಡದಲ್ಲಿ ಹಲವಿವೆ. 'ಸತ್ತಸಾವು ಎಂದರೆ ಪ್ರಾಣಹೋಗಿ ಸಾಯುವುದೆಂದರಿಯಬೇಕು ಸಾಯದ ಸಾವು ಎಂಬುದುಂಟೇ? ಎಂದರೆ, ಇತರ ಕಾರಣಗಳಿಂದ ಜೀವನ್ಮೃತಾವಸ್ಥೆಯಲ್ಲಿರುವುದು ಸಾಯದ ಸಾವೆಂದು ಹೇಳಬೇಕು ಹೇಡಿಗಳು ಮರಣಕ್ಕೆ ಮುಂಚಿತವಾಗಿ ಹಲವು ಬಾರಿ ಸಾಯುತ್ತಾರೆ ಎಂಬುದು ಲೋಕಪ್ರಸಿದ್ಧವು. ಕುಮಾರವ್ಯಾಸನ ಕನ್ನಡ ಮಹಾಭಾರತದ ಕರ್ಣಪರ್ವದ ಮೊದಲನೆಯ ಸಂಧಿಯಲ್ಲಿ ಧೃತರಾಷ್ಟ್ರನು ಕರ್ಣಾವಸಾನ ಕಥೆಯನ್ನು ಕೇಳಿ ಶೋಕಾತಿರೇಕದಿಂದ "ಬೇಯದೆನ್ನದೆ ಶೋಕವಹ್ನಿಯ । ಬಾಯಲಕಟಾಕರ್ಣ ಕೌರವ । ರಾಯನಳಿವಿನ ಉಳಿವ ಪುತ್ರದ್ರೋಹಿಯಾರಿನ್ನು । ಸಾಯಿಸುವ ಸಾವಂಜಿತೆನಗೆ ಚಿ । ರಾಯುತೊಡರಿಕ್ಕಿದೆನು ಮಾರ್ಕಂ । ಡೇಯ ಮುನಿಗೆಂದರಸ ಧೊಪ್ಪನೆ ಕೆಡೆದ ನವನಿಯಲಿ ॥ ೩ ॥ ಎಂಬ ಪದ್ಯದಲ್ಲಿ ಬಂದ "ಸಾಯಿಸುವ ಸಾವು ಎನಗೆ ಅಂಜಿತು" ಎಂಬ ಪ್ರಯೋಗವನ್ನು ಹೋಲಿಸಿ ವಿಚಾರಿಸಿರಿ. ಗಂಡಮಾತುಗಳ್ = ಪೌರುಷದ ಮಾತುಗಳು (ಗಂಡಿನ ಮಾತುಗಳ್–ಗಂಡುಮಾತುಗಳ್–ಗಂಡಮಾತುಗಳ್, ಸಹಜಮಕಾರಕ್ಕೆ 'ಮಕಾರಾದೇಶವು) ನಿಮಗೆ ಇದೇಂ ಅಟ್ಟಿತ್ತಿಯೊ? = ನಿಮಗಿದೇನು ಪ್ರೀತಿಯೊ ಎಂದು ತಾತ್ಪರ್ಯವು ಕರ್ಣನ "ಅಣ್ಮಿನ ಪಡೆಮಾತದೊಂದೆ ನೆವಮಾಗಿರೆ ಕೆಯ್ದುವನಿಕ್ಕಿ, ಸತ

ವ ॥ ಎಂಬುದುಂ ತ್ರೈಲೋಕ್ಯಧನುರ್ಧರನಪ್ಪೆಮ್ಮಯ್ಯನ ಗಂಡವಾತನೀ ವಿೂಂಗುಲಿಗಂ ಮೆಚ್ಚನಿವನಂ ಮುಂ ಕೊಂದು ಬಱಿಯಂ ಪಾಂಡವರಂ ಕೊಲ್ವೆನೆಂದು ಬಾಳಂ ಕಿಱ್ತು ಕರ್ಣನ ಮೇಲೆ ವಾಯ್ವುದುಂ ಕೃಪನೆ- ಡೆವೊಕ್ಕಿದಾಗದೆಂದು ಬಾರಿಸಿ-

---

ಸಾವಿನ ಪಡಿಚಂದವಾಗಿಯುಂ" ಎಂಬೀ ನುಡಿಯಿಂದ ದ್ರೋಣನು ಯುದ್ಧದಲ್ಲಿ ಸುತ ಶೋಕವಿಯೋಗವಾರ್ತಾಶ್ರವಣದಿಂದ ಕೆಯ್ದುವನ್ನು ಬಿಸುಟು ಅಸುವನ್ನು ತೊರೆದು ದನ್ನು ಮಾರ್ಮಿಕವಾಗಿ ನಿಂದಿಸಿದ್ದಾನೆ ದ್ರೋಣನು ಬಿಲ್ಲನ್ನು ಬಿಸುಟುದರಿಂದ ಹತ ನಾದ ಪೂರ್ವವೃತ್ತಾಂತವು ಪಂಪಭಾರತದಲ್ಲಿ "ಸಾಮಜಮಶ್ವತ್ಥಾಮಂ । ನಾಮದಿ ನೊಂದಱಿದೊಡಲ್ಲಿ ಕಂಡು ಹತೋಶ್ವ । ತ್ಥಾಮಾಎನೆ ನೃಪನಶ್ವ । ತ್ಥಾಮನೆಗೆತ್ತೊಣರ್ದ ನೊವಜನೊರ್ವೆಸರಿಭಮಂ ॥ ಒಗೆದ ಸುತಶೋಕದಿಂದಾ । ವಗೆಯಂ ತೊಳಗುರಿಯೆ ಭೋಂಕನೆರ್ದೆತೆಱೆಯಲ್ ಹಾ । ಮಗನೇ ಎಂದ ಶ್ರುಜಲಾ । ದ್ರ್ಯಗಂಡನಾ 'ಗಂಡಿ ನೊಡನೆ ಬಿಸುಟಂ ಬಿಲ್ಲಂ' ಪಂ. ಭಾ ಆ ೧೨। ಪ॥ ೨೭।೨೮ ॥ ಎಂದಿರುವುದನ್ನು ನೋಡಿಕೊಳ್ಳಬಹುದು ಈ ಮಾತನ್ನು ಕೇಳಿಯೇ ತಂದೆಯ ನಿಂದೆಯನ್ನು ನಂದನನ ಮುಂದೆ ಮಾಡಿದ ಈ ಮದಾಂಧ ಕರ್ಣನನ್ನು ಕೊಂದೇತೀರುವೆನೆಂಬಷ್ಟು ಅಶ್ವತ್ಥಾಮನು ರೋಷಗೊಂಡುದನ್ನು ಮುಂದಿನ ವಚನದಲ್ಲಿ ಕವಿ ಹೇಳುತ್ತಾನೆ ॥ ೨ ॥

ಎಂಬುದುಂ — ಇಂತೆಂದು ವಚನಂ ॥ ಎಂಬುದುಂ = (ಕರ್ಣನು) ಹೀಗೆಂ ದಾಗ, (ಅಶ್ವತ್ಥಾಮನು) ತ್ರೈಲೋಕ್ಯಧನುರ್ಧರನಪ್ಪ = ತ್ರಿಲೋಕಗಳಲ್ಲಿ ಪ್ರಸಿದ್ಧ ಧನು ರ್ಧಾರಿಯಾದ, ಎಮ್ಮ ಅಯ್ಯನ = ನನ್ನ ತಂದೆಯ (ಎಮ್ಮ—ಆತ್ಮಗೌರವಾರ್ಥದಲ್ಲಿ 'ಏಕವಚನಕ್ಕೆ' ಬಹುವಚನವು) (ದ್ರೋಣಾಚಾರ್ಯನ) ಗಂಡವಾತಂ = ಪೌರುಷ ವಚನವನ್ನು (ದ್ರೋಣಾಚಾರ್ಯನ ಪೌರುಷವನ್ನು ಕುರಿತ ಮಾತನ್ನು) ಈ ವಿೂಂಗು ಲಿಗಂ ಮೆಚ್ಚಂ = ಬೆಸ್ತರವನಾದ ಈ ಕರ್ಣನು ಮೆಚ್ಚಲಿಕ್ಕಿಲ್ಲ (ಆದುದರಿಂದ), ಇವನಂ ಮುಂಕೊಂದು ಬಱಿಯಂ ಪಾಂಡವರಂ ಕೊಲ್ವೆನೆಂದು = ಇವನನ್ನು ಮೊದ ಲಾಗಿ ಕೊಂದು ಬಳಿಕ ಪಾಂಡವರನ್ನು ಕೊಲ್ಲುವೆನೆಂದು; ಬಾಳಂ = ಖಡ್ಗವನ್ನು (ಬಾಳ್—ಖಡ್ಗವು ಬಾೞ್ = ಜೀವನವು) ಕಿಱ್ತು = ಹೊರತೆಗೆದು [ಕೀೞ್-(ಧಾತು) ಉತ್ಪಾಟನೇ] ಬಾಳಂಕಿಱ್ತು = ಖಡ್ಗವನ್ನು ಒರೆಯಿಂದ ಹೊರಕ್ಕೆಳೆದು, ಕರ್ಣನ ಮೇಲೆ ವಾಯ್ವುದುಂ = ಕರ್ಣನ ಮೇಲೆ ಹಾಯ್ದಾಗ [ಮೇಲೆಪಾಯ್ = ಮೇಲೆವಾಯ್ (ಮೇಲೆ ಬೀಳು) ಪಕಾರಕ್ಕೆ ವಕಾರಾದೇಶವು "ಸ್ವರಾದ್ವಃ ಪವರ್ಗಸ್ಯ ॥ ಶ. ಶಾ. ಸೂ ॥ ॥ ೯೧ ॥ ] ಕೃಪಂ ಎಡೆವೊಕ್ಕು = ಕೃಪನು ಎಡೆಯಲ್ಲಿ ಹೊಕ್ಕು (ಎಂದರೆ ಅವ

ಅಸದಳಮಾಗಿಯುಮಿಾ ನ- ।
ಮ್ಮ ಸೈನ್ಯಮಿಂತೊರ್ವರೊರ್ವರೊಳ್ ಸೆಣಸಿ ಖಳ- ॥
ವ್ಯಸನದೊಳೆ ಕೆಟ್ಟುದಲ್ಲದೊ- ।
ಡ ಸುಯೋಧನ ನಿನಗೆ ಮಲೆವ ಮಾರ್ಬಲಮೊಳವೇ ॥ ೩ ॥

ವ ॥ ಎಂಬುದುಮಶ್ವತ್ಥಾಮಂ ಕರ್ಣನೊಳಾದ ಮುಳಿಸನವಧಾರಿಸಲಾಱದೆ ಸುಯೋಧನನನಿಂತೆಂದಂ—

ಖಚರಪ್ಲುತಂ॥ ಬೀರವಟ್ಟಮನಾನಿರೆ ನೀನೀ ಸೂತಸುತಂಗೆಡಗೊಂಡು ಕೈ-।
ವಾರದಿಂದೊಸೆದಿತ್ತೊಡಮೇನಾಯ್ತೀ ಖಳನಿಲ್ಲಿಧನಂಜಯ- ॥

---

ರಿಬ್ಬರ ನಡುವೆ ಅಡ್ಡಬಂದು ಎಂಬ ತಾತ್ಪರ್ಯವು) ಇದಾಗದು ಎಂದು = ಈ ಅಂತಃ ಕಲಹ (ಒಳಜಗಳ)ವು ನಿಮ್ಮೊಳಗೆ ಕೂಡದು ಎಂದು, ಬಾರಿಸಿ= ತಡೆದು ನಿಲ್ಲಿಸಿ (ಬಾರಿಸು-ವಾರಿಸು, ತಡಗಟ್ಟು) ॥

ಅಸದಳಮಾಗಿಯುಂ— ಇಂತೆಂದು ಕಂದಂ ॥ ಈ ನಮ್ಮ ಸೈನ್ಯಂ ಅಸದಳಂ ಆಗಿಯುಂ = ನಮ್ಮ ಸೈನ್ಯವು ಅಸಾಧ್ಯವಾಗಿದ್ದೂ, ಇಂತು = ಈ ಪ್ರಕಾರವಾಗಿ, ಒರ್ವರ್ ಒರ್ವರೊಳ್ ಸೆಣಸಿ = ಒಬ್ಬರೊಬ್ಬರಲ್ಲಿ ಜಗಳವಾಡಿ (ಅನ್ಯೋನ್ಯ ಅಂತಃ ಕಲಹದಿಂದ) ಖಳವ್ಯಸನದೊಳೆ ಕೆಟ್ಟುದು = ನೀಚಪ್ರವೃತ್ತಿಯಲ್ಲೇ ಕೆಟ್ಟುಹೋಯ್ತು, ಅಲ್ಲದೊಡೆ = ಅಲ್ಲದಿದ್ದರೆ, ಸುಯೋಧನನೇ = ಎಲೈ ದುರ್ಯೋಧನನೇ, ನಿನಗೆ ಮಲೆವ = ನಿನಗೆ ಇದಿರೊಡ್ಡುವ [ಮಲೆ (ಧಾತು) ಔದ್ಧತ್ಯೇ] ಮಾರ್ಬಲಂ= ಶತ್ರುಸೈನ್ಯಗಳು (ಮಾಱು+ಬಲಂ-ಮಾರ್ಬಲಂ-ಮಾರ್ಬಲಂ = ಮಱುಬಲವು 'ಮಾರ್ಬಲಂ' ಇಲ್ಲ ಬಹುವಚನಾರ್ಥದಲ್ಲ ಜಾತ್ಯೇಕವಚನವು ) ಒಳವೇ = ಇರುತ್ತವೆಯೇ ? ಉಳ್- ಸತ್ತಾಯಾಂ ಎಂಬ ಧಾತುವಿನ ಪ್ರಥಮಪುರುಷ ನಪುಂಸಕ ವರ್ತಮಾನಕಾಲದ ಬಹು ವಚನರೂಪವು 'ಒಳವು' ಪ್ರಶ್ನಾರ್ಥದಲ್ಲಿ—ಒಳವೆ ಇರುವುವೇ? "ಉಳ್ ಧಾತು ಪೂರ್ವ ದೊಳ್ ನೆಗಱ್ಗುಂ ಹ್ರ ' ಸ್ವೋತ್ವಂ ಪುರುಷತ್ರಯದೊಳ್ ದತ್ವನಿಷೇಧಂ ಬಹುತ್ವದುವು ಗವುಮಕ್ಕುಂ (ಉಳ್ = ಒಳ್)ನಪುಂಸಕಲಿಂಗದ ಬಹುವಚನದ 'ಉವು'ವಿಂಗೆ 'ಅವು' ಎಂದಕ್ಕುಂ ॥ ಶ ಮ ದ ಸೂತ್ರ ॥ ೨೪೫ ॥ ॥ ೩ ॥

ಎಂಬುದುಂ— ಇಂತೆಂದು ವಚನಂ ॥ ಎಂಬುದುಂ = ಕೃಪನು ಹೀಗೆ ನುಡಿಯಲು, ಅಶ್ವತ್ಥಾಮಂ ಕರ್ಣನೊಳಾದ ಮುಳಿಸಂ ಅವಧಾರಿಸಲಾಱದೆ = ಅಶ್ವತ್ಥಾಮನು ಕರ್ಣನ ಮೇಲೆ ತನಗಾದ ಕೋಪವನ್ನು ಸಮಾಧಾನಕ್ಕೆ ತರಲಾರದೆ, ಸುಯೋಧನನಂ ಇಂತೆಂದಂ = ದುರ್ಯೋಧನನೊಡನೆ ಹೀಗೆಂದನು ॥

ಬೀರವಟ್ಟಮಂ— ಇಂತೆಂದು ಖಚರಪ್ಲುತವೃತ್ತಂ ॥ ಆನಿರೆ = ನಾನಿರುವಾಗ, (ವೀರಪಟ್ಟಕೆ, ಯೋಗ್ಯನೂ ಬಾಧ್ಯಸ್ಥನೂ ಆಗಿ ನಾನಿರುತ್ತಿರುವಲ್ಲಿ ಎಂದು ತಾತ್ಪರ್ಯವು)

ಕ್ರೂರಬಾಣಗಣಾವಳಿಯಿಂದಟ್ಟಾಡಿದೊಡಲ್ಲದೆ ವೈರಿ ಸಂ- ।
ಹಾರಕಾರಣಚಾಪಮನಾನೀ ಸಂಗರದೊಳ್ ಪಿಡಿಯೆಂ ಗಡಾ ॥ ೪ ॥

ವ ॥ ಎಂಬುದುಂ ಮುಳಿಸುವೆರಸಿದ ಮುಗುಳ್ನಗೆಯಿಂ ಕರ್ಣನಿಂತೆಂದಂ—

---

ಬೀರಪಟ್ಟಮಂ= ವೀರಪಟ್ಟವನ್ನು; (ಬೀರಪಟ್ಟಮಂ- ಎಂಬುದರ ಮೊದಲವಕಾರಕ್ಕೆ ಬಕಾರಾದೇಶವು. ಮೂರನೆಯವಕಾರವು 'ಪ'ಕಾರಕ್ಕಾದೇಶವು )ನೀನೀಸೂತಸುತಂಗೆ= ನೀನು ಈ ಸೂತಪುತ್ರನಾದ ಕರ್ಣನಿಗೆ , ಕೈವಾರದಿಂದೆ ಒಸೆದಿತ್ತೊಡಂ ಏನಾಯ್ತು= ಹೊಗಳಿಕೆಯಿಂದ ಪ್ರಸನ್ನನಾಗಿ ಕೊಟ್ಟರೂ ಏನಾಯ್ತು , (ಕೆಯ್ವಾರಂ= ಕೆಯ್ಯೆತ್ತಿ ಹೊಗಳುವುದು; ಉಗ್ಗಡಿಸುವುದು) ಈ ಖಳಂ= ಈ ನೀಚನು, ಇಲ್ಲಿ= ಈ ಯುದ್ಧರಂಗದಲ್ಲಿ, ಧನಂಜಯುಕ್ರೂರಬಾಣಗಣಾವಳಿಯಿಂದೆ= ವಿಕ್ರಮಾರ್ಜುನನ ಕ್ರೂರವಾದ ಬಾಣಪರಂಪರೆಗಳಿಂದ; (ಧನಂಜಯಂ= ಅರ್ಜುನನು; 'ಧನಂಜಯತೀತಿ - ಧನಂಜಯಃ' ಪಾಂಡವರ ರಾಜಸೂಯಯಾಗಕ್ಕೆ ಬೇಕಾದ ಬಹುಧನವನ್ನು ಜಯಿಸಿತಂದವನಾದುದರಿಂದ ಅರ್ಜುನನು 'ಧನಂಜಯ'ನೆನಿಸಿದನು ಇದರ ವರ್ಣನೆಯು ಪಂ. ಭಾ. ಷಷ್ಠಾಶ್ವಾಸ ||ಪ|| ೨೯-೩೦-೩೩ ರಲ್ಲಿ ಬಂದಿದೆ )"ಧನಂಜಯಃ ಸರ್ಪಭೇದೇ ಕಕುಭೇ ದೇಹಮಾರುತೇ । ಪಾರ್ಥೇಽಗ್ನೌ" ಎಂದು ಕೋಷವು) ಅರ್ಜುನನಿಗೆ ಧನಂಜಯನೆಂದು ಹೆಸರು ಬಂದುದಕ್ಕೆ ಕಾರಣವು ಸಂಸ್ಕೃತಮಹಾಭಾರತದಲ್ಲಿ ಹೀಗೆ ಹೇಳಿದೆ-"ಸರ್ವಾನ್ಜನಪದಾನ್ಜಿತ್ವಾವಿತ್ತಮಾದಾಯಕೇವಲಂ। ಮಧ್ಯೇಧನಸ್ಯತಿಷ್ಠಾಮಿ ತೇನಾಹುರ್ಮಾಂ ಧನಂಜಯಂ" ಅಟ್ಟಾಡಿದೊಡಲ್ಲದೆ= ನಾಶವಾದ ಹೊರತು ] ಅಟ್ಟಾಡು (ಧಾತು' ನಿರವಶೇಷೇ (ಸಂಪೂರ್ಣನಾಶವಾಗು) ವೈರಿಸಂಹಾರಕಾರಣಚಾಪಮಂ= ವೈರಿಗಳ ಸಂಹಾರಕ್ಕೆ ಸಾಧನವಾದ ನನ್ನ ಧನುಸ್ಸನ್ನು, ಆಂ- ನಾನು; ಈ ಸಂಗರದೊಳ್= ಈ ಕಾಳೆಗದಲ್ಲಿ, ಪಿಡಿಯೆಂಗಡಾ= ನಿಶ್ಚಯವಾಗಿ ಹಿಡಿಯೆನು, 'ಪಿಡಿಯೆಂಗಡಾ' ಎಂಬುದರಂತಕ್ಕೆ ಸಂಭ್ರಮಾರ್ಥದಲ್ಲಿ ದೀರ್ಘಾದೇಶವು, [ದೀರ್ಘಮನರೆಬರ್ ಖೇದಸಂಭ್ರಮದ ಮೆಯ್ಯೊಳುತ್ಪಾದಿಸುವರ್" ಶಮ. ದ ಸೂತ್ರ ॥ ೧೧೭ ॥ ಅರ್ಜುನನ ಬಾಣಗಳಿಗೆ ತುತ್ತಾಗಿ ಕರ್ಣನು ನಾಶಹೊಂದುವವರೆಗೆ ತಾನೀ ಭಾರತಯುದ್ಧದಲ್ಲಿ ಹೋರಾಡುವುದಿಲ್ಲವೆಂದು ಅಶ್ವತ್ಥಾಮನ ಪ್ರತಿಜ್ಞೆಯು; ಖಚರಪ್ಲುತ ವೃತ್ತಕ್ಕೆ ಲಕ್ಷಣವು= ಒಪ್ಪಿರಲ್ ರಸಸಂತಜಜಂಗಂ ಪುಟ್ಟುವುದಾ ಖಚರಪ್ಲುತಂ ||೪||

ಎಂಬುದುಂ— ಇಂತೆಂದು ವಚನಂ ॥ ಎಂಬುದುಂ= ಅಶ್ವತ್ಥಾಮನು ಹೀಗೆಂದು ಪ್ರತಿಜ್ಞೆಮಾಡಿ ನುಡಿದಾಗ, ಕರ್ಣಂ= ಕರ್ಣನು ಮುಳಿಸುವೆರಸಿದ ಮುಗುಳ್ನಗೆಯಿಂ= ಕೋಪದಿಂದ ಕೂಡಿದ ಮುಗುಳ್ನಗೆಯಿಂದ (ಮುಳಿಸಿಂ+ ಬೆರಸಿದ=

ಭುವನಂಗಳ್ ಪದಿನಾಲ್ಕುಮಂ ನಡುಗಿಸಲ್ ಸಾಮರ್ಥ್ಯಮುಳ್ಳೆನ್ನ ಕೆ-।
ಯ್ದುವಿನೊಳ್ ತೀರದುದಾವ ಕೆಯ್ದುವಿನೊಳಂ ತೀರ್ದಪ್ಪುದೇ ನಿನ್ನ ಕೆ-॥
ಯ್ದುವದೆಂತುಂ ಬಿಸುಟಿರ್ದ ಲೆಕ್ಕಮೆ ವಲಂ ನಿಷ್ಕಾರಣಂ ಕೆಯ್ದುವಿ- ।
ಕ್ಕುವ ಕಣ್ಣೀರ್ಗಳನಿಕ್ಕುವೀಯೆರಡುಮಂ ನಿಮ್ಮಯ್ಯನೊಳ್ ಕಲ್ತಿರೇ ॥ ೫ ॥

---

ಮುಳಿಸುವೆರಸಿದ, ಮುಳಿಸುವೆರಸಿದ+ಮುಗುಳ್ನಗೆ=ಕೋಪಸಮ್ಮಿಶ್ರವಾದ ಮಂದ ಹಾಸವು, ಮನಸ್ಸಿನಲ್ಲಿ ಕೋಪ ಮತ್ತು ತುಟಿಯಲ್ಲಿ ಮುಗುಳ್ನಗೆಯೆಂಬ ಈ ರೀತಿ ಯಿಂದ) ಇಂತೆಂದಂ=ಹೀಗೆಂದನು ||

ಭುವನಂಗಳ್ —ಇಂತೆಂದು ಮ ವಿ ವೃತ್ತಂ || ಭುವನಂಗಳ್ಪದಿನಾಲು ಮಂನಡುಗಿಸಲ್=ಹದಿನಾಲ್ಕು ಲೋಕಗಳನ್ನೂ ನಡುಗಿಸಲಿಕ್ಕೆ, ವಿಶೇಷ್ಯ ವಿಶೇಷಣ ಗಳಲ್ಲಿ ಯಾವುದಾದರೊಂದಕ್ಕೆ ವಿಭಕ್ತಿಯನ್ನು ಹತ್ತಿಸಲಾಗುವುದು "ಪದಿನಾಲ್ಕು ಭುವನಂಗಳಂ" ಎಂಬುದನ್ನು 'ಭುವನಂಗಳ್ಪದಿನಾಲ್ಕುಮಂ' ಎಂದು ಹೇಳಲಾಗಿದೆ. (ಭುವನಂಗಳ್ಪದಿನಾಲ್ಕು=ಭೂಲೋಕ, ಭುವರ್ಲೋಕ, ಸುವರ್ಲೋಕ, ಮಹ ರ್ಲೋಕ, ಜನರ್ಲೋಕ, ತಪೋಲೋಕ, ಸತ್ಯಲೋಕ-ಹೀಗೆ ಏಳು ಮೇಗಣಲೋಕ ಗಳು, ಅತಳ, ವಿತಳ, ಸುತಳ, ತಳಾತಳ, ರಸಾತಳ, ಮಹಾತಳ, ಪಾತಾಳ—ಹೀಗೆ ಏಳು ಕೆಳಗಣ ಲೋಕಗಳೂ ಕೂಡಿ ಹದಿನಾಲ್ಕು ಲೋಕಗಳು ಇವುಗಳನ್ನೇ ಸ್ವರ್ಗ ಮರ್ತ್ಯ ಪಾತಾಳಗಳೆಂಬ ಮೂರು ಲೋಕಗಳೆಂದು ವ್ಯವಹರಿಸುವುದೂ ಉಂಟು ಉದಾ—'ಧುರದೊಳ್ಮೂಱುಂಲೋಕಂ। ನೆರದಿರೆಯುಂಕುಡುವಪೊ ಟ್ರಿಱಿಕ್ಕೊಳ್ ಮೇರುವೆಮುಂ ॥ ದಿರೆಯುಂ ಬೀರದ ಬಿಯುದಂ। ತರಕ್ಕೆ ಕಿಱಿದೆಂದು ಚಿಂತಿಪಂ ಪ್ರಿಯಗಳ್ಗಂ || ವೇ+ಭಾ || ೧—೪೪) ಸಾಮರ್ಥ್ಯಮುಳ್ಳೆನ್ನ=ಸಾಮ ರ್ಥ್ಯವುಳ್ಳ ಎನ್ನ, ಕೆಯ್ದುವಿನೊಳ್ ತೀರದದು=ನನ್ನ ದಿವ್ಯಾಯುಧದಿಂದ ಸಾಧ್ಯ ವಾಗದಿದ್ದುದು, ಆವಕೆಯ್ದುವಿನೊಳಂ ತೀರ್ದಪ್ಪುದೇ=ಯಾವ ಆಯುಧಗಳಿಂದಲೂ ಸಾಧ್ಯವಾದೀತೇ? [ತೀರ್ದಪ್ಪುದೇ ತೀರ್ದಪುದೇ' ಎಂಬುದರ ಪಕಾರಕ್ಕೆ ವಿಕಲ್ಪ ದಿಂದದ್ವಿತ್ವವು. ತೀರ್ (ಧಾತು) ತೀರ್ಚು (ನಿಷ್ಪತ್ತೌ) ಕಾರ್ಯವನ್ನು ನೆರವೇರಿಸು, ನಿರ್ವಹಿಸು] ನಿನ್ನ ಕೆಯ್ದುವನೆಂತುಂ ಬಿಸುಟಿರ್ದಲೆಕ್ಕಮೆವಲಂ=ನಿನ್ನ ಧನುಸ್ಸನ್ನು ಹೇಗೂ ಬಿಸಾಡಿದ್ದಲೆಕ್ಕವೇನಿಶ್ಚಯವು, ನಿಷ್ಕಾರಣಂ=ಕಾರಣವಿಲ್ಲದೆ, ಕೆಯ್ದು ವಿಕ್ಕುವ=ಆಯುಧವನ್ನು ಈಡಾಡುವ, (ಕೆಯ್ದುವ+ಇಕ್ಕುವ=ಕೆಯ್ದುವಿಕ್ಕುವ ಕೆಯ್ದುವ—ದ್ವಿತೀಯಾರ್ಥದಲ್ಲಿ ಷಷ್ಠೀವಿಭಕ್ತಿಪಲ್ಲಟವು ಅಥವಾ ಕೆಯ್ದು+ ಇಕ್ಕುವ ಎಂದು ವಿಂಗಡಿಸಿ 'ಕೆಯ್ದುವಿಕ್ಕುವ' ಎಂಬಲ್ಲಿ ಕನ್ನಡ ವಕಾರಾಗಮ ಸಂ ಧಿಯನ್ನು ಹೇಳುವುದು ಅಷ್ಟು ಉಚಿತವಾಗಿ ತೋರದು. 'ಕೆಯ್ದನಿಕ್ಕುವ' ಎಂಬ

ವ ॥ ಎಂಬುದುಮಶ್ವತ್ಥಾಮಂ ಕರ್ಣನ ನುಡಿಗೆ ಸಿಗ್ಗಾಗಿ—

ಮುನಿಸಂ ಮುಂದಿಟ್ಟು ಬಿಲ್ಲಂ ಬಿಸುಡಲೆ ಬಗೆದೆಂ ಮುನ್ನಮಿನ್ನುಕ್ಕಿನಿಂನಿ- ।
ನ್ನನೆ ಪೇಸಂ ನಚ್ಚಿ ನಿನ್ನಾಳ್ದನೆ ನುಡಿಯಿಸೆ ನೀನಾಡಿದಯ್ ಮಾತನಾಡ- ॥
ಲ್ಕೆನಗೇ ಸೂಟಿಲ್ಲು ಸೇನಾಧಿಪಪದವಿಯೊಳಿಂ ನೀನೆ ನಿಲ್ ನಾಳೆ ದುರ್ಯೋ- ।
ಧನನಂ ಸಕ್ಕಿಟ್ಟು ಮಾಱಾಂತದಟರೊಳಳವಂ ತೋಱುವಂ ನೀನು-
ಮಾನುಂ ॥ ೬ ॥

---

ಮಾರ್ಪಡಿಸಿದರೂ ಛಂದೋಭಂಗವಾಗದು ) ನಿಷ್ಕಾರಣಂ ಕಣ್ಣೀರ್ಗಳನಿಕ್ಕುವ= ಕಾರಣವಿಲ್ಲದೆ ಕಣ್ಣೀರುಗಳನ್ನು ಸುರಿಸುವ, ಕಣ್+ನೀರ್=ಕಣ್ಣೀರ್=ಬಾಷ್ಪ ಜಲ, ಣೋನೋಣ ॥ ಶ ಶಾ ಸೂ ॥ ೯೫ ॥ ಸಮಾಸದಲ್ಲಿ ಪೂರ್ವಪದಾಂತ್ಯದ ಣಕಾರಕ್ಕೆ ಪರವಾದ ನಕಾರಕ್ಕೆ "ಣ"ಕಾರಾದೇಶವಾಗುವುದು "ಕಣ್ಣೀರ್ಗಳಂ" ಎಂದು ಬಹುವಚನವು ಇಲ್ಲಿ ಛಂದಸ್ಸಿಗಾಗಿಯೇ ಬಂದಿದೆ 'ಕಣ್ಣೀರನಿಕ್ಕುವ ಎಂದು ಏಕವಚನವನ್ನೇ ಪ್ರಯೋಗಿಸುವುದು ರೂಢಿ, ಇಕ್ಕು (ಧಾತು) ಬಿಡು ಈ ಯೆರಡುಮಂ= ಈ ಹೇಳಿದ ಎರಡು ಕಾರ್ಯಗಳನ್ನೂ (ನಿಷ್ಕಾರಣವಾಗಿ ಕೆಯ್ಯುದ್ದವ ನಿಕ್ಕುವುದನ್ನೂ, ನಿಷ್ಕಾರಣವಾಗಿ ಕಣ್ಣೀರಿಕ್ಕುವುದನ್ನೂ, [ಇದು+ಎರಡು=ಈ ಯೆರಡು ಕನ್ನಡ ಯಕಾರಾಗಮ ಸಂಧಿಯು. ಕನ್ನಡ ಗಮಕಸಮಾಸವು. 'ಇದು' ಎಂಬುದಕ್ಕೆ 'ಈ' ಆದೇಶವು 'ಅದು ಇದುವುದು ಗಾಯಿಾಯೂ । ವೊದವುಗುಮಾ ದೇಶವಾಗಿ ಗಮಕದೊಳ್'—ಶ ಮ ದ. ಸೂ ॥ ೧೪೫ ॥ ] ನಿಮ್ಮಯ್ಯನೊಳ್ ಕಲ್ತಿರೇ=ನಿಮ್ಮ ತಂದೆಯಲ್ಲಿ ಕಲಿತಿರೇನು? (ಕಲ್ (ಧಾತು) ಅಭ್ಯಾಸೇ, ಕಲಿಯು, ಅಭ್ಯಾಸಿಸು. (ಭಾವನಾಮವು ಕಲ್ಪಿ) ಕೆಯ್ಯುವಿಕ್ಕುವ ಕಣ್ಣೀರ್ಗಳನಿಕ್ಕುವ ಎಂಬಲ್ಲಿ ಅರ್ಥಶ್ಲೇಷವೆಂಬ ಅಲಂಕಾರವು, ವೃತ್ತ ಲಕ್ಷಣ=ಸಭರಂನಂಮಯಲಂಗಮುಂಬಗೆ ಗೊಳಲ್ ಮತ್ತೇಭವಿಕ್ರೀಡಿತಂ ॥ ೫ ॥

ಎಂಬುದುಂ—ಇಂತೆಂದು ವಚನಂ ॥ ಎಂಬುದುಂ= (ಕರ್ಣನು) ಇಂತು ನುಡಿಯಲು, ಅಶ್ವತ್ಥಾಮಂ = ಅಶ್ವತ್ಥಾಮನು, ಕರ್ಣನ ನುಡಿಗೆ ಸಿಗ್ಗಾಗಿ = ಕರ್ಣನ ಮಾತಿಗೆ ನಾಚಿಕೊಂಡು, (ಸಿಗ್ಗಾಗು= ನಾಚಿಕೊಳ್ಳು.)

ಮುನಿಸಂ—ಇಂತೆಂದು ಮ. ವಿ ವೃತ್ತಂ ॥ ಮುನಿಸಂ ಮುಂದಿಟ್ಟು= ಕೋಪವನ್ನು ಮುಂದುಮಾಡಿ, ಬಿಲ್ಲಂ ಬಿಸುಡಲೆ ಮುನ್ನಂ ಬಗೆದೆಂ = ಬಿಲ್ಲನ್ನು ಬಿಸಾಡು ವುದಕ್ಕೆ ಮೊದಲೇ ಯೋಚಿಸಿದೆನು, ನಿನ್ನನೆ ಪೇಸಂ ನಚ್ಚಿ ನಿನ್ನ ಆಳ್ದನೆ ನುಡಿಯಿಸೆ = ನಿನ್ನನ್ನೇ ಹೆಚ್ಚುನಂಬಿ ನಿನ್ನ ಸ್ವಾಮಿಯಾದ ದುರ್ಯೋಧನನು ಮಾತಾಡಿಸಿದುದರಿಂದ (ದುರ್ಯೋಧನನು ನಿನ್ನನ್ನೇ ಅತಿಯಾಗಿ ನಂಬಿ ಮೇಲಕ್ಕೆ ಏರಿಸಿಟ್ಟಿರುವುದರಿಂದ, ಆತನ

ಸಾರಂಗಳ್ ನಿನ್ನ ಶರಾ– ।
ಸಾರಂಗಳಸಾರಮುಱಿದ ಕೆಯ್ದುಗಳೆಂತುಂ ॥
ಸಾರಾಸಾರತೆಯಂ ನಾ– ।
ಮಾರಯ್ವಮಿದಿರ್ಚಿದರಿನೃಪಧ್ವಜಿನಿಗಳೊಳ್ ॥ ೭ ॥

---

ಆ ಸಲಿಗೆಯೇ ನಿನ್ನಿಂದ ಇಂತಹ ಮಾತುಗಳನ್ನು ಆಡಿಸುತ್ತಿರುವುದೆಂದು ತಾತ್ಪರ್ಯವು.) ಇನ್ನು ಉರ್ಕಿನಿಂ ನೀನಾಡಿದಯ್ = ಇನ್ನು ಗರ್ವೋದ್ರೇಕದಿಂದ ಹೀಗೆ ನೀನು ಮಾತನಾಡಿದೆ; ಮಾತನಾಡಲ್ಕೆ ಎನಗೆ ಈ ಸೂಟಿಲ್ತು = ಮಾತಾಡಲಿಕ್ಕೆ (ನಿನ್ನೊಡನೆ ವಾದಿಸುವುದಕ್ಕೆ) ನನಗಿದು ಅವಸರವಲ್ಲವು. (ಸೂಟಿ–ಅವಸರವು, ಸಂದರ್ಭವು) ಅಲ್ತು–ಅಲ್ಲದು [·ಪ್ರತಿಷೇಧದೊಳಲ್ಲದುವೆಂಬ ಪದಮುನಲ್ತೆನಲಕ್ಕುಂ' ಶ. ಮು. ದ. ಸೂತ್ರ ॥ ೪೭ ॥ ವೃತ್ತಿ = ಅಲ್ಲದು ಎಂಬುದನಲ್ತೆಂದು ವಿಕಲ್ಪದಿನೆನಲಕ್ಕುಂ ಅದರ್ಕೆ ಲಿಂಗ ವಚನವ್ಯವಸ್ಥೆಯಿಲ್ಲ.] ಸೇನಾಧಿಪಪದವಿಯೊಳ್ = ಸೇನಾನಾಯಕನ ಪಟ್ಟದಲ್ಲಿ, ಇಂ ನೀನೆ ನಿಲ್ = ಇನ್ನು ನೀನೇ ನಿಲ್ಲು; (ನೀನೇ ಇನ್ನು ಸೇನಾನಾಯಕನಾಗಿ ವೀರಪಟ್ಟವನ್ನು ಕಟ್ಟಿಸಿಕೊಳ್ಳು. ನನ್ನ ಅಡ್ಡಿಯೇಕೆ ?) ನಾಳೆ = ನಾಳೆ ಯುದ್ಧರಂಗದಲ್ಲಿ; ದುರ್ಯೋಧನನಂ ಸಕ್ಕಿಟ್ಟು = ದುರ್ಯೋಧನನನ್ನು ಸಾಕ್ಷಿಯಾಗಿಟ್ಟು (ದುರ್ಯೋಧನನ ಸಮ್ಮುಖದಲ್ಲಿ, ಆತನು ನೋಡ ನೋಡುತ್ತಿರುವಾಗಲೇ [ಸಕ್ಕಿ (ಸಂ) ಸಾಕ್ಷಿ, ಸಕ್ಕಿ+ಇಟ್ಟು ಸಕ್ಕಿಟ್ಟು] ಮಾಱಾಂತ = ಇದಿರೊಡ್ಡಿದ [ಮಾಱಾನ್ (ಧಾತು) ಪ್ರತಿಭಟಿಸು, ಇದಿರಿಸುವುದು) ಅದಟರೊಳ್–ಪರಾಕ್ರಮಿಗಳಲ್ಲಿ, (ನೀನುಂ ಆನುಂ = ನಾವು, ನೀನೂ ನಾನೂ, ನೀನುಂ+ಆನುಂ = ನಾಂ) ಅಳವಂ = ತಂತಮ್ಮ ಸಾಮರ್ಥ್ಯವನ್ನು, ತೋಱುವಂ = ತೋರಿಸುವ. [ತೋಱು (ಧಾತು) ದರ್ಶನೇ, ತೋಱು+ಅಂ = ತೋಱುವಂ, ತೋರಿಸುವಾ, ತೋರಿಸೋಣ ಶ. ಮು. ದ. ಸೂ. ॥ ೨೨೯ ॥ ॥ ೬ ॥

ಸಾರಂಗಳ್ — ಇಂತೆಂದು ಕಂದಂ ॥ ನಿನ್ನ ಶರಾಸಾರಂಗಳ್ ಸಾರಂಗಳ್ = ನಿನ್ನ ಬಾಣಗಳ ಸುರಿಸುವಿಕೆಯೇ ಸತ್ವವುಳ್ಳವುಗಳು; ಶರಾಸಾರಂ = ಬಾಣದ ಮಳೆ, ಉಱಿದ ಕೆಯ್ದುಗಳ್ ಎಂತುಂ ಅಸಾರಂ = ಉಳಿದವರ ಕೆಯ್ದುಗಳು ಹೇಗೂ ಸತ್ವಹೀನವಾದುವುಗಳು ಎಂದು ನೀನು ಭಾವಿಸಿಕೊಂಡುದರಿಂದ ಮಾತ್ರವೇ ಏನಾಯ್ತು ಎಂದೀ ಬಾಯ್ವಾತಿನೊಳೇಂ ಮಾದಪುದು ! ಎಂದು ಭಾವವು. ಸಾರಾಸಾರತೆಯಂ = (ಸತ್ವವುಳ್ಳುದನ್ನೂ, ಸತ್ವಹೀನವಾದುದನ್ನೂ ಸಾರತೆಯನ್ನೂ, ಅಸಾರತೆಯನ್ನೂ) ಇದಿರ್ಚಿದ = ಇದಿರೊಡ್ಡಿದ ; ಅರಿಧ್ವಜಿನಿಗಳೊಳ್ = ಶತ್ರುಸೈನ್ಯಗಳಲ್ಲಿ [ಧ್ವಜಿನಿ–ಸೇನೆ (ಧ್ವಜವುಳ್ಳುದಾವುದದು) ನಾಂ ಆರಯ್ವಂ = ನಾವು (ನೀನೂ ನಾನೂ) ವಿಚಾರಿಸುವಾ

ವ ॥ ಎಂಬುದುಂ ದುರ್ಯೋಧನಂ ಕರ್ಣನುಮನಶ್ವತ್ಥಾಮನುಮಂ ನಿಮ್ಮೊಳಗೆ ನೀಂ ಮುಳಿಯಲ್ವೇಡ ನಿಮ್ಮ ಪುರುಷಕಾರಮನೆ ಬಗೆದು ನೆಗಳ್ವಿದಾನುಮೆನ್ನತ್ತಿಕೊಂಡ ಕಜ್ಜಮಂ ನೆಗಳ್ದಲ್ಲದಿರೆನೆಂದಾಯೆಡೆಯಿನೆೞ್ದು ನಾಯಕರಂ ಬೀಡಿಂಗೆ ಪೋಗಲ್ವೇೞ್ದರಮನೆಯಂ ಪೊಕ್ಕು ಮಜ್ಜನಭೋಜನತಾಂಬೂಲಾನುಲೇಪನಂಗಳಿಂ ಸಂಗರಪರಿಶ್ರಮಮನಾಱಿಸಿ ಮಂತ್ರಶಾಲೆಗೆ ವಂದು ಶಲ್ಯಶಕುನಿಶಾರದ್ವತಕೃತವರ್ಮದುಶ್ಶಾಸನಾದಿಗಳಂ ಬರಿಸಿ ಯಥೋಚಿತಪ್ರತಿಪತ್ತಿಗಳಿಂದಿರಿಸಿ—

[ಆರಯ್ + ಅಂ = (ಯುಗವದುಕ್ತಿಯಲ್ಲಿ ವಿಧ್ಯರ್ಥದಲ್ಲಿ ಅಂ) ಆರಯ್ (ಧಾತು) ಅನ್ವೇಷಣೇ = ವಿಚಾರಿಸುವಾ ॥ ಯಮಕವೆಂಬ ಶಬ್ದಾಲಂಕಾರವು ॥ ೭ ॥

ಎಂಬುದುಂ — ಇಂತೆಂದು ವಚನಂ ॥ ಎಂಬುದುಂ = ಅಶ್ವತ್ಥಾಮನಿಂತೆಂದಾಗ, ದುರ್ಯೋಧನಂ = ಕೌರವೇಶ್ವರನು, ಕರ್ಣನುಮಂ ಅಶ್ವತ್ಥಾಮನುಮಂ = ಕರ್ಣನನ್ನೂ ಅಶ್ವತ್ಥಾಮನನ್ನೂ ಕುರಿತು, ನಿಮ್ಮೊಳಗೆ ನೀಂ ಮುಳಿಯಲ್ವೇಡ = ನಿಮ್ಮೊಳಗೆ ಅನ್ಯೋನ್ಯವಾಗಿ ನೀವು ಸಿಟ್ಟುಮಾಡಿಕೊಳ್ಳುವುದು ಬೇಡ, ನಿಮ್ಮ ಪುರುಷಕಾರಮನೆ ಬಗೆದು ನೆಗಳ್ವಿದು - ನಿಮ್ಮ ಪೌರುಷದ ಕರ್ತವ್ಯವನೇ ಯೋಚಿಸಿ ಪ್ರವರ್ತಿಸಿರಿ, ಆನುಂ ಎನೆತ್ತಿಕೊಂಡ ಕಜ್ಜಮಂ ನೆಗಳ್ದಲ್ಲದಿರೆಂ - ನಾನೂ ನನ ಕೈಕೊಂಡಕಾರ್ಯವನ್ನು ನೆರವೇರಿಸದೆ ಬಿಡೆನು ಎಂದು ಆ ಎಡೆಯಿಂ ಎೞ್ದು = ಎಂದು (ದುರ್ಯೋಧನನು) ಆ ಸ್ಥಳದಿಂದ ಎದ್ದು, ನಾಯಕರಂ ಬೀಡಿಂಗೆ ಪೋಗಲ್ವೇೞ್ದು—ಹೆಗ್ಗಡೆಗಳನು ಬೀಡಿಗೆ ಹೋಗ ಹೇಳಿ (ಕಳುಹಿಸಿ) ಅರಮನೆಯಂ ಪೊಕ್ಕು = ಅರಮನೆಯನ್ನು ಹೊಕ್ಕು [ಪುಗು (ಧಾತು) ಪ್ರವೇಶೇ, ಹೊಗು;] ಮಜ್ಜನಭೋಜನತಾಂಬೂಲಾನುಲೇಪನಂಗಳಿಂ - ಸ್ನಾನ, ಊಟ, ಎಲೆಅಡಿಕೆ ಜಗಿಯುವುದು, ಸುಗಂಧ ದ್ರವ್ಯಗಳನು ಮೈಗೆ ಹಚ್ಚಿಕೊಳ್ಳುವುದು ಮುಂತಾದ ಉಪಚಾರಗಳಿಂದ, ಸಂಗರ ಪರಿಶ್ರಮಮಂ ಆಱಿಸಿ = ಯುದ್ಧದ ಆಯಾಸವನ್ನು ಹೋಗಲಾಡಿಸಿ (ಆಱಿಸು = ಆಱುವಂತೆ ಮಾಡು = ದಣುವಾರಿಸು) ಮಂತ್ರಶಾಲೆಗೆ ವಂದು = ವಿಚಾರಚಾವಡಿಗೆ ಬಂದು (ಮಂತ್ರಶಾಲೆ = ಆಲೋಚನಾಸಭೆ ನಡೆಸುವ ಮಂದಿರವು (ಇಲ್ಲಿ ದುರ್ಯೋಧನನು) ಶಲ್ಯ ಶಕುನಿಶಾರದ್ವತ ಕೃತವರ್ಮ ದುಶ್ಶಾಸನಾದಿಗಳಂ ಬರಿಸಿ = ಮಾವನಾದ ಶಲ್ಯನನ್ನೂ, ಶಕುನಿಯನ್ನೂ ಆಚಾರ್ಯನಾದ ಕೃಪನನ್ನೂ, ಯದುವಂಶಜನಾದ ಕೃತವರ್ಮನನ್ನೂ, ಅನುಗದಮ್ಮನಾದ ದುಶ್ಶಾಸನನನ್ನೂ ಬರುವಂತೆ ಮಾಡಿ, ಯಥೋಚಿತಪ್ರತಿಪತ್ತಿಗಳಿಂದೆ ಇರಿಸಿ = ಯಥಾ ಯೋಗ್ಯವಾದ ಸ್ಥಾನಮಾನಗಳಿಂದ ಕುಳ್ಳಿರಿಸಿ (ಉಚಿತಂ ಯಥಾಸ್ಯಾತ್ತಥಾ = ಯಥೋಚಿತಂ = ಹೇಗೆ ಆಗಬೇಕೋ ಹಾಗೆ), ಪ್ರತಿಪತ್ತಿ = ಸ್ಥಾನ—ಮಾನ—ಬಹುಮಾನಾದಿಗಳಿಂದ ತೋರಿಸುವ ಗೌರವವು.

ಅಂತರ್ಭೇದದೊಳಂತು ಛಿದ್ರಿಸಿದರಾ ಗಾಂಗೇಯರಂ ಕೊಂದರಿಂ- ।
ದಿಂತೀಗಳ್ ಪುಸಿದೀ ಘಟೋದ್ಭವನನಾ ಕೌಂತೇಯರಾಯಕ್ಕೆ ಗೆಂ-॥
ಟೆಂತೆಂತಕ್ಕುಮುದಂ ಮದುದ್ಯಮಮೆ ಪೇಳ್ವೆ ವೈರಿಗಳ್ಗೊಲ್ವೆನಾ- ।
ನಂತೊಳ್ಪಂ ತಳೆವಂತು ತೇಜಮೆನಗಿನ್ನೆಂತಕ್ಕುಮಿಂ ಪೇಟಿರೇ ॥ ೮ ॥

---

ಅಂತರ್ಭೇದದೊಳ್ — ಇಂತೆಂದು ಶಾರ್ದೂಲವಿಕ್ರೀಡಿತ ವೃತ್ತಂ ॥ ಅಂತರ್ಭೇದದೊಳ್ = ಭೇದೋಪಾಯದಿಂದ ಒಳಹೊಕು, ಆ ಕೌಂತೇಯರ್ = ಆ ಕುಂತೀಸುತರ., ಆ ಗಾಂಗೇಯರಂ = ಆ ಭೀಷ್ಮರನ್ನು, ಅಂತು ಛಿದ್ರಿಸಿದರ್ = ಹಾಗೆ ಮೋಸದಿಂದ ಘಾಸಿಮಾಡಿದರು, (ಧರ್ಮಜನು ಮಹಾಹವವಾಗಲಾಗದ ಪಾಂಗಿನಲಿ ಭೀಷ್ಮಾದಿಗಳ ಮನವೊಲಿಸಬೇಕೆಂದು ಬಂದು ಭೀಷ್ಮನ ಚರಣಕೆರಗಿ ನನಗೆ ಯುದ್ಧದಲ್ಲಿ ಜಯವಪ್ಪಂತೆ ಕರುಣಿಸಬೇಕೆಂದು ಬೇಡಿಕೊಂಡಾಗ — 'ಮಾನನಿಧಿ ಕೇಳ್ ಕೌರವಂಗಾ । ಧೀನವೆನ್ನಯತನು ವಿಧಾತ್ರಾ । ಧೀನವೆನ್ನಯ ಜೀವವದುಕಾರಣದಿನಾಹವಕೆ । ನೀನು ಚಿಂತಿಸಬೇಡ ನಿನ್ನವ । ಸಾನಕಾಲಕೆ ಮತ್ತೆ ಬರಲು ನಿ । ದಾನವನು ನೆಱೆಬುದ್ಧಿ ಕಲಿಸುವೆ ನೀಗನೀಮರಳು ॥ ಎಂದು ಕಳುಹಿಸಿದನು; ಬಳಿಕ ಯುದ್ಧದಲ್ಲಿ ಭೀಷ್ಮನ ಎದುರಿಗೆ ಶಿಖಂಡಿಯನ್ನು ತೋರಿದುದರಿಂದ ಆತನು ಯುದ್ಧಮಾಡದೆ ಅರ್ಜುನನ ಬಾಣಗಳಿಂದ ಹೊಡೆಯಲ್ಪಟ್ಟು ಸರಳಮಂಚದಲ್ಲಿ ಮಲಗಬೇಕಾಯ್ತು.) ಇಂದೀಗಳ್ — ಇಂದು ಈಗ, ಆ ಘಟೋದ್ಭವನಂ = ಆ ದ್ರೋಣಾಚಾರ್ಯರನ್ನು, ಇಂತು ಪುಸಿದುಕೊಂದರ್ = ಹೀಗೆ ಸುಳ್ಳುನುಡಿದು ಕೊಂದರು (ಘಟೋದ್ಭವನಂ ಪುಸಿದುಕೊಂದುದು — ಧರ್ಮಜನು ಭೀಷ್ಮರನ್ನು ಕಂಡಂತೆಯೇ ದ್ರೋಣರನ್ನೂ ಬಂದು ಕಂಡು ಬೇಡಿಕೊಂಡಾಗ ದ್ರೋಣನು "ಕಾದುವಾಸಮಯದೊಳಗಪ್ರಿಯ । ವಾದ ನುಡಿಗಳ ಕೇಳಿದಾಕ್ಷಣ । ಮೇದಿನಿಯೊಳಾವಿರೆವು ಚಿಂತಿಸಬೇಡ ಹೋಗೆಂದು" ಹೇಳಿ ಕಳುಹಿಸಿದನು ಅದರಂತೆ ದ್ರೋಣನ ಕಾಳೆಗದ ಮಧ್ಯದಲ್ಲಿ ಅಶ್ವತ್ಥಾಮವೆಂಬ ಹೆಸರಿನ ಆನೆಯು ಸತ್ತಾಗ "ಅಶ್ವತ್ಥಾಮೋಹತಃ ಕುಂಜರಃ" ಎಂದು ಧರ್ಮಜನು ನುಡಿದಾಗ ಕೃಷ್ಣನು "ಕುಂಜರಃ" ಎಂಬ ಶಬ್ದವು ದ್ರೋಣನಿಗೆ ಕೇಳಿಸದಂತೆ ಪಾಂಚಜನ್ಯವನ್ನು ದಿದುದರಿಂದ ದ್ರೋಣನು "ಅಶ್ವತ್ಥಾಮೋಹತಃ" ಎಂದರೆ ಅಶ್ವತ್ಥಾಮನು ಕೊಲ್ಲಲ್ಪಟ್ಟನು ಎಂದಷ್ಟನೇ ಕೇಳಿ, ಧರ್ಮಜನ ಮಾತನ್ನು ನಿಜವೆಂದು ನಂಬಿ ಅಪ್ರಿಯವಾದುದನ್ನು ಕೇಳಿದನಾದುದರಿಂದ ಆಯುಧವನ್ನು ಬಿಸುಟು ಯೋಗಶಕ್ತಿಯಿಂದ ತನ್ನ ಪ್ರಾಣವನ್ನು ತೊರೆದನು ಧರ್ಮಜನು ದ್ರೋಣನಂ ಪುಸಿದುಕೊಂದನೆಂದು ದುರ್ಯೋಧನನ ಸಿದ್ಧಾಂತವು-ರನ್ನನು ಗದಾಯುದ್ಧದಲ್ಲಿ — 'ತನಗೆ ಹತೋಶ್ವತ್ಥಾಮೋ । ಯೆನಲಕ್ಕುಮೆ ಯಮಪುರಕ್ಕೆ ಗುರುಪೋಪೆಡೆಯೊಳ್ । ಘನಕುಂಜರ ಎಂದೆಂಗುಮೆ । ಜನರಂಜನೆಗಱಿಯಲಾದುದಿಲ್ಲಱಿಮಗನಂ ॥ ಈ ದೊರೆಯಱಿಮಗನುಂ ನೃಪ । ನಾದಂ ನೋಡೆಂದು ಧರ್ಮನಂ ಮೂದ

ವ ॥ ಎನೆ ಶಾರದ್ವತನಿಂತೆಂದಂ—
ಚಲಮನೆ ನೋಱೆಪ್ಪಡಯ್ವರುಮನಯ್ದುಱಿಯೂರೊಳ ಬಾಱಿಸೆಂದು ಮುಂ।
ಬಲಿ ಬಲಸೂದನಂ ನುಡಿಯಯುಂ ಕುಡದಿರ್ದುದ ಪೇೞ್ಗುಮುಯ್ದು ಮೆ– ॥
ಯ್ಗಲಿತನಮುಂ ಸರಿತ್ಸುತಘಟೋದ್ಭವರಂ ಪೊಣರ್ದಿಕ್ಕಿ ಗೆಲ್ದರೊಳ್ ।
ಕಲಹಮೆ ಪೇೞ್ಗುಮಿಂ ಪೆಱತು ಪೇೞ್ವಡಯಾವುದೂ ಕೌರವೇಶ್ವರಾ ॥ ೯ ॥

---

ಲಿಸಲ್ । ಪೋದಂ ಪುತ್ರನನರಸಲ್ । ಪೋದನೆ ಯಮಪುರಕೆ ಮುಕ್ತಬಾಣಂ ದ್ರೋಣಂ ॥ ೩ ॥ ಆ ॥ ೨೪ ॥ ೨೫ ॥ ಎಂದು ದುರ್ಯೋಧನನ ಬಾಯಿಂದ ಹೇಳಿಸಿರುವುದನ್ನು ನೋಡಿರಿ ಪಂಪನೂ–ದ್ವಾದಶಾಶ್ವಾಸದಲ್ಲಿ "ಸಾಮಜಮಶ್ವತ್ಥಾಮಂ। ನಾಮದಿನೊಂದಱಿದೊಡಲ್ಲಿ ಕಂಡು ಹತೋಶ್ವ । ತ್ಥಾಮಾ ಎನೆ ನೃಪನಶ್ವ । ತ್ಥಾಮನೆಗೆತ್ತೊಣರ್ದ ನೊಪಜನೊರ್ವಸರಿಭವಮಂ ॥ ೨೭ ॥ ಒಗೆದ ಸುತಶೋಕದಿಂದಾ । ವಗೆಯುಂ ತೊಳಗುರಿಯೆ ಭೋಂಕನೆರ್ದೆ ತೆಱೆಯಲ್ ಹಾ ॥ ಮಗನೇ ಎಂದಶ್ರುಜಲಾ, ದ್ರ್ಗಂಡನಾಗಂಡಿನೊಡನೆ ಬಿಸುಟಂ ಬಿಲ್ಲಂ ॥ ೨೮ ॥ ಅಂತು ಬಿಸುಟು ವಿಚ್ಛಿನ್ನ ವೀರರಸನುಮುತ್ಪನ್ನಶೋಕರಸನುಮಾಗಿ ನಿಜವರೂಥದಮೇಲ ಧರ್ಮಪುತ್ರನ ಸಮೀಪಕ್ಕುಯ್ದು ಮಗನ ಮಾತಂ–"ಬಸಗೊಳೆ ಕುಂಜರಂ ಮಡಿದುದೆಂದು ಮಹೀಭುಜನುಳ್ಳ ಮಾಱ್ಕೆಯಿಂ । ಪುಸಿಯದೆಪೇೞ್ದೊಡಂ ಕಿಱಿದು ನಂಬದೆಯುಂ ರಣದಲ್ಲಿ ಮುನ್ನೆ ಬಿ । ಲ್ವಿಸುಟೆನಿದೆಂತು ಪೇೞ್ ಪಿಡಿವೆನಿನಿ ದನೆಂದಿರದಾತ್ಮಯೋಗಿತ । ನ್ನಸುವನುದಾತ್ತಯೋಗದೊಳೆ ಬಿಲ್ಲೊವಜಂ ಕಳೆದಂ ರಣಾಗ್ರದೊಳ್ ॥ ೨೯ ॥ ಎಂದು ಹೇಳಿದೆ ) ಆ ಕೌಂತೇಯರ ಆಯಕ್ಕೆ = ಆ ಪಾಂಡವರ ಅಭಿವೃದ್ಧಿಯ ಏಸಕಕ್ಕೆ, ಗೆಂಟು ಎಂತೆಂತು ಅಕ್ಕುಂ ಅದಂ = ಹೇಗೆ ಹೇಗೆ ಗೆಂಟು (ಬಂಧವು, ಕಟ್ಟು, ತಡೆಯು) ಆಗುವುದೋ ಅದನ್ನು, ಆ ವೈರಿಗಳ್ಗೆ ಮದುದ್ಯಮಮೆ ಪೇೞ್ಗೆ = ಆ ವೈರಿಗಳಿಗೆ, ಮತ್+ಉದ್ಯಮಮೆ = ನನ್ನ ಉದ್ಯೋಗವೇ ಪೇಳಲಿ, ಒಳ್ಪಂತಳೆವಂತು ಆನ್ ಎಂತು ಒಲ್ಲೆಂ = ಆ ವೈರಿಗಳಿಗೆ ಒಳ್ಳೆಯ ರೀತಿ (ಉಂಟಾಗುವ ಹಾಗೆ ಮಾಡಲು) ತಾಳುವ ಹಾಗೆ ನಾನು ಹೇಗೆ ಸಮರ್ಥನಾಗುವೆನು? [ಒಲ್ (ಧಾತು) ಶಕ್ತನಾಗು] ತೇಜಂ ಎನಗೆ ಇನ್ನೆಂತಕ್ಕುಂ = ತೇಜಸ್ಸು ನನಗಿನ್ನು ಹೇಗುಂಟಾದೀತು, ಇಂಪೇೞಿರೇ = ಇನ್ನು ಹೇಳಿರಯ್ಯಾ! ವೃತ್ತದ ಲಕ್ಷಣ = ಕಣ್ಗೊಪ್ಪಲ್ ಮಸಜಂಸತಂ ತಗಮುಮಾ ಶಾರ್ದೂಲವಿಕ್ರೀಡಿತಂ ॥ ೮ ॥

ಎನೆ— ಇಂತೆಂದು ವಚನಂ ॥ ಎನೆ = ದುರ್ಯೋಧನನು ಹೀಗೆನ್ನಲು; ಶಾರದ್ವತಂ ಇಂತೆಂದಂ—ಕೃಪನು ಇಂತು ನುಡಿದನು ॥

ಚಲಮನೆ— ಇಂತೆಂದು ಚಂ. ಮಾ ವೃತ್ತಂ ॥ ಚಲಮನೆ ಪೇೞ್ವಡೆ = ನಿನ್ನ ಹಟವನ್ನು ಕುರಿತು ಹೇಳುವುದಾದರೆ; ಅಯ್ವರುಮಂ = ಪಾಂಡವರೈವರನ್ನೂ,

ವ ॥ ಅದಱಿಂದಮಿಂ ಪೆಱತು ಮಂತಣಕ್ಕೆಡೆಯಿಲ್ಲ ಮುನ್ನೆ ಚಕ್ಷುಷ್ಮನೆಂಬ ಮನುವಾದ ಕಾಲದೊಳ್ ಧರಾತಳಮನೊಲ್ಲಣಿಗೆಯಿಂ ಪಿಡಿವಂತೆ ತಳಮೆಯ್ದೆ ಸುರುಳ್ವಿನಂ ಮುಯ್ಯೇಱಸೂಱ ಪಿಡಿದ ಸಾಹಸಮು ಮನೀಂದ್ರಂಗೆ ತನ್ನ ಸಹಜಕವಚಮಂ ತಿದಿಯುಗಿದು ಕೊಟ್ಟ ಚಾಗದ

---

ಒಂದು ಅಱಿಯೂರೊಳೆ ಬಾಳಿಸೆಂದು = ಒಂದು ಕುಗ್ರಾಮವನ್ನಾದರೂ ಕೊಟ್ಟು ಅವರನ್ನು ಬದುಕುವಂತೆ ಮಾಡೆಂದು, ಮುಂ = ಮೊದಲು, ಬಲಿಬಲಸೂದನಂ = ಕೃಷ್ಣನು (ವಿಷ್ಣು ವಾಮನಾವತಾರದಲ್ಲಿ ಬಲಿಚಕ್ರವರ್ತಿಯನ್ನು ರಸಾತಳಕ್ಕೆ ಮೆಟ್ಟಿ ಆತನ ಬಲವನ್ನು ನಾಶಪಡಿಸಿದನು) ಬಲಿಯ ಬಲವನ್ನು ಸೂದನಂ—ನಾಶಮಾಡಿದವನು. ಕೃಷ್ಣನ ವಿಷ್ಣುವಿನ ಅವತಾರವೆಂಬುದರಿಂದ ಇಲ್ಲಿ 'ಬಲಿಬಲಸೂದನಂ' ಎಂಬುದು ಕೃಷ್ಣನಿ ವಿಶೇಷಣವು) ನುಡಿಯೆಯುಂ = ಹೇಳಿದರೂ; ಕುಡದಿರ್ದುದೆಪೇೞ್ಗುಂ = ಕೊಡದಿದು ದೇ ಹೇಳುವುದು (ಶ್ರೀಕೃಷ್ಣನು ಪಾಂಡವರ ಕಡೆಯಿಂದ ಸಂಧಾನಕ್ಕೆ ಹೋಗಿ ಪಾಂಡವರಿ ಅರ್ಧರಾಜ್ಯವನ್ನು ಕೊಡೆಂದು ಕೇಳಿದನು ಕೌರವನು ಒಪ್ಪದಿರಲು, ಅದಲ್ಲದಿದ ಕೊನೆಯಪಕ್ಷ ಐದು ಗ್ರಾಮಗಳನ್ನಾದರೂ ಕೊಟ್ಟು ಅವರನ್ನು ಬಾಳಿಸು—ಕಲಹಕ್ಕೆ ಎ ಕೊಡಬೇಡ'ವೆಂದು ಸಾಮವನ್ನೇ ಮುಂದುಮಾಡಿ ಹೇಳಿದರೂ ಕೌರವನು ತನ್ನ ಹಿಡಿ ಚಲವನ್ನು ಬಿಡದೆ 'ಪಾಂಡವರಿಗೆ ಐದು ಗ್ರಾಮಗಳನ್ನು ಬಿಟ್ಟು ಒಂದು ಸೂಜಿಯ ಮೊನೆಯೂರುವಷ್ಟು ಜಾಗವನ್ನಾದರೂ ಕೊಡೆನು' ಎಂದು ಉತ್ತರ ಕೊಟ್ಟು ಯುದ್ಧ ವನ್ನೇ ಮುಂದೊಡ್ಡಿದನು. ದುರ್ಯೋಧನನ ಹಟಮಾರಿತನಕೆ, ಇದೊಂದೇ ನಿದರ್ಶನವ ಸಾಕೆಂದು ತಾತ್ಪರ್ಯವು) ಎಯ್ದೆ ಮೆಯ್ಗಲಿತನಮುಂ = ಹೆಚ್ಚಾದ ಪರಾಕ್ರಮವನ್ನು ಪೇೞ್ವೊಡೆ = ಹೇಳಬೇಕೆಂದಿದರೆ, ಸರಿತ್ಸುತಘಟೋದ್ಭವರಂ = ಭೀಷ್ಮ ದ್ರೋಣರನ್ನು ಪೊಣರ್ದಿಕ್ಕಿಗೆಲ ರೊಳ್ = ಹೋರಾಡಿ ಜಯಿಸಿದವರೊಡನೆ (ಪೊಣರ್ದಿಕ್ಕಿ—ಎಂಬ ರೇಫೆವೆರಸಿದ ಶಿಥಿಲದ್ವಿತ್ವವು; ಪೊಣರ್ದು + ಇಕ್ಕು = ಹೋರಾಡಿ ಹೊಡೆಯು;) ಕ ಹಮೆಪೇೞ್ಗುಂ = ಜಗಳವೇ ಹೇಳುವುದು. (ಅಸಾಧಾರಣ ಪರಾಕ್ರಮಿಗಳಾಗಿದ್ದ ಭೀಷ ದ್ರೋಣರನ್ನು ಹೋರಾಡಿ ಜಯಿಸಿಕೊಂಡವರಲ್ಲಿ ನೀನು ಕಲಹವನ್ನು ಎತ್ತಿಕೊಂಡುದೆ ನಿನ್ನ ಮೆಯ್ಗಲಿತನಕ್ಕೆ ನಿದರ್ಶನವಾಗಿರುವುದು ಎಯೆ—ಅಧಿಕಾರ್ಥದ ಅವ್ಯಯವು ಹೀಗಿರುವಲ್ಲಿ ಕೌರವೇಶ್ವರಾ ಇಂಪೆಱತು ಪೇೞ್ವೆಡೆಯಾವುದೊ? = ಕೌರವೇಶ್ವರ ಇನ್ನು ಬೇರೆ ಹೇಳುವುದಕ್ಕೆ ಎಡೆ ಯಾವುದೋ ನಿನಗದನ್ನು ಬೇರೆ ಹೇಳಲು ಅವಕಾ ವೇನೂ ಉಳಿದಿರುವುದಿಲ್ಲವೆಂದು ತಾತ್ಪರ್ಯವು ॥

ಅದಱಿಂದಂ—ಇಂತೆಂದು ವಚನಂ ॥ ಅದಱಿಂದಂ = ಅದುದರಿಂದ; ಇಂ ಱತು ಮಂತಣಕ್ಕೆ ಎಡೆಯಿಲ್ಲ = ಇನ್ನು ಬೇರೆ ಮಂತ್ರಾಲೋಚನೆಗೆ ಎಡೆಯಿಲ್ಲ (ಮಂ

ಪೆಂಪುಮಂ ದಿಗ್ವಿಜಯಂಗೆಯ್ದು ಮಿಡಿದನಿತು ಬೇಗದಿಂ ಜರಾಸಂಧನಂ ನೆಲಕಿಕ್ಕಿ ಪುಡಿಯೊಳ್ ಪೊರಳ್ಚಿ ಮಲ್ಲಯುದ್ಧದೊಳ್ ಪಿಡಿದಡಿಗೊತ್ತಿದ ಭುಜಬಲಭೀಮನಂ ಗೆಲ್ದ ಸಾಹಸಮುಮಂ ನಮ್ಮ ಪಡೆಯೆಲ್ಲಮಂ ತೊತ್ತೞಿದುೞಿದು ಕೊಲ್ವ ಘಟೋತ್ಕಚನೆಂಬ ರೂಕ್ಷರಾಕ್ಷಸನಂ ಕೊಂದ ಬೀರಮುಮನಾಲೋಕಾಂತರಂ ನೆಗೞೆ—

---

ಣಂ—(ಸಂ) ಮಂತ್ರಣ = ಗೂಢಾಲೋಚನೆ;) ಮುನ್ನೆ = ಪೂರ್ವಕಾಲದಲ್ಲಿ, ಚಕ್ಷುಷ್ಮನೆಂಬ ಮನುವಾದ ಕಾಲದೊಳ್ = ಚಕ್ಷುಷ್ಮನೆಂಬ ಎಂಟನೆಯ ಮನುವಿನ ಕಾಲದಲ್ಲಿ (ಜೈನಶಾಸ್ತ್ರದಲ್ಲಿ ಚಕ್ಷುಷ್ಮನೆಂಬವನು ವರ್ತಮಾನಕಾಲದ ಚತುರ್ದಶಮನುಗಳಲ್ಲಿ ಎಂಟನೆಯವನು) ಧರಾತಳಮಂ = ಭೂಮಿಯನ್ನು; ಒಲ್ಲಣಿಗೆಯಿಂ ಗಾಣದಿಂದ, ಪಿೞಿವಂತೆ = ಹಿಂಡಿ ಹಿಳಿಯುವ ಹಾಗೆ, (ಪಿೞಿ (ಧಾತು) ನಿಷ್ಪೇಷಣೇ–ಹಿಂಡು) ತಳಂ ಐದೆ ಸುರುಳ್ವಿನಂ = ಭೂತಳವೇ ಚೆನ್ನಾಗಿ ಮುದುಡಿಕೊಳ್ಳಲು; [ಸುರುಳ್ (ಧಾತು) ಸಂಕೋಚನೇ–ಮುದುಡು] ಮುಯ್ಯೇೞ್ಸೂೞ್ = ಇಪ್ಪತ್ತೊಂದು ಬಾರಿ (ಮೂಱು+ಏೞ್ = ಮುಯ್ಯೇೞ್ "ಸ್ವರಮಿದಿರಿರೆಮೂಱಱಲ್ಲಿ 'ಮುಯ್' ಆದೇಶಂ—ಶ. ಮ. ದ ಸೂ ॥ ೧೮೮ ॥ ಪಿೞಿದ ಸಾಹಸಮುಮಂ = ಹಿಂಡಿದ ಸಾಹಸವನ್ನೂ, ಇಂದ್ರಂಗೆ ತನ್ನ ಸಹಜ ಕವಚಮಂ ತಿದಿಯುಗಿವಂತುಗಿದುಕೊಟ್ಟ ಚಾಗದ ಪೆಂಪುಮಂ = ಇಂದ್ರನಿಗೆ ತನ್ನ ಸಹಜಕವಚವನ್ನು ತಿದಿಯುಗಿವ ಹಾಗೆ ಕತ್ತರಿಸಿಕೊಟ್ಟ ತ್ಯಾಗದ ಮಹಿಮೆಯನ್ನೂ, (ಪಿರಿದು ಎಂಬುದರ ಭಾವವು "ಪೆಂಪು"—"ಪಿರಿದೆಂಬೀರೇಫಕ್ಕಾ । ದರಿಪರ್ ಭಾವಾರ್ಥಮಪ್ಪುದೊಂದುಪುಕಾರಂ । ಪರಮಾಗೆ ಬಿಂದುಮಂ ಮಾ । ಕ್ಪರಿಣತರಿಂ ಸಿದ್ಧಮಾಯ್ತುಪೆಂಪೆಂಬಪದಂ ॥ ಶ ಮ ದ ಸೂ. ॥ ೨೧೨ ॥ 'ಪೆರ್ಮೆ'ಯೆಂದೂ ಉಂಟು. ಹೊಸಗನ್ನಡದಲ್ಲಿ 'ಹಿರಿಮೆ' 'ಘನಸ್ಥಿಕೆ' ಎಂಬರ್ಥದಲ್ಲಿಯೂ ಹೆಮ್ಮೆ, ಔದ್ಧತ್ಯ, ಗರ್ವ ಎಂಬರ್ಥಗಳಲ್ಲಿಯೂ ಈಗ ಬಳಕೆಯಲ್ಲಿದೆ. 'ಪೆಂಪು'—ಮಹಿಮೆ, ವೈಭವ, ಔನ್ನತ್ಯ, ಇತ್ಯಾದ್ಯರ್ಥಗಳು ದಿಗ್ವಿಜಯಂಗೆಯ್ದು = ದಿಗ್ವಿಜಯವನ್ನು ಮಾಡಿ; ಮಿಡಿದನಿತುಬೇಗದಿಂ = ಮಿಡಿದಷ್ಟು ಬೇಗನೆ (ಬಹು ಶೀಘ್ರವಾಗಿ ಎಂದು ತಾತ್ಪರ್ಯವು) [ಮಿಡಿ(ಧಾತು)ಅಂಗುಲಿಪ್ರಹರಣೇ = ಬೆರಳಿನಿಂದಚಿಮ್ಮು; ಉದಾ = ಕಣ್ಣೀರಂ ಮಿಡಿದು; ಮಿಡಿ = ಎಳಗಾಯಿ) ಜರಾಸಂಧನಂ ನೆಲಕಿಕ್ಕಿ ಪುಡಿಯೊಳ್ಪೊರಳ್ಚಿ ಮಲ್ಲಯುದ್ಧದೊಳ್ ಪಿಡಿದು ಅಡಿಗೊತ್ತಿದ ಭುಜಬಲಭೀಮನಂ = ಜರಾಸಂಧನನ್ನು ನೆಲಕ್ಕೆ ಕೆಡವಿ ಹುಡಿಯಲ್ಲಿ ಹೊರಳಿಸಿ ಜಟ್ಟಿಗಾಳಗದಲ್ಲಿ ಹಿಡಿದು ಕೆಳಕ್ಕೆ ಒತ್ತಿದ ಭುಜಬಲಭೀಮನನ್ನು; ಗೆಲ್ದಸಾಹಸಮುಮಂ = ಜಯಿಸಿದ ಸಾಹಸವನ್ನೂ, ನಮ್ಮಪಡೆಯೆಲ್ಲಮಂ = ನಮ್ಮ ಸೈನ್ಯವೆಲ್ಲವನ್ನೂ;] ಪಡೆ = (ನಾಮಪದ) ಸೈನ್ಯವು; ಪಡೆ = (ಧಾತು)

ಹೊಂದು, ಹೆರು] ತೊತ್ತುಳಿದುಳಿದು ಕೊಲ್ವ = (ತೊತ್ತುಳಿಂದುಳಿದು) ಚೆನ್ನಾಗಿ ನಜ್ಜು ಗುಜ್ಜಾಗುವಂತೆ ತುಳಿದು ಕೊಲ್ಲುವ, ಘಟೋತ್ಕಚನೆಂಬ ರೂಕ್ಷರಾಕ್ಷಸನಂ= ಘಟೋತ್ಕಚನೆಂಬ ಕ್ರೂರರಾಕ್ಷಸನನ್ನು (ಘಟೋತ್ಕಚನು ಭೀಮಸೇನನಿಗೆ ಹಿಡಿಂಬೆಯೆಂಬ ರಾಕ್ಷಸಿಯಲ್ಲಿ ಹುಟ್ಟಿದವನು) ರಾಕ್ಷಸ-(ದ್ಭ) ರಕ್ಕಸ, ಕೊಂದ ಜೀರವುಮಂ= ಕೊಂದ ಶೂರತನವನ್ನೂ, ಆಲೋಕಾಂತರಂ ನೆಗೞ್ತೆ = ಲೋಕಾಂತರದ ವರೆಗೂ ಪ್ರಸಿದ್ಧವಾಗಲು, (ಜರಾಸಂಧನ ವೃತ್ತಾಂತವು ಪಂಪಭಾರತದ ಷಷ್ಠಾಶ್ವಾಸದಲ್ಲಿ ಹೀಗಿದೆ.-ಗಂಗಾನದಿಯ ಬಡಗಣ ತಡಿಯ ಮಗಮಗಿಸುವ ವಾರಣಾಸಿಪುರಮನಾಳ್ವ ಬೃಹದ್ಬಳಂ ಪುತ್ರೋತ್ಪತ್ತಿನಿಮಿತ್ತಮಪ್ಪೊಂದು ದಿವ್ಯಪಿಂಡಮಂ ತನ್ನಿರ್ವರರಸಿಯರ್ಗೆ ಪಚ್ಚುಕೊಟ್ಟೊಡೆ ಪುಟ್ಟಿದೆರಡು ಪೋೞುಮನಿವೇವುವೆಂದು ಬಿಸುಡೆ ಜರೆಯೆಂಬ ರಕ್ಕಸಿ ಕಂಡು ತಿನಲೆಂದೆರಡು ಪೋೞುಮನೊಂದು ಕೆಯ್ಯೊಳಿಪಿಡಿದೊಡೊಂದೊಂದಱೊಳ್ ಸಂಧಿಸಿ ಮಾನಸರೂಪುಗೊಂಡೊಡೆ ಚೋದ್ಯಂಬಟ್ಟು ಜರಾಸಂಧನೆಂದು ಪೆಸರನಿಟ್ಟು ಬೃಹದ್ಬಳಂಗೆ ಕೊಟ್ಟೊಡೆ ಜರಾಸಂಧನುಂ ಸಾಲ್ವಲನುಮೆಂಬ ದೈತ್ಯನುಮೊಂದಾಗಿ ಮೂವತ್ತೆರಡಕ್ಕೋಹಿಣೀಬಲಂಬೆರಸು ನಂದು [ಕೃಷ್ಣನಂ] ಮುತ್ತಿಕೊಂಡೊಡುಪಾಯಬಲದೊಳೆ ಸಾಲ್ವನಂ ಕೊಂದು ಜರಾಸಂಧಂಗಳ್ಕಿ ಮಧುರಾಪುರಮಂ ಬಿಸುಟ್ಟುಪೋಗಿ ದ್ವಾರಾವತಿಯ ಸಮುದ್ರಮೆ ನೀರ್ಗಾಗೆಯಾಗಿ ಮಾಡಿದನಾತನುಂ ಭೀಮನ ಕೈಯೊಳಲ್ಲದೆ ಸಾಯನೆಂಬುದಾದೇಶಮದಱಿನಾ ಕೃಷ್ಣನಾತನಂ ಮಲ್ಲಯುದ್ಧದೊಳ್ ಭೀಮನಿಂ ಕೊಲಿಸಿ, ಜರಾಸಂಧನ ಮಗನಪ್ಪ ಕೃತವರ್ಮನಂ ರಾಜ್ಯದೊಳ್ನಿಱಿಸಿದಂ) ಮುನ್ನೆಚಕ್ರಷ್ಟಮೆಂಬ ಮಾನವಾದ ಕಾಲದೊಳ್ ಕರ್ಣಂ ಧರಾತಳಮಂ ಮುಯ್ಯೇೞ್ಸೂೞ್ ಒಲ್ಲಣಿಗೆಯಿಪಿಟಿವಂತೆಪಿಟಿದ ವೃತ್ತಾಂತವು ಸಂಸ್ಕೃತ ಮಹಾಭಾರತದಲ್ಲಿಲ್ಲ. ಈ ಕಥೆಯು ಜೈನಪುರಾಣಗಳಾವುದರಲ್ಲಾದರೂ ಬಂದಿದ್ದಿರಬಹುದೆಂದು ತೋರುತ್ತದೆ ಶುಭಚಂದ್ರಕೃತಪಾಂಡವಪುರಾಣದಲ್ಲಿದೆಯೋ ತಿಳಿಯದು ಕರ್ಣಯುದ್ಧಾವಸಾನದಲ್ಲಿ-"ಕರ್ಣಭೀಕರರಥಚಕ್ರಮಂ ಪಿಡಿದು ನುಂಗಿದಳೊರ್ಮೆಯೆ ಧಾತ್ರಿ ಕೋಪದಿಂ ॥ ಅಂತುತನ್ನ ಮುನ್ನೆಮುಯ್ಯೇೞ್ಸೂಟ್ಪಿರಮೊಲ್ಲಣಿಗೆಯಂಪಿಟಿವಂತೆ ಪಿಂಡಿಪಿಟಿದ ಪಗೆಗೆ ರಥಚಕ್ರಮಂ ನುಂಗುವುದುಂ" ಎಂದು ಪಂಪಭಾರತದಲ್ಲಿ ಹೇಳಿ, ಕರ್ಣನ ರಥವನ್ನು ಭೂಮಿ ನುಂಗುವುದಕ್ಕೆ ಹಿಂದಿನ ಹಗೆಯೇ ಕಾರಣವೆಂಬುದಾಗಿ ಹೇಳಿದೆ. ಕುಮಾರವ್ಯಾಸಭಾರತದಲ್ಲಿ—"ಧರಿನೆನೆದ ದುಷ್ಕೃತವದೇನಂ । ದರಸಬೆಸಗೊಂಬೈ ನಿರಂತರ । ಸುರಿರುಧಿರಾಸಾರದಲಿ ಕೆಸರಿದ್ದು ಕಳನೊಳಗೆ ॥ ಹರಿವ ಬಿಂಕದ ರಥದ ಗಾಲಿಯ । ಗರವತನಗಾಳಾಯ್ತುಲೇಬೊ । ಪ್ಪರಿಸಿ ತಗ್ಗಿತು ತೀರು ತಡೆದುದು ಭಟನ ಸಾಹಸವ ॥ ಹೀರಥವು ಧರೆಯಲ್ಲಿ ಹೂತುದನ್ನು ನೋಡಿ—"ಈಗಳಿದು ತಾನೇನು ವಿಧಿಬರೆ । ದೋಗ

ನೆಗಟ್ದಿ* ಕಲಿತನದ ಚಾಗದ ।
ಬಗೆ ತನ್ನೊಳ್ ನೆಗಟ್ತೆವೆತ್ತು ನೆಗಟ್ದರೆ ಸಂದಂ ॥
ಗಗಣಿತಗುಣಂಗೆ ಕರ್ಣಂ ।
ಗೊಗಸುಗಮೇಕಟ್ಟು ಬೀರವಟ್ಟಮನರಸಾ ॥ ೧೦ ॥

---

ಯೊ ಕುರುವಂಶ ವಜ್ರದ । ಬೇಗಡೆಯೊ ಮಾಮಾ ಎನುತ ಕಲಿಕರ್ಣ ಮರುಗಿದನು" ಎಂದು ಕರ್ಣಪರ್ವದ ೬ನೇ ಸಂಧಿಯಲ್ಲಿ ಹೇಳಿದೆ. ಆದರೆ ಹಿಂದೆಯೆಂದೂ ಕರ್ಣನು ಧರಣಿಯನ್ನು ಹಿಂಡಿಹಿಳಿದ ಸಂಗತಿಯನ್ನು ಹೇಳಿಲ್ಲ ಕರ್ಣನು ಹಿಂದಿನ ಜನ್ಮದಲ್ಲಿ ಸಹಸ್ರಕವಚನಾಗಿದ್ದನೆಂದೂ, ಅವನ ಸಾವಿರ ಕವಚಗಳಲ್ಲಿ ಒಂಭೈನೂರತೊಂಭತ್ತೊಂಭತ್ತು ಕವಚಗಳನ್ನು ನರನಾರಾಯಣರು ಸ್ವಾಧೀನಪಡಿಸಿದ ಬಳಿಕ ಒಂದು ಕವಚ ಮಾತ್ರ ಉಳಿದುದು ಈ ಜನ್ಮದಲ್ಲಿ ಅದು ಒಡಮಂಧಿತ್ತೆಂದೂ ಅದನ್ನು ಉಪಾಯಾಂತರದಿಂದ ಅರ್ಜುನನಿಗಾಗಿ ಇಂದ್ರನು ಬೇಡಿದನೆಂದೂ ಒಂದು ಕಥೆಯನ್ನು ಕೇಳಿರುವವು. ಪಂಪಭಾರತದಲ್ಲಿ ಸೂಚಿತವಾದ ಕರ್ಣನ ಈ ಪೂರ್ವಜನ್ಮವೃತ್ತಾಂತವು ಜೈನಸಂಪ್ರದಾಯದ್ದೆಂಬುದರಲ್ಲಿ ಸಂಶಯವಿಲ್ಲ

ನೆಗಟ್ದಿ — ಇಂತೆಂದು ಕಂದಂ ॥ ನೆಗಟ್ದಿ ಕಲಿತನದ ಚಾಗದ ಬಗೆ= ತೋರಿಸಿದ ಕಲತನದ ಮತ್ತು ತ್ಯಾಗದ ರೀತಿಯು ತನಗೆ ಕೀರ್ತಿಯುಂಟಾಗುವಂತೆ ಮಾಡಿ, ತನ್ನೊಳ್ ನೆಗಟ್ತೆವೆತ್ತು ನೆಗಟ್ದರೆ ಸಂದಂಗೆ= ತನಗೆ ಖ್ಯಾತಿಯುಂಟಾಗುವಂತೆ ಮಾಡಿ ಕೃತಾರ್ಥನಾದ, ಅಗಣಿತಗುಣಂಗೆ ಕರ್ಣಂಗೆ= ಅಸಂಖ್ಯಾತಸದ್ಗುಣಂಗಳಿಂದೊಪ್ಪುವ ಕರ್ಣನಿಗೆ, ಅರಸಾ= ದೊರೆಯಾದ ದುರ್ಯೋಧನನೇ, ಬೀರಪಟ್ಟಮಂಕಟ್ಟು= ವೀರಪಟ್ಟವನ್ನು ಕಟ್ಟು, ಒಗಸುಗಮೇ= ಅತಿಶಯವೇ, ಕಟ್ಟು ಬೀರಪಟ್ಟಮುನರಸಾ= ಅರಸಾ ಬೀರಪಟ್ಟಮಂ ಒಗಸುಗಮೇ ಕಟ್ಟು ಎಂದು ಅನ್ವಯ ಮಾಡಿ "ಒಗಸುಗಮೇ" ಎಂಬುದಕ್ಕೆ ಬೇಗನೇ ಎಂಬ ಅರ್ಥವನ್ನು ಹೇಳುವುದು ಉಚಿತವೆಂದು ತೋರುವುದು ಒಗಸುಗಂ ಎಂಬುದಕ್ಕೆ ಅತಿಶಯ, ಆಶ್ಚರ್ಯ ಎಂಬ ಅರ್ಥಕ್ಕಿಂತಲೂ ಸಂದರ್ಭವಶಾತ್ ಬೇಗನೇ ಎಂದಾಗಲಿ, ನಿಸ್ಸಂದೇಹವಾಗಿ ಎಂದಾಗಲಿ ಅರ್ಥವನ್ನು ಕಲ್ಪಿಸಿದರೆ ವಿಹಿತವೆಂದು ತೋರುವುದು "ಒಗಸುಗಂ" ಎಂಬುದು — ಅಗಲುರಮನೆನಗೆ ಪಡೆದ ಜ । ನೊಗಸುಗ ಮಲ್ತೆನಗೆ ನಿನ್ನನೆನಗೆಯೆ ಪಡೆದಂ ॥ ಪಂ. ಭಾ. ॥ ೮ ॥ ೬೭ ॥ ಒಗಸುವಂ ಎಂಬ ರೂಪದಿಂದ—ಮೆಲ್ಪಿನ ತೊದಳ್ನುಡಿಗಪ್ಪೊಡಮೆಯ್ದೆವಾರವೇ ನೊಗಸುಗಮೆಂದು ತಳ್ತಗಲ.... ...ನಾಲಲಿತಾಂಗ ವಲ್ಲಭಂ ॥ ಆದಿಪುರಾಣ ॥ ೨ ॥ ೭೫ ॥ ರಲ್ಲಿ ಬಂದಿರುವುದು

ರಥಯಾನಪಾತ್ರದಿಂ ಪರ- ।
ರಥಿನೀ ಜಳನಿಧಿಯ ಪಾರಮಂ ಸಲ್ವ ಜಗ- ॥
ತ್ಪ್ರಥಿತಭುಜದರ್ಪದಿಂದತಿ- ।
ರಥಮಥನಂ ಕರ್ಣಧಾರನಲ್ಲನೆ ಕರ್ಣಂ ॥ ೧೧ ॥

ವ ॥ ಎಂದು ನುಡಿದ ಕೃಪನ ಮಾತಂ ನೃಪಂ ಮನದೇಗೊಂಡು ಕರ್ಣನ
ಮೊಗಮಂ ನೋಡಿ—

---

ರಥಯಾನಪಾತ್ರದಿಂ— ಇಂತೆಂದು ಕಂದಂ ॥ ಅತಿರಥಮಥನನಾದ ಕರ್ಣನು ಕರ್ಣಧಾರನಂತಿರುವುದರಿಂದ ಈ ಪದ್ಯದಲ್ಲಿ ಕರ್ಣನಿಗೆ ವೀರಪಟ್ಟವನ್ನು ಕಟ್ಟುವ ವಿಷಯದಲ್ಲಿ ಒಗಸುಗವೇನೂ ಇಲ್ಲವೆಂಬುದನ್ನು ವಿಶದೀಕರಿಸುವುದಕ್ಕಾಗಿ ಕರ್ಣನೇ ಸೇನಾನಾಯಕನಾಗಲು ಅರ್ಹನೆಂಬುದನ್ನು ಸಮರ್ಥಿಸಿ ಹೇಳುತ್ತಾನೆ ಕರ್ಣನು ಬೆಸ್ತರ ಕುಲದವನೆಂಬುದನ್ನು ಸೂಚಿಸುವುದು. ಕರ್ಣಧಾರನೆಂದರೆ ನಾವಿಕನು ಇಲ್ಲಿ ಕರ್ಣನನ್ನು ಕುರುಸೇನೆಯ ಕರ್ಣಧಾರನೆಂದು ರೂಪಿಸಿ ಹೇಳಿದೆ- ರಥಯಾನ ಪಾತ್ರದಿಂ= ತೇರೆಂಬದೋಣಿಯಿಂದ, (ಯಾನಪಾತ್ರ= ದೋಣಿ, ನಾವೆ ಹಡಗು) ಪರರಥಿನೀ ಜಳನಿಧಿಯ= ಶತ್ರುಸೈನ್ಯವೆಂಬ ಸಮುದ್ರದ; (ರಥಿನೀ-ರಥವು ಉಪಲಕ್ಷಣವಾಗಿ ಉಳ್ಳದು; ರಥಿನೀ= ಸೈನ್ಯ (ಧ್ವಜಿನೀಯೆಂಬುದರೊಡನೆ ಹೋಲಿಸಿ) ಪಾರಮಂಸಲ್ವ= ತೀರವನ್ನು ಜಯಿಸುವ (ತೀರವನ್ನು ಸೇರುವ), ಜಗತ್ಪ್ರಥಿತ ಭುಜದರ್ಪದಿಂದ= ಲೋಕಪ್ರಸಿದ್ಧನಾದ ಬಾಹುವೀರ್ಯಾತಿಶಯದಿಂದ, ಅತಿರಥ ಮಥನಂ ಕರ್ಣಂ= ಅತಿರಥರನ್ನು ಕೊಲ್ಲುವ ಶಕ್ತಿಯುಳ್ಳ ಕರ್ಣನು, ಕರ್ಣಧಾರ ನಲ್ಲನೆ= ಕರ್ಣಧಾರನಲ್ಲವೆ? ಆತನು ಅತಿರಥರನ್ನು ಮಥನಮಾಡತಕ್ಕ ಭುಜಬಲ ವುಳ್ಳವನೆಂಬುದು ಲೋಕಪ್ರಸಿದ್ಧವಾಗಿರುವುದು ಹೀಗಿರಲು ಕುರುಸೈನ್ಯವನ್ನು ನಡೆಯಿಸಿ ಶತ್ರುಸೈನ್ಯವನ್ನು ಧ್ವಂಸಪಡಿಸಲು ಸಮರ್ಥನೆಂಬುದರಲ್ಲಿ ಸಂಶಯವಿಲ್ಲ ರಥವನ್ನು ಯಾನಪಾತ್ರವೆಂದೂ, ಪರರಥಿನಿಯನ್ನು ಜಳನಿಧಿಯೆಂದೂ ಕರ್ಣನನ್ನು ಕರ್ಣಧಾರನೆಂದೂ ರೂಪಿಸಿ ಹೇಳುವುದರಿಂದ ಇಲ್ಲಿ ಸಾವಯವರೂಪಕಾ ಲಂಕಾರವು. ॥ ೧೧ ॥

ಎಂದು ನುಡಿದ— ಇಂತೆಂದು ವಚನಂ ॥ ಎಂದು ನುಡಿದ= ಹೀಗೆ ಹೇಳಿದ ಕೃಪನ ಮಾತಂ= ಕೃಪಾಚಾರ್ಯನ ಮಾತನ್ನು; (ಕೇಳಿ) ನೃಪಂ-ಅರಸನಾದ ದುರ್ಯೋಧನನು; ಮನದೇ= ಮನಸ್ಸಿನಲ್ಲೇ ಕೊಂಡು-ಸ್ವೀಕರಿಸಿ ಅಥವಾ-ಮನಸಿ ನಲ್ಲೇ ವ್ಯಸನಗೊಂಡು-ಕರ್ಣನ ಮೊಗಮಂ ನೋಡಿ= ಕರ್ಣನ ಮುಖವನ್ನು ನೋಡಿ ॥

ನಡುಗುವುದುಂತೆ ಪಾಂಡವಬಲಂ ನಿನಗರ್ಜುನನೆಂಬನೆಂದುಮು- ।
ರ್ಕುಡುಗಿ ಸುರುಳ್ವನೀಯೆಡೆಗೆ ಪೇೞ್ ಪೆಱರಾರ್ದೊರೆ ವೀರಪಟ್ಟಮಂ ॥
ತಡೆಯದೆ ಕಟ್ಟಿ ವೈರಿಗಳ ಪಟ್ಟನೆ ಪಾಱಿಸಿ ಕಾವುದೆನ್ನ ಬೆ- ।
ಳ್ಗೊಡೆಯುಮನೆನ್ನ ಪಟ್ಟಮುಮನೆನ್ನುಮನಂಗಮಹೀತಳಾಧಿಪಾ ॥ ೧೨ ॥

---

ನಡುಗುವುದುಂತೆ — ಇಂತೆಂದು ಚಂ. ಮಾ. ವೃತ್ತಂ ॥ ಪಾಂಡವ ಬಲಂ= ಪಾಂಡವಸೇನೆಯು; ನಿನಗೆ ಉಂತೆ ನಡುಗುವುದು=ನಿನಗೆ ಸುಮ್ಮನೆ ನಡುಗುವುದು; (ನೀನೆಂದೊಡನೆ ಪಾಂಡವಸೇನೆಯು ಭಯದಿಂದ ನಡುಗುವುದೆಂದು ತಾತ್ಪರ್ಯವು) ನಿನಗೆ ಅರ್ಜುನನೆಂಬಂ=ನಿನಗೆ ಅರ್ಜುನನೆಂಬವನು; ಎಂದುಂ= ಯಾವಾಗಲೂ; ಉರ್ಕುಡುಗಿ=(ಉರ್ಕು+ಉಡುಗಿ) ದರ್ಪಗುಂದಿ; ಸುರುಳ್ವಂ= ಹಿಂಜರಿಯುವನು ಈಯೆಡೆಗೆ ಪೆಱರಾರ್ದೊರೆಪೇೞ್=ಈ ಸಂದರ್ಭದಲ್ಲಿ (ಈ ವೀರಪಟ್ಟಕ್ಕೆ) ಬೇರೆ ಯಾರು ಯೋಗ್ಯರು ಹೇಳು; (ಪೆಱರಾರ್ದೊರೆ?=ಯಾರೂ ಇಲ್ಲವೆಂದು ಆಶಯವು), ಆದುದರಿಂದ ಅಂಗಮಹೀತಳಾಧಿಪಾ=ಎಲೈ ಅಂಗಾಧಿಪತಿಯೇ; ತಡೆಯದೆ ವೀರಪಟ್ಟಮಂ ಕಟ್ಟಿ=ತಡವಿಲ್ಲದೆ ವೀರಪಟ್ಟವನ್ನು (ನೀನು) ಕಟ್ಟಿಸಿಕೊಂಡವನಾಗಿ (ಕಟ್ಟಿ-ಇಲ್ಲಿ ಕರ್ಮಣ್ಯರ್ಥದಲ್ಲಿ ಪ್ರಯೋಗಿಸಲ್ಪಟ್ಟಿದೆ) ವೈರಿಗಳು ಪಟ್ಟನೆ ಪಾಱಿಸಿ=ವೈರಿಗಳ ಫಟ್ಟನ್ನೇ ಹಾರಿಸಿ ಎಂದರೆ ವೈರಿಗಳ ಸಮೂಹವನ್ನೇ ಓಡಿಸಿ (ಪಟ್ಟು=ನಿಜಾಧಿನಾಥನಾಹವದೊಳರಾತಿ ನಾಯಕರ ಪಟ್ಟನೆ ಪಾಱಿಸೆ ಸಂದಪೆಂಪು ॥ ಪಂ. ಭಾ. ॥ ೩ ॥ ೫೦ ॥) ಎನ್ನ ಬೆಳ್ಗೊಡೆಯುಮಂ=ನನ್ನ ಶ್ವೇತಚ್ಛತ್ರವನ್ನೂ, ಎನ್ನ ಪಟ್ಟಮುಮಂ=ನನ್ನ ಪಟ್ಟವನ್ನೂ; ಎನ್ನುಮಂ= ನನ್ನನ್ನೂ; ಕಾವುದು=ಕಾಪಾಡಬೇಕು; [ಕಾ (ಧಾತು) ರಕ್ಷಣೇ; 'ಕಾ' ಧಾತುಗೆ ಮಧ್ಯಮೈಕವಚನದಲ್ಲಿ ವಿಧ್ಯರ್ಥದಲ್ಲಿ "ವುದು" ವೆಂಬ ಆಖ್ಯಾತಪ್ರತ್ಯಯವು ಸೇರಿ ಕಾವುದು ಎಂದಾಯ್ತು.] ವೈರಿಗಳನ್ನು ಸಂಹರಿಸಿ ನನ್ನ ಅರಸುತನವನ್ನು ರಕ್ಷಿಸಬೇಕೆಂದು ದುರ್ಯೋಧನನ ಅಭ್ಯರ್ಥನೆಯು) ಬೆಳ್ಗೊಡೆ, ಪಟ್ಟ ಇವು ಅರಸುತನಕ್ಕೆ ಉಪಲಕ್ಷಣಗಳು, ಕರ್ಣನು ತನ್ನ ಅಣುಗಾಳಾಗಿ ಇದ್ದರೂ ಇಲ್ಲಿ ಆತನಿಂದ ತನ್ನ ಕಾರ್ಯವಾಗಬೇಕಾಗಿರುವುದರಿಂದ ಹೀಗೆ ಗೌರವಿಸಿ ಪ್ರಾರ್ಥಿಸಿಕೊಂಡುದೆಂದು ಭಾವಿಸಬೇಕು 'ತನ್ನ ಕಾರ್ಯಕ್ಕೆ ಹೊಲೆಯನ ಕಾಲನ್ನಾದರೂ ಹಿಡಿಯಬೇಕು ಎಂಬ ನಾಡನುಡಿಯಂತೆ "ಪ್ರಯೋಜನಾಪೇಕ್ಷಿತಯಾ ಪ್ರಭೂಣಾಂ ಪ್ರಾಯಶ್ಚಲಂ ಗೌರವಮಾಶ್ರಿತೇಷು (ಕುಮಾರಸಂಭವ ೩ ॥ ೧) "ಪ್ರಭುಗಳಾದವರು ಸ್ವಪ್ರಯೋಜನಾಪೇಕ್ಷೆಯಿಂದ ಆಶ್ರಿತರಲ್ಲಿ ಅಧಿಕವಾದ ಗೌರವವನ್ನು ತೋರಿಸುವರು"- ಎಂಬುದನ್ನು ಇಲ್ಲಿ ಹೋಲಿಸಬಹುದು. ॥ ೧೨ ॥

ವ ॥ ಎಂಬುದುಮಂಗಾಧಿರಾಜಂ ನಿನ್ನಾಳ್ಗಳೊಳಾನಾರದೊರೆಯೆನಗೆ ಕಾರ
ಣ್ಯಂಗೆಯ್ವಿಯಾಗಿ ಬೆಸಸಿದ ನಿನ್ನ ದಯೆಗೆಯ್ದ ವೀರಪಟ್ಟಮೆಂಬು
ನಗೆಣ್ಬೆರಲ ವಟ್ಟಮೆಂಬುದುಂ ಬದ್ದವಣಂ ಬಾಜಿಸಿ ಕರ್ಣನಂ ಕನ
ಪೀರದೊಳ್ ಕುಳ್ಳಿರಿಸಿ ಕುರುಪರಿವೃಢಂ ತಾಂ ತನ್ನ ಕೆಯ್ಯೊಳಿಆತಂ
ವೀರಪಟ್ಟದ ವಟ್ಟಮುಂ ಕಟ್ಟಿ, ನಿಜಾಂತಃಪುರಪರಿವಾರಂಬೆರಸು ಸೇ
ಯನಿಕ್ಕಿ ತನ್ನ ತುಡುವ ತುಡಿಗೆಗಳೆಲ್ಲಮುಂ ನಱಿಯೆ ತುಡಿಸಿ ದೇವಸ
ಳದ ಪದಿನೆಂಟು ಕೋಟಿ ಪೊನ್ನುಮಂ ತರಿಸಿಕೊಟ್ಟು ಮಣಿಮಯ
ಮಂಡನಾಯೋಗದೊಳ್ ನೆಱಿಯೆ ಪಣ್ಣಿದ ಮದಾಂಧಸಿಂಧುರಮನೆ
ಱಲ್ ತರಿಸಿಕೊಟ್ಟು ಬೀಡಿಂಗೆ ಪೋಗೆನೆ ಪೋಗೆ ಹಸ್ತಿಯು ಬೆಂ
ವಂದು ಸಾತ್ರಿಱಿದು ಪಗಲಂ ತಡವಿಕ್ಕಿದಂತೆ ಬೆಳಗುವ ಕೆಯ್ದೀವಿ
ಗಳ ಬೆಳಗೆ ಬೆಳಗಾಗೆ ತಲೆಯೊಳ್ ನಾಲಗೆಯುಳ್ಳ ಬೂತುಗಳೆಲ್ಲ
ಮಿಲ್ಲೆನ್ನದೀಯುತ್ತುಂ ನಿಜನಿವಾಸಕ್ಕೆವಂದು ನಿತ್ಯದಾನಕ್ಕೆಂದು ನಿಯೊ
ಗಿಗಳ್ ತಂದು—ಪುಂಜಿಸಿದ ಪಂಚರತ್ನದ ಪೊನ್ನರಾಶಿಗಳನರ್ಥಿಜನಕ
ಗೋಸನೆಯಿಟ್ಟು ಕುಡವೇಟ್ದು ನಾಯಕರ್ಗೆಲ್ಲಮುಡಲುಂ ತುಡಲು
ಕೊಟ್ಟು ನೇಸಱ್ ಮೂಡುವಾಗಳ್ ನಮ್ಮ ವಡೆಯನೀ ಮಾಟ
ಯೊಳೊಡ್ಡಿಮೆಂದು ಪಡೆವಳರ್ಗೆ ಬೆಸಸಿ ನಿಜವಿಜಯತುರಗರಥಂಗಳ
ನರ್ಚಿಸಿಪೊಡವಟ್ಟು ದರ್ಭಾಸ್ತರಣದೊಳಾಯಿರುಳಂ ಕಳೆದಂ ॥

---

ಎಂಬುದುಂ— ಇಂತೆಂದು ವಚನಂ ॥ ಎಂಬುದುಂ = ದುರ್ಯೋಧನನು ಹೀಗೆ ದಾಗ; ಅಂಗಾಧಿರಾಜಂ = ಕರ್ಣನು; ನಿನ್ನ ಆಳ್ಗಳೊಳ್ ಆನ್ ಆರದೊರೆ = ನಿನ್ನ ಸೇವ ರಲ್ಲಿ ನಾನೆಷ್ಟರವನು ? (ನಾನು ನಿನ್ನ ಸೇವಕರಲ್ಲಿ ಬಹು ಸಾಮಾನ್ಯನು; ನಿನ, ಅಖಂ ಪ್ರಭುತ್ವದ ಮುಂದೆ ನಾನೆಷ್ಟರವನು ಎಂದು ನೈಚ್ಯಾನುಸಂಧಾನವು) ಎನಗೆ ಕಾರುಣ್ಯ ಗೆಯ್ವಿಯಾಗಿ ಬೆಸಸಿದ = ನನಗೆ ಕರುಣೆದೋರಿ ಅನುಗ್ರಹಿಸುವೆಯೆಂದು, ಬೆ ಸಿದ = ಅಪ್ಪಣೆ ಕೊಡಿಸಿದ, ನಿನ್ನ ದಯೆಗೆಯ್ದ ವೀರಪಟ್ಟಮೆಂಬುದು = ನೀನು ಅನುಗ್ರ ಸಿದ ಈ ವೀರಪಟ್ಟವೆಂಬುದು; ಎನಗೆ ಎಣ್ಬೆರಲಪಟ್ಟಂ = ನನಗೆ ಎಂಟು ಬೆರಲುಗಲ ಪಟ್ಟವು (ಎಣ್ಬು + ಬೆರಲ್ = ಎಣ್ಬೆರಲ್ ಎಣ್ಬುಮುಡಿ) ಪಟ್ಟ = ಅಭಿಷೇಕ ಕಾಲದ ಹಣೆಗೆ ಕಟ್ಟುವ ರೇಶ್ಮೆಯ ಲಾಡಿ, ಎಂಬುದುಂ = ಎಂದಾಗ, ಬದ್ದವಣಂ ಬಾಜಿಸಿ = ಮಂಗಳ ವಾದ್ಯಗಳನ್ನು ಮೊಳಗಿಸಿ (ಬದ್ದವಣಂ (ಸಂ) ವರ್ಧಮಾನ; ಬಾಜಿಸಿ = ಧ್ವನಿಗೆಯ್ದು) ಕರ್ಣನಂ ಕನಕಪೀರದೊಳ್ಕುಳ್ಳಿರಿಸಿ = ಕರ್ಣನನ್ನು ಸುವರ್ಣಸಿಂಹಾಸ ದಲ್ಲಿ ಕುಳ್ಳಿರಿಸಿ; ಕುರುಪರಿವೃಢಂ ತಾಂ ತನ್ನ ಕೆಯ್ಯೊಳೆ = ಕುರುಪತಿ ತಾನು ತ

ಕೆಯ್ಯಿಂದಲೇ; ಆತಂಗೆ ವೀರಪಟ್ಟಮಂ ಕಟ್ಟಿ= ಕರ್ಣನಿಗೆ ಸೇನಾಧಿಪತ್ಯವನ್ನು ಕಟ್ಟಿ, ನಿಜಾಂತಃಪುರಪರಿವಾರಂಬೆರಸು = ತನ್ನ ಅಂತಃಪುರದವರಿಂದಲೂ ಪರಿವಾರದವರಿಂದಲೂ ಕೂಡಿಕೊಂಡು [ಅಂತಃಪುರ (ದ್ಭ) ಅಂತವುರ] ಸೇಸೆಯನಿಕ್ಕಿ = ಮಂತ್ರಾಕ್ಷತೆಯನೆರಚಿ, ತನ್ನ ತುಡುವ ತುಡುಗೆಗಳೆಲ್ಲಮಂ ನೆಱೆಯೆತುಡಿಸಿ= ತಾನು ತೊಡುವ ಒಡವೆಗಳೆಲ್ಲವನ್ನೂ ಸಮಗ್ರವಾಗಿ ತೊಡಿಸಿ, (ತುಡು = ಭೂಷಣಾವಸರಣೇ ಶರಸಂಧಾನೇಚ, ಬಾಣಗಳನ್ನು ತೊಡು) ನೆಱೆಯೆ = ಅಂದವಾಗಿ ಒಪ್ಪುವಂತೆ, ದೇವ ಸಬಳದ ಪದಿನೆಂಟು ಕೋಟಿ ಪೊನ್ನುಮಂ ತರಿಸಿಕೊಟ್ಟು, ಮಣಿಮಯಮಂಡನಾಯೋಗದೊಳ್ = ರತ್ನಮಯವಾದ ಜೂಲಿನಿಂದ (ಮಂಡನಾಯೋಗ = ಅಂಬಾರಿ ಆನೆಯ ಮೇಲೆ ಹಾಕುವುದು) ನೆಱೆಯೆ ಪಣ್ಣಿದ = ಚಂದವಾಗಿ ಸಜ್ಜುಗೊಳಿಸಿದ [ಪಣ್ (ಧಾತು) ಸಜ್ಜೀಕರಣೇ, ಫಲೇಚ (ಹಣ್ಣು) (ಅದು ಪಣ್ಣಿದು ಪೋಗು ನೀನು ಮಾನುಂತಿಂಬಂ ಪಂ. ಭಾ ॥ ೩ ॥ ೧೨ ॥) ಮದಾಂಧಸಿಂಧುರಮಂ= ಮದಗಜವನ್ನು [ಮದದಿಂದ ಅಂಧ (ಕುರುಡು) ಆದ, ಸಿಂಧುರ= ಆನೆಯು,] ಮದ್ದಾನೆಯನ್ನು, ಏಱಲ್‌ತರಿಸಿಕೊಟ್ಟು = ಅಡರುವುದಕ್ಕೆ ತರಿಸಿಕೊಟ್ಟು, ಬೀಡಿಂಗೆ ಪೋಗೆನೆ= ಬೀಡಿಗೆ ಹೋಗೆಂದು ಕಳಿಸಿದಾಗ, ಪೋಗೆ =ಹೋಗಲು, ಹಸ್ತಿಯ ಬೆಂಗೆವಂದು = ಆನೆಯ ಬೆನ್ನಮೇಲೇರಿ (ಬೆನ್ಗೆವರ್ =ಬೆನ್ನಿಗೆವರು, ಬೆನ್ನೇರು, ಹತ್ತು, ಹಾಗೆಯೇ ಬೆಂಗೆವಾಯ್ದು) ಸುತ್ತಿಱಿದು ಪಗಲಂ ತಡವಿಕ್ಕಿದಂತೆ ಬೆಳಗುವ = ಸುತ್ತುಗಟ್ಟಿ ಹಗಲನ್ನು ತಡೆಯಿಟ್ಟಂತೆ ಬೆಳಗುವ, ಕೆಯ್ದೀವಿಗೆಗಳ ಬೆಳಗೆ ಬೆಳಗಾಗೆ= ಕೈದೀಪಗಳ ಪ್ರಭೆಯೇ ಪ್ರಕಾಶಿಸುತ್ತಿರಲು (ಹಗಲು ದೀವಟಿಗೆ ಹಿಲಾಲು ಮುಂತಾದ ಆಡಂಬರಗಳೊಡನೆ ಹೊರಟನೆಂದು ತಾತ್ಪರ್ಯವು) ತಲೆಯೊಳ್ ನಾಲಗೆಯುಳ್ಳ ಬೂತುಗಳೆಲ್ಲಂ= ತಲೆಯಲ್ಲಿ ನಾಲಗೆಯಿರುವ ಬೂತುಗಳಿಗೆಲ್ಲಾ (ಬೂತು= ಬಾಯಿಪಟಾಕಿಯಿಂದ ಮೆಚ್ಚಿಸುವಾತನು) ಕೊಡಬೇಕೆಂದು ಕೇಳಿಕೊಂಡವರಿಗೆಲ್ಲಾ, ಇಲ್ಲೆನ್ನದೆ ಈಯುತ್ತುಂ - ಇಲ್ಲವೆನ್ನದೆ ದಾನಮಾಡುತ್ತ, ನಿಜನಿವಾಸಕ್ಕೆ ವಂದು = ತನ್ನ ಮನೆಗೆ ಬಂದು, ನಿತ್ಯದಾನಕ್ಕೆಂದು ನಿಯೋಗಿಗಳ್ ತಂದು ಪುಂಜಿಸಿದ = ನಿತ್ಯದಾನಕ್ಕೋಸ್ಕರ ಕಾರ್ಯನಿರ್ವಾಹಕರು ತಂದುಕೂಡಿಸಿದ, (ನಿಯೋಗಿ=ಕಾರ್ಯಕಾರಿಗಳು) ಪಂಚರತ್ನದ ಪೊನ್ನರಾಶಿಗಳಂ= ಪಂಚರತ್ನದ ಮತ್ತು ಸುವರ್ಣದ ರಾಶಿಗಳನ್ನು, ಅರ್ಥಿಜನಕ್ಕೆ = ಬೇಡುವವರಿಗೆ, ಗೋಸನೆಯಿಟ್ಟು= ಡಂಗುರ ಹೊಯಿಸಿ [ಗೋಸನೆ (ಸಂ) ಘೋಷಣೆ] ಕುಡವೇಟ್ದು (ಕುಡಲ್+ಪೇಟ್ದು) ಕೊಡುವುದಕ್ಕೆ ಹೇಳಿ, ನಾಯಕರ್ಗೆಲ್ಲಂ= ಎಲ್ಲಾ ಮುಖಂಡರಿಗೂ, ಉಡಲುಂ ತುಡಲುಂ ಕೊಟ್ಟು= ವಸ್ತ್ರಾಭರಣಾದಿಗಳನ್ನುಕೊಟ್ಟು; ನೇಸಱ್ ಮೂಡುವಾಗಳ್=ಸೂರ್ಯನು ಉದಯಿಸುವಾಗ, ನಮ್ಮ ಪಡೆಯಂ =ನಮ್ಮ ಸೇನೆಯನ್ನು, ಈ ಮಾಟ್ಕೆಯೊಳ್

ಒಡ್ಡಿಂ ಎಂದು – ಈ ತೆರನಾಗಿ ಒಡ್ಡಿರಿ ಎಂದು, [ಮಾಡು+ಕೆ (ಧಾತು) ಮಾಟಿಕ್ಕೆ (ಮಾಡುವಿಕೆ) ರೀತಿ, ಪಡೆವಳರ್ಗೆ = ಸೇನಾನಾಯಕರಿಗೆ (ಪಡೆವಳರ್, ಪಡೆವಳ್ಳರ್ (ಪಡೆಯಂನಡೆಯಿಸುವಾತಂಪಡೆವಳನುಂ ಪಡೆವಳ್ಳನು ಮುಕ್ಕಂ) "ನಡೆಯಿಸುವನೀತನಿ ದನೆಂಬೆಡೆಯೊಳ್‌ವಳವಳ್ಳಮುಕ್ಕುಂ ॥ ಶ. ಮ. ದ ಸೂ ॥ ೧೯೮ ॥ ಬೆಸಸಿ = ಆಜ್ಞಾಪಿಸಿ; ನಿಜ ವಿಜಯ ತುರಗರಥಂಗಳಂ = ತನ್ನ ವಿಜಯತುರಗಗಳನ್ನೂ ವಿಜಯ ರಥವನ್ನೂ; ಅರ್ಚಿಸಿ = ಪೂಜಿಸಿ; ಪೊಡೆವಟ್ಟು = ನಮಸ್ಕರಿಸಿ, ದರ್ಭಾಸ್ತರಣದೊಳ್ = ದರ್ಭಶಯನದಲ್ಲಿ, (ದರ್ಭ+ಆಸ್ತರಣ= ದರ್ಭೆಯಹಾಸಿಗೆ) ಆ ಇರುಳಂ ಕಳೆದಂ = ಅಂದಿನ ರಾತ್ರಿಯನ್ನು ಕಳೆದನು;

ಎಂಬಲ್ಲಿಗೆ ಕರ್ಣರಸಾಯನದಲ್ಲಿ,

ಷ ಷ್ಠ ಗ್ರಾ ಸ ವು ಮು ಗಿ ದು ದು.



## ಸಪ್ತಮಂಗಾಶ್ವಾಸಂ

ಉದಯಗಿರಿತಟದೊಳುದಯಿಸು- ।
ವದಿತಿಪ್ರಿಯಪುತ್ರನಲ್ಲದಿತ್ತೊರ್ವಂ ಭಾ- ॥
ನುದಲೊಗೆದನೆನಿಪ ತೇಜದ ।
ಪೊದಟ್ಕೆಯಿಂ ಜನದ ಮನಮನಲೆದಂ ಕರ್ಣಂ ॥ ೧ ॥

---

ಅವತರಣಿಕೆ ॥ ವೀರಪಟ್ಟವಾದ ಮರುದಿನ ಕರ್ಣನು ರಣರಂಗದಲ್ಲಿ ಶರಶಯನ ಗತನಾಗಿರ್ದ ಭೀಷ್ಮನನ್ನು ಕಂಡು ಅತನಲ್ಲಿ ಕ್ಷಮಾಪಣೆಯನ್ನು ಕೇಳಿಕೊಂಡು ಶಲ್ಯ ನನ್ನು ಸಾರಥಿ ಮಾಡಿಕೊಳ್ಳುವಂತೆ ಆತನಿಂದ ಸಲಹೆಯನ್ನೂ ಆಶೀರ್ವಾದವನ್ನೂ ಪಡೆದು ಸಂಗ್ರಾಮಭೂಮಿಗೆ ಬಂದು ಅಂದಿನ ಅನುವರದಲ್ಲಿ ಪಾಂಡವಬಲದೊಡನೆ ಕಾದಿ, ತನ್ನೊಡನೆ ಹೋಗಾಡಿದ ಪ್ರಭದ್ರಕಬಲವೆಲ್ಲವನ್ನೂ ಕೊಲ್ಲುವನು. ಅಂದಿ ನಿರುಳು ಆತನು ದುರ್ಯೋಧನನಲ್ಲಿಗೆ ಬಂದು ಗಾಂಗೇಯರು ಹೇಳಿದ ಅಭಿಪ್ರಾಯ ವನ್ನು ಆತನಿಗೆ ತಿಳಿಸಿದಾಗ, ಕೌರವೇಶ್ವರನು ಶಲ್ಯನನ್ನು ಕರ್ಣನಿಗೆ ಸಾರಥಿಯನ್ನಾಗಿ ಒಪ್ಪಿಸುವನು. ಇಷ್ಟು ಕಥಾಂಶವು ಈ ಸಪ್ತಮಾಶ್ವಾಸದಲ್ಲಿ ವರ್ಣಿತವಾಗಿದೆ.

ಉದಯಗಿರಿತಟದೊಳ್ — ಇಂತೆಂದು ಕಂದಂ ॥ ಉದಯಗಿರಿತಟದೊ ಳ್= ಉದಯಾಚಲದ ಬದಿಯಲ್ಲಿ, (ಮೂಡಣಗಿರಿಯ ಅಂಚಿನಲ್ಲಿ) ಉದಯಿಸುವ= ಮೂಡುವ, ಅದಿತಿಪ್ರಿಯಪುತ್ರನಲ್ಲದೆ= ಆದಿತ್ಯನಲ್ಲದೆ; (ಅದಿತಿಪ್ರಿಯಪುತ್ರನು= ಆದಿತ್ಯನು ಕಶ್ಯಪ ಋಷಿಗೆ ಅದಿತೀದೇವಿಯಲ್ಲಿ ಹುಟ್ಟಿದವನು.) ಇತ್ತ ಒರ್ವಂ ಭಾನು ಒಗೆದಂದಲ್ ಎನಿಪ= ಇತ್ತಲಿನ್ನೊಬ್ಬ ಆದಿತ್ಯನು ಮೂಡಿದನೆನಿಸುವ, ತೇಜದ ಪೊದಟ್ಕೆಯಿಂ= ಕಾಂತಿಯ ಅತಿಶಯದಿಂದ, ಕರ್ಣಂ, ಜನದ ಮನಮಂ ಅಲೆದಂ= ಜನಸಮೂಹದ ಮನಸ್ಸನ್ನು ಆಕರ್ಷಿಸಿದನು. [ಜನಶಬ್ದವಿದು ನೆಟ್ಟನೆ ನಪುಂಸಕ ಲಿಂಗಂ. ಅಲೆ (ಧಾತು) ಪರೀಭಾವ (ತಿರಸ್ಕರಿಸು) ಲೋಲನಯೋ —(ಚಲಿಸು) ಇಲ್ಲಿ 'ಚಲನೆ' ಎಂಬರ್ಥದಲ್ಲಿ 'ಮನಮನಲೆವುದು' ಚಿತ್ತಾಕರ್ಷಣವನ್ನು ಉಂಟು ಮಾಡುವುದು (ಉದಾ= ವಿದಗ್ಧಜನಮನಮನಲೆಯಲೆವೇಡಾ? ಆದಿಪುರಾಣ. ॥ ೧ ॥ ೬ ॥ ) ಆದಿತ್ಯಪುತ್ರನು ಆದಿತ್ಯನ ಉದಯಕಾಲದಲ್ಲಿ ಆದಿತ್ಯತೇಜದಿಂದ ಜನರಿ ದಿರಿಗೆ ಮನಂಗೊಳಿಸಿದನೆಂದು ತಾತ್ಪರ್ಯವು. ಉದಯಾಚಲದಲ್ಲಿ ಉದಯಿಸುವ ಅದಿತೀಪುತ್ರನಲ್ಲದೆ, ಇತ್ತಲಿನ್ನೊಬ್ಬ ಆದಿತ್ಯನು ಉದಯಿಸುತ್ತಲಿದ್ದಾನೆ ಎಂದು ಜನರು ತಿಳಿವಂತೆ ವಿಶೇಷವಾದತೇಜಸ್ಸಿನಿಂದ ಪ್ರಕಾಶಿಸಿದನು. ಉತ್ಪ್ರೇಕ್ಷಾಲಂಕಾರವು ॥ ೧ ॥

ವ ॥ ಆಗಳಾ ಚತುರ್ವೇದಪಾರಗರಪ್ಪ ಧರಾಮರರ್ಗೆ ನಿತ್ಯದಾನಮಂ ಕೊಟ್ಟು ಸಿಡಿಲ ಬಳಗಮನೊಳಕೊಂಡಂತೆ ತಟಿತಟಿಸಿ ಪೊಳೆವ ಕೆಯ್ದು ಗಳ್ ತೀವಿದ ವಾರುವದ ಬೋರಗುದುರೆಗಳೊಳ್ ಪೂಡಿದ್ಧ ಪಸು ರ್ವೊನ್ನ ರಥಮನೇಱಿ ಮುನ್ನೊರ್ವನೆ ಶರಶಯನದೊಳಿರ್ದ ಗಾಂಗೇ ಯನಲ್ಲಿಗೆ ಬಂದು ರಥದಿಂದಮಿೞಿದು ಮೂಱುಸೂೞ್ ಬಲವಂದು ತದೀಯಪಾದಪದ್ಮಂಗಳಂ ತಲೆಯೊಳಿಟ್ಟುಕೊಂಡು—

---

ಆಗಳ್—ಇಂತೆಂದು ವಚನಂ ॥ ಆಗಳ್ = ಆಗ, ಆಚತುರ್ವೇದಪಾರಗರ್ ಅಪ್ಪ = ಋಗ್ಯಜುಸ್ಸಾಮಾಥರ್ವಗಳೆಂಬ ನಾಲ್ಕು ವೇದಗಳ ತಡಿಯನ್ನು ಹೊಂದಿದವ ರಾದ (ನಾಲ್ಕು ವೇದಗಳಲ್ಲಿಯೂ ನಿಷ್ಣಾತರಾದವರು ಎಂದರ್ಥವು) ಧರಾಮರರ್ಗೆ = ಬ್ರಾಹ್ಮಣರಿಗೆ (ಧರಾ-ಭೂಮಿಯ; ಅಮರರ್ = ದೇವತೆಗಳು; ಬ್ರಾಹ್ಮಣರು ಭೂದೇ ವತೆಗಳೆಂದು ಪೂರ್ವಜರ ನಂಬಿಕೆ ) ನಿತ್ಯದಾನವುಂ ಕೊಟ್ಟು (ಕರ್ಣನು ಪ್ರತಿನಿತ್ಯವೂ ಹದಿನೆಂಟು ಕೋಟಿ ಸುವರ್ಣವನ್ನು ಬ್ರಾಹ್ಮಣರಿಗೆ ದಾನಮಾಡುತ್ತಿದ್ದನು. ರನ್ನನ ಗದಾ ಯುದ್ಧದಲ್ಲಿ- ("ಪ್ರತಿದಿನ ಪ್ರವರ್ತಿತಾಷ್ಟಾದಶ ಕೋಟಿಸುವರ್ಣದಾನಸಂತರ್ಪಿತಸಕಲ ಭೂಸುರಲೋಕನುಂ" । ೨ । ೧೭ ॥ ಎಂದು ಹೇಳಿದೆ) ಸಿಡಿಲ ಬಳಗವುಂ ಒಳಕೊಂ ಡಂತೆ ತಟಿತಟಿಸಿಪೊಳೆವ = ಸಿಡಿಲಿನ ಸಮೂಹವನ್ನೇ ಒಳಕೊಂಡ ಹಾಗೆ ತಳತಳನೆ ಹೊಳೆಯುವ, ಕೆಯ್ದುಗಳ್ ತೀವಿದ = ಆಯುಧಗಳು ತುಂಬಿದ ('ತೀವಿದ' ಎಂಬುದು ಮುಂದಿನ 'ರಥಮಂ' ಎಂಬುದಕ್ಕೆ ಪ್ರಥಮವಿಶೇಷಣವು) ವಾರುವದ = ಕುದುರೆಗಳ ಲಾಯದಲ್ಲಿದ್ದ (ವಾರುವ = ಅಶ್ವೌಘ (ಹೆಣ್ಣು ಕುದುರೆಗಳ ಸಮೂಹ) ವಾಡಿವ; ಬೋರಗುದುರೆಗಳೊಳ್ ಪೂಡಿದ = ಮಾಸಲು ಹಳದಿಬಣ್ಣದ ಕುದುರೆಗಳನ್ನು ಹೂಡಿದ ಪಸುರ್ವೊನ್ನರಥಮಂಏಱಿ = ಹಸುರು ಹೊನ್ನಿನ ರಥವನ್ನೇರಿ (ಮರಕತರತ್ನಗಳಕ್ಷೇಪ ಣದಿಂದ ಮಾಡಲ್ಪಟ್ಟ ಹೊನ್ನಿನ ರಥ) ಮುನ್ನ = ಮೊದಲಾಗಿ, ಒರ್ವನೇ = ಒಬ್ಬನೇ (ಏಕಾಂಗಿಯಾಗಿ); ಶರಶಯನದೊಳಿರ್ದ = ಶಸ್ತ್ರಗಳ ಮಂಚದಲ್ಲಿ ಮಲಗಿದ್ದ; ಗಾಂಗೇ ಯನಲ್ಲಿಗೆ ಬಂದು. ರಥದಿಂ ಇೞಿದು = ತೇರಿಂದ ಕೆಳಗಿಳಿದು, ಮೂಱುಸೂೞ್ ಬಲ ವಂದು = ಮೂರು ಬಾರಿ ಪ್ರದಕ್ಷಿಣೆಮಾಡಿ, ತದೀಯಪಾದಪದ್ಮಂಗಳಂ = ಆತನ ಚರಣ ಕಮಲಗಳನ್ನು; ತಲೆಯೊಳಿಟ್ಟುಕೊಂಡು = ತಲೆಯ ಮೇಲೆ ಇರಿಸಿಕೊಂಡು, (ಹಿಂದೆ ಭೀಷ್ಮರಿಗೆ ಪಟ್ಟಾಭಿಷೇಕವಾದಂದು ತಾನವರನ್ನು ಅಪಹಾಸ್ಯಮಾಡಿದುದಕ್ಕಾಗಿ ಆಂಮಾತಱಿಯದೆ ಇತ್ಯಾದಿ ವಚನಗಳಿಂದ ಕ್ಷಮಾಯಾಚನೆ ಮಾಡಿಕೊಳ್ಳುತ್ತಾನೆ. ॥

ಆನ್ಮಾತಱಿಯದೆ ಮುಳಿದುಂ ।
ನಿಮ್ಮಡಿಯಂ ನೋಯೆ ನುಡಿದೆನುಱದೇಳಿಸಲೇ- ॥
ನೆಮ್ಮಳವೆ ಮಱೆವುದಾ ಮನ- ।
ದುಮ್ಮಚ್ಚಮನಜ್ಜ ನಿಮ್ಮನೆರೆಯಲೆ ಬಂದೆಂ ॥ ೨ ॥

---

ಆನ್ಮಾತಱಿಯದೆ— ಇಂತೆಂದು ಕಂದಂ ॥ ಆಂಮಾತಱಿಯದೆ= ನಾನು ಮಾತಾಡಲರಿಯದೆ, ಯುಕ್ತಾಯುಕ್ತತೆಯನ್ನು ತಿಳಿಯದೆ ಮೂಢನಾಗಿ ಎಂದು ತಾತ್ಪರ್ಯವು) ಆನ್+ಮಾತಱಿಯದೆ ಕನ್ನಡದನುನಾಸಿಕಕ್ಕೆ ಪರಸವರ್ಣಾದೇಶ) ಅಥವಾ ಆನ್ ಎಂಬುದಕ್ಕೆ 'ಆಂ' ಆದೇಶವಾಗಿ ಬಳಿಕ ಬಿಂದುವಿಗೆ ವಿಕಲ್ಪದಿಂದ ಮಕಾರಾದೇಶವಾಗಿ 'ಆಮ್+ಮಾತಱಿಯದೆ'—ಆಮ್ಮಾತಱಿಯದೆ ಎಂದು ಸಂಧಿಯಾಯ್ತೆಂದು ಹೇಳಬೇಕು ) ಮುಳಿದುಂ= ಸಿಟ್ಟುಗೊಂಡೂ (ಮಾತಱಿಯದೆ ನುಡಿದೆಂ, ಮುಳಿದುಂ ನುಡಿದೆಂ ಎಂದು ವಿವರಿಸಬೇಕು. ಮಾತಱಿಯದೆ ನುಡಿದುದು ಮಾತ್ರವಲ್ಲದೆ ಕೋಪಿಸಿದುದು ಕೂಡ ಇದ್ದುದರಿಂದ 'ಮುಳಿದುಂ' ಎಂಬಲ್ಲಿ ಸಮುಚ್ಚಯಾರ್ಥದ 'ಉಂ' ಆವಶ್ಯಕವು ನಿಮ್ಮಡಿಯಂ= ತಮ್ಮನ್ನು ಪೂಜ್ಯಾರ್ಥದಲ್ಲಿ "ಅಡಿ"ಪದಪ್ರಯೋಗವು- ನಿಮ್ಮಡಿ-ನಿಮ್ಮ ಸನ್ನಿಧಾನವನ್ನು; ತಮ್ಮ ಸನ್ನಿಧಾನವನ್ನು, "ಇರದಡಿಯೆತ್ತಿಂ" ಎಂದು ಕರ್ಣನು ತಾಯೊಡನೆ ಹೇಳಿದ ಮಾತನ್ನು ಹೋಲಿಸಿರಿ ಹೊಸಗನ್ನಡದಲ್ಲಿ 'ಸನ್ನಿಧಾನದವರು' 'ಖಾವಂದರು' ಎಂಬಿತ್ಯಾದಿಯಾಗಿ ಪ್ರಭುಗಳನು ಸಂಬೋಧಿಸುವುದು ರೂಢಿಯಲ್ಲಿದ್ದಂತೆಯೇ ಈ ಪ್ರಯೋಗವಿದೆಯೆಂದು ತಿಳಿಯಬೇಕು) ನೋಯೆ ನುಡಿದೆಂ= ನೋಯುವಂತೆ ಮಾತಾಡಿದೆನು (ಕೆಡೆನುಡಿದೆಂ) ಎಂಬುದಕ್ಕೆ ಸಮಾನಾರ್ಥಕವು. ಉಱದೆ= ಲಕ್ಷ್ಯಮಾಡದೆ (ಉಱುಧಾತುವಿನ ನಿಷೇಧರೂಪವು 'ನೆಟ್ಟನೆ' ಎಂಬುದಕ್ಕೆ ಸಮಾನಾರ್ಥಕವು. "ಸಭಾಸದರನುಱದೆ ಬಂದಂ ಕರ್ಣಂ" ಎಂಬ ಪ್ರಯೋಗವನ್ನು ನೋಡಿರಿ) ಏಳಿಸಲ್= ನಿಂದಿಸಲಿಕ್ಕೆ [ಏಳಿಸು (ಧಾತು) ನಿಂದಿಸು, ಅಪಹಾಸ್ಯಮಾಡು] ಎಮ್ಮ ಅಳವೆ= ನಮ್ಮ ಸಾಮರ್ಥ್ಯವೆ ? (ಅಳವು= ಸಾಮರ್ಥ್ಯ, ಪ್ರಮಾಣ ನಿಮ್ಮ ಸನ್ನಿಧಾನವನ್ನು ನಿರ್ಲಕ್ಷ್ಯವಾಗಿ ನಿಂದಿಸುವುದಕ್ಕೆ ನಾನೆಷ್ಟರವನು ಎಂದು ತಾತ್ಪರ್ಯವು. ಎಮ್ಮಳವೆ ಎಂಬುದು ಎನ್ನಳವೆ ಎಂದಾಗಬೇಡವೆ ಎಂದರೆ 'ಎಮ್ಮ' ಎಂಬುದಕ್ಕೆ ನನ್ನಂತಹ ಜನರ ಎಂಬ ಸಮಾಧಾನವನ್ನು ಹೇಳಬೇಕು.) ಅಜ್ಜ= ಅಜ್ಜಾ (ಅಜ್ಜ (ಸಂ) ಆರ್ಯ. ಇಲ್ಲಿ ಭೀಷ್ಮನು ಕುಲವೃದ್ಧನಾದುದರಿಂದ ಅಜ್ಜಾ ಎಂದು ಸಂಬೋಧಿಸಲಾಗಿದೆ.) ಆ ಮನದ ಉಮ್ಮಚ್ಚಮಂ= ಆಮನಸ್ತಾಪವನ್ನು (ಉಮ್ಮಚ್ಚಂ= (ಸಂ) ಉನ್ಮತ್ಸರ ಮನಸ್ತಾಪ) ಮಱೆವುದು-ಮರೆತುಬಿಡಿರಿ, ನಿಮ್ಮಂ ಎರೆಯಲೆ ಬಂದೆಂ= ನಿಮ್ಮನ್ನು ಬೇಡಿಕೊಳ್ಳುವುದಕ್ಕಾಗಿಯೇ ಬಂದಿದ್ದೇನೆ. [ಎರೆ-ಯಾಚ್ಞಾಯಂ (ಬೇಡಿಕೊಳ್ಳು; ಎರೆ

ಧುರದೊಳ್ ನಿಮ್ಮಡಿಯುಂ ಗೆಲ- ।
ಲರಿಯವುವಮಾ ಪಾಂಡುಸುತರ ನೆಮ್ಮಂದಿಗರ- ॥
ಚ್ಚರಿಯಲ್ತೆ ಗೆಲ್ವರೆಂಬುದು ।
ಹರಿಗನೊಳಿಱಿದೆಂತುಮೆನ್ನ ಚಲಮನೆ ಮೆಱೆವೆಂ ॥ ೩ ॥

ವ ॥ ಎಂಬುದುಂ ಕುರುಪಿತಾಮಹನಹರ್ಪತಿಸುತನನಿಂತೆಂದಂ—

॥ ಅನವದ್ಯವೃತ್ತಂ ॥

ನುಡಿವುದಂ ಪತಿಭಕ್ತಿಯ ಪೆಂಪಿಂ ನೀಂ ನುಡಿದೈ ಪೆಱತಂದದಿಂ ।
ನುಡಿದೆಯಲ್ತೆ ಮದಾಯಮಮೋಘಂ ಸೂಟ್ಪಡೆಯಲ್ಕೆನಗಕ್ಕುಮಿ- ॥
ನ್ನಡೆಯೊಳೆಂದೆಮದೆಂದುದದೇಂ ತಪ್ಪಾದುದೆ ನಮ್ಮೊಪಜರ್ ಜಸಂ- ।
ಬಡೆದ ಭಾರ್ಗವರಪ್ಪುದಱಿಂದಂ ನಂಟರುಮಂಗಮಹೀಪತೀ ॥ ೪ ॥

---

(ನಾಮುಪದ)ಗಾಳದಮಾಂಸವು; ಪಶುಪಕ್ಷಿಗಳ ಆಹಾರವು, ಎಱೆ = ದ್ರವವನ್ನು ಹೊಯ್ಯು; ಸುರಿ ಸ್ವಾಮಿತ್ವದಲ್ಲಿಯೂ 'ಎಱೆ' = ಒಡೆತನವು] ॥ ೨ ॥

ಧುರದೊಳ್ — ಇಂತೆಂದು ಕಂದಂ ॥ ಧುರದೊಳ್ = ಯುದ್ಧದಲ್ಲಿ, ನಿಮ್ಮಡಿಯುಂ = ತಾವು ಕೂಡ, ಗೆಲಲ್ ಅರಿಯವುಂ = ಜಯಿಸಲು ಅಸಾಧ್ಯರಾದಂತಹ; ಆಪಾಂಡುಸುತರಂ = ಆ ಪಾಂಡುಪುತ್ರರಾದ ಯುಧಿಷ್ಠಿರಾದಿಗಳನು , ಎಮ್ಮಂದಿಗರ್ = ಎಮ್ಮಂತಹರು (ನಾವು ಸಾಮಾನ್ಯರು ಎಂದು ಹಿರಿಯರ ಮುಂದೆ ವಿನಯ ಪ್ರದರ್ಶನವು) ಗೆಲ್ವರೆಂಬುದು = ಜಯಿಸುವರೆಂಬುದು; ಅಚ್ಚರಿಯಲ್ತೆ = ಆಶ್ಚರ್ಯವಲ್ಲವೆ? [ಅಚ್ಚರಿ (ಸಂ) ಆಶ್ಚರ್ಯ] ಎಂತುಂ = ಹೇಗಾದರೂ; ಹರಿಗನೊಳ್ ಇಱಿದು = ವಿಕ್ರಮಾರ್ಜುನನೊಡನೆ ಹೋರಾಡಿ, ಎನ್ನ ಚಲಮನೆ ಮೆಱೆವೆಂ = ನನ ಛಲವನ್ನೇ ಮೆರೆಯುವೆನು [ಮೆಱೆ = (ವಿಡಂಬೇ) ಸಂಭ್ರಮದೋರು, ಮೆರೆಯು] ॥ ೩ ॥

ಎಂಬುದುಂ — ಇಂತೆಂದು ವಚನಂ ॥ ಎಂಬುದುಂ = ಕರ್ಣನು ಹೀಗೆಂದಾಗ, ಕುರುಪಿತಾಮಹಂ = ಕುರುಗಳಿಗೆ ಅಜ್ಜನಾದ ಎಂದರೆ ಕುರುಕುಲವೃದ್ಧನಾದ ಭೀಷ್ಮನು; ಅಹರ್ಪತಿಸುತನಂ = ದಿನಕರತನೂಜನಾದ ಕರ್ಣನನ್ನು ಕುರಿತು; ಇಂತೆಂದಂ = ಹೀಗೆಂದನು

ನುಡಿವುದಂ — ಇಂತೆಂದು ಅನವದ್ಯವೃತ್ತಂ ॥ ಅಂಗಮಹೀಪತೀ = ಎಲೆ ಅಂಗಾಧಿಪನಾದ ಕರ್ಣನೇ; ನುಡಿವುದಂ = ಹೇಳುವುದನ್ನು; ಪತಿಭಕ್ತಿಯಪೆಂಪಿಂ = ಸ್ವಾಮಿಭಕ್ತಿಯ ಹೆಮ್ಮೆಯಿಂದ; ನೀಂ ನುಡಿದೈ = ನೀನು ಹೇಳಿದೆ; ಪೆಱತಂದದಿಂ = ಬೇರೆ ರೀತಿಯಿಂದ, ನುಡಿದೆಯಲ್ತೆ = ಹೇಳಿದೆಯಲ್ಲವೆ; (ನುಡಿದೆ+ಅಲ್ತು+ಎ) ಹೇಳಿದ್ದು ಅಲ್ಲವೇ

ವ || ಅದಲ್ಲದೆಯುಂ ನೀನೆಮಗೆ ಕುಂತಿಯು ಗಾಂಧಾರಿಯು ಮಕ್ಕಳ ಲೆಕ್ಕದೆ
ಮೊಮ್ಮನಯ್ —

---

ಅಲ್ಲ ಮದಾಯುಂ (ಮತ್ + ಆಯುಂ) = ನನ್ನ (ಶಕ್ತಿ) ಸಾಮರ್ಥ್ಯವು; ಅಮೋಘಂ = ಶ್ರೇಷ್ಠವಾದುದು, (ವ್ಯರ್ಥವಲ್ಲದುದು) (ಮೋಘವೆಂದರೆ = ವ್ಯರ್ಥವಾದುದು, ಮೋಘ್ನ ವಲ್ಲದುದು – ಅಮೋಘವು, ನಮೋಘ = ಅಮೋಘ = ನಞ್‌ತತ್ಪುರುಷ ಸಮಾಸವು) ಇನ್ನೆಡೆಯೊಳ್ ಸೂಟಿಸ್ ಪಡೆಯಲ್ಕೆ ಎನಗೆ ಅಕ್ಕುಂ ಎಂದೆಂ = ಇನ್ನೀಯೆಡೆಯಲ್ಲಿ (ನನ್ನ ಸಾಮರ್ಥ್ಯಪ್ರಕಟಣೆಗೆ) ಅವಸರವನ್ನು ಪಡೆಯಲಿಕ್ಕೆ ಎನಗೆ ಸಾಧ್ಯವುಂಟು ಎಂದು (ನಾನು ಹೇಳಿದೆನು, ಅದೇಂತಪ್ಪಾಯ್ತೇ = ನಾನು ಹೇಳಿದುದು ತಪ್ಪಾಯ್ತೆ; ನಮ ಒವಜರ್ = ನಮ್ಮ ಉಪಾಧ್ಯಾಯರು (ವಿದ್ಯಾಗುರುಗಳು, 'ಉಪಾಧ್ಯಾಯ' 'ಉವ ಜ್ಝಂ' ಎಂದು ಪ್ರಾಕೃತದಲ್ಲಿದ್ದುದು "ಒವಜಂ" ಎಂದು ಕನ್ನಡದಲ್ಲಿ ತದ್ಭವವಾಗಿದೆ. ಅದೇ ರೂಪಾಂತರ ಹೊಂದಿ 'ಓಜಂ' ಎಂದಾಗಿದೆ ಪಂಪನು ನಾಡೋಜನೆಂದು ಪ್ರಸಿದ್ಧಿಯುಂಟು, ದ್ರೋಣನು 'ಬಿಲ್ಲೊವಜಂ') ಜಸಂಬಡೆದ = ಕೀರ್ತಿಪಡೆದ; (ಜಸ ಮುಂಪಡೆದ = ಜಸಂಬಡೆದ, ಜಸವಡೆದ) ಭಾರ್ಗವರಪ್ಪುದರಿಂದಂ = ಪರಶುರಾಮ ರಾದುದರಿಂದ ('ಭಾರ್ಗವರ್' ಗೌರವಾರ್ಥದಲ್ಲಿ ಬಹುವಚನಪ್ರಯೋಗವು; ಭೃಗುವಿನ ವಂಶದಲ್ಲಿ ಹುಟ್ಟಿದವನಾದುದರಿಂದ ಪರಶುರಾಮನು ಭಾರ್ಗವನು) ನಂಟರುಂ = (ನಾವು) ಬಂಧುಗಳೂ (ಆಗಿದ್ದೇವೆಂದು ಯೋಚಿಸಿಕೊಳ್ಳುದು, ಒಬ್ಬರೇ ಗುರುಗಳ ಶಿಷ್ಯರಾದುದ ರಿಂದ ನಾವಿರ್ವರೂ ನಂಟರಾಗಿರುವೆವು ಎಂದು ತಾತ್ಪರ್ಯವು) ಅಂಗರಾಜಾ, ನೀನು ಆ ದಿನ ಏನೋ ತಪ್ಪಿ ಮಾತಾಡಿದೆನೆಂದು ಹೇಳಿದೆಯಲ್ಲಾ, ಆ ಕುರಿತು ನನಗೇನೂ ಮನ ಸ್ತಾಪವಿಲ್ಲ, ನೀನು ಸ್ವಾಮಿಭಕ್ತಿಯ ಹೆಮ್ಮೆಯಿಂದ ಹಾಗೆ ನುಡಿದೆ, ಮತ್ತು ಹಾಗೆ ನುಡಿಯಬೇಕಾಗಿದ್ದುದನ್ನು ಬೇರೊಂದು ರೀತಿಯಿಂದ ನುಡಿದೆಯಷ್ಟೆ; ಅಥವಾ ಬೇರೆ ರೀತಿಯಿಂದ ಎಂದರೆ ನನ್ನನ್ನು ಧಿಕ್ಕರಿಸಬೇಕೆಂಬ ಅಭಿಪ್ರಾಯದಿಂದ ಹೇಳಿದು ಅಲ್ಲವೇ ಅಲ್ಲವು ಹಾಗೆ ಹೇಳಿದುದರಿಂದ ಏನಾಯ್ತು ? ನಾನು ಕೂಡ ನನ್ನ ಸಾಮರ್ಥ್ಯವನ್ನು ಪ್ರದರ್ಶಿಸುವುದಕ್ಕೆ ತಕ್ಕ ನುಡಿಗಳನ್ನು ಆಗಲೇ ಹೇಳಿದೆನಲ್ಲವೆ? ಯುದ್ಧದಲ್ಲಿ ನನ್ನ ಸಾಮ ರ್ಥ್ಯವನ್ನು ಕಾಣಲಾಗುವುದೊದು ನಾನು ಮಾಡಿದ ಪ್ರತಿಜ್ಞೆಯಂತೆ ನಾನು ನಡೆಯು ಲ್ಲವೆ? ನೀನು ನೋಡಿಲ್ಲವೆ? ನಾನು ಹಾಗೆಂದುದಕ್ಕೆ ಏನಾದರೂ ತಪ್ಪಿದುದುಂಟೆ? ನಮ ಗಿಬ್ಬರಿಗೂ ಕೀರ್ತಿವಂತರಾದ ಪರಶುರಾಮಮುನೀಶ್ವರರೇ ಗುರುಗಳಾಗಿರುವುದರಿಂದ ನಮ್ಮೊಳಗೆ ಬಾಂಧವ್ಯವಿಲ್ಲವೆ ? ಎಂದು ಭೀಷ್ಮನ ಮಾತಿನ ಅಭಿಪ್ರಾಯವು || ಅನವದ್ಯ ವೃತ್ತಕ್ಕೆ ಲಕ್ಷಣ = ನಭಭಮಂಸಸಲಂಗಮು ಮೊಪ್ಪಲ್ ಪೇಳ್ಪರಾ ಅನವದ್ಯಮಂ||ಳ||

ಅದಲ್ಲದೆಯುಂ — ಇಂತೆಂದು ವಚನಂ || ಅದಲ್ಲದೆಯುಂ = ಅಷ್ಟು ಮಾತ್ರ

ನಿನ್ನನೆ ನಚ್ಚಿದಂ ಕುರುಮಹೀಪತಿ ನಿನ್ನ ಶರಾಳಿಗಳ್ಗೆ ಮು– ।
ನ್ನನ್ನಡುಗುತ್ತುಮಿರ್ಪುದರಿಸಾಧನಸಂಪದಮಂತೆ ಶಸ್ತ್ರಸಂ– ॥
ಪನ್ನನೆ ಆಗಿ ಶಲ್ಯನನೆ ಸಾರಥಿಯಾಗಿರೆ ಮಾಡಿ ಕಾದು ನೀಂ ।
ನಿನ್ನಯ ಬಲ್ಲಮಾಟ್ಕೆಯೊಳಿದಂ ನುಡಿದೆಂ ನಿನಗಂಗವಲ್ಲಭಾ ॥ ೫ ॥

ಎನೆ ನೆಗಟ್ದ* ಕುಲದ ಚಲದೊ– ।
ಳ್ಪಿನ ಭೂಪನನೆನಗೆ ತೇರನೆಸಗೆಂದೊಡೆ ಸ– ॥
ದ್ವಿನಯಮುಟಿದುರ್ಕಿ ಕುಲಹೀ– ।
ನನೆಂಬ ಪರಿವಾದಮೊಗಳೆನಗಾಗಿರದೇ ॥ ೬ ॥

---

ವಲ್ಲದೆಯೂ; ನೀನೆಮಗೆ, ಕುಂತಿಯ ಗಾಂಧಾರಿಯ ಮಕ್ಕಳಲಿಕ್ಕದೆ ಮೊಮ್ಮನಯ್ = ನೀನು ನಮಗೆ ಕುಂತೀಪುತ್ರರ ಹಾಗೂ ಗಾಂಧಾರಿಯ ಮಕ್ಕಳ ಹಾಗೆ ಮೊಮ್ಮಗನಾಗಿರುವೆ.

ನಿನ್ನನೆ ನಚ್ಚಿದಂ — ಇಂತೆಂದು ಉತ್ಪಲಮಾಲಾವೃತ್ತಂ ॥ ಕುರುಮಹೀಪತಿ = ಕೌರವೇಶ್ವರನು; ನಿನ್ನನೆ ನಚ್ಚಿದಂ = ನಿನ್ನನ್ನೇ ನಂಬಿದನು; ನಿನ್ನ ಶರಾಳಿಗಳ್ಗೆ = ನಿನ್ನ ಬಾಣಪರಂಪರೆಗೆ, ಅರಿಸಾಧನಸಂಪದಂ = ಶತ್ರುಸೈನ್ಯಸಂಪತ್ತು, ಮುನ್ನಂ ನಡುಗುತ್ತುಮಿರ್ಪುದು = ಮೊದಲೇ ಹೆದರಿ ನಡುಗುತ್ತಿರುವುದು, ಅಂಗವಲ್ಲಭಾ = ಅಂಗರಾಜನೇ, ಅಂತೆ ಶಸ್ತ್ರಸಂಪನ್ನನೆ ಆಗಿ = ಹಾಗೆ ಶಸ್ತ್ರಸಂಪತ್ತುಳ್ಳವನೇ ಆಗಿ, [ಸಂಪನ್ನನೆ ಆಗಿ– ಇಲ್ಲಿ ·ಅವಧಾರಣದ ಎಕಾರಕ್ಕೆ ಸ್ವರಪರವಾದಲ್ಲಿ ಸಂಧಿಯಿಲ್ಲ ದೊರೆವೆತ್ತವಧಾರಣಮುಂ ಸ್ವರೂಪದಿಂ ನಿಲ್ಕುಂ ಅವಿಕೃತಂ ॥ ಶಬ್ದಸ್ಮೃತಿ ॥ "ಅವಿಕೃತಿಗಳೆವರ್ಣಮೊವ । ರ್ಣಮಂತ್ಯವೆನಿಸಿದ ನಿಪಾತಮವಧಾರಣೆತ । ಳ್ತವಿಶಂಕೆಗಳೆಂಬಿವಱೊಳ್, ವ್ಯವಹರಿಸದು ಸಂಧಿಯೊಳ್ಪುತಕ್ಕಮಭಾವಂ ॥ ಶ. ಮ ದ. ಸೂ ॥ ೫೬ ॥] ಶಲ್ಯನನೆ ಸಾರಥಿಯಾಗಿರೆ ಮಾಡಿ = ಶಲ್ಯನನ್ನು ನಿನಗೆ ಸಾರಥಿಯಾಗುವಂತೆ ಮಾಡಿ; ನಿನ್ನಯ ಬಲ್ಲ ಮಾಟ್ಕೆಯೊಳ್ = ನಿನ್ನಿಂದ ಸಾಧ್ಯವಿದ್ದ ರೀತಿಯಲ್ಲಿ, ನೀಂಕಾದು = ನೀನು ಹೋರಾಡು; ನಿನಗೆ ಇದಂ ನುಡಿದೆಂ = ನಿನಗಿದನ್ನು ಹೇಳಿದ್ದೇನೆ; ನಾನೀಗ ನುಡಿದುದನ್ನು ಎಂದರೆ ಶಲ್ಯನನ್ನು ಸಾರಥಿಯಾಗಿ ಮಾಡಿಕೊಳ್ಳಬೇಕಾದ ಮುಖ್ಯವಿಷಯವನ್ನು ನೀನು ಅವಶ್ಯವಾಗಿ ಲಕ್ಷ್ಯದಲ್ಲಿ ಇಡತಕ್ಕದ್ದೆಂದು ಭೀಷ್ಮನ "ಇದಂ ನುಡಿದೆಂ ನಿನಗಂಗವಲ್ಲಭಾ" ಎಂಬ ಮಾತಿನ ಗೂಢಭಾವವು ॥ ೫ ॥

ಎನೆ — ಇಂತೆಂದು ಕಂದಂ ॥ ಎನೆ = ಹೀಗೆ (ಭೀಷ್ಮನು) ನುಡಿಯಲು; ನೆಗಟ್ದ ಕುಲದ ಚಲದ ಒಳ್ಪಿನ ಭೂಪನಂ = ಪ್ರಸಿದ್ಧಕುಲೋತ್ಪನ್ನನಾಗಿ ಒಳ್ಳೆ ಚಲವುಳ್ಳ ಮದ್ರಾಧಿಪನನ್ನು; ಎನಗೆತೇರೆಸಗು ಎಂದೊಡೆ = ನನ್ನ ತೇರನ್ನು ನಡೆಯಿಸಬೇಕೆಂದು

ಆಯದ ಕಟ್ಟಾಳ್ ನೀಂ ಮೊದ- ।
ಲೀಯುಗದೊಳ್ ಪೆಱರುಮೊಳರೆ ಸಾವಕ್ಕೆ ಜಯ- ॥
ಶ್ರೀಯಕ್ಕೆ ಧಾತ್ರನಿಂ ಕ- ।
ಟ್ಟಾಯದ ಬಟಿಸಂದು ನಿಮ್ಮನಾಂ ಮೆಚ್ಚಿಸುವೆಂ ॥ ೭ ॥

ವ ॥ ಎಂಬುದುಂ ಸಿಂಧುತನೂಜನಂಗಾಧಿರಾಜನ ನಯದ ವಿನಯದ ಪಾಟಿಯ ಪಸುಗೆಯ ನುಡಿಗಳ್ಗೆ ಮನದೇಗೊಂಡೀತಂ ಕುಲಹೀನನಲ್ಲನು ಭಯಕುಲವಿಶುದ್ಧನಾಗಲೆವೇಟ್ಕುಮೆಂದು ನಿಶ್ಚೈಸಿ ನೀನೆಮಗೆಂಬುಕೆಯ್ವೊಡಂ ಸುಯೋಧನನ ರಾಜ್ಯಮನೊಲ್ವೊಡಂ ಶಲ್ಯನನೆ ಸಾರಥಿ ಮಾಡಿ ಕಾದುವುದೆಂದು ಪರಸಿ ಪೋಗೆಂಬುದುಂ ಮಹಾಪ್ರಸಾದ ಮೆಂದು ಪೊಡೆಮಟ್ಟು ಸಂಗ್ರಾಮಭೂಮಿಗೆ ವಂದು ಹಸ್ತ್ಯಶ್ವರಥಪದಾತಿಬಲಂಗಳನೊಂದುಮಾಡಿ ಮಕರವ್ಯೂಹಮನೊಡ್ಡಿದಂ. ಪಾಂಡವ

---

ಕೇಳಿಕೊಂಡರೆ, ಸದ್ವಿನಯಂ ಉಟಿದು = (ಸತ್ + ವಿನಯ) ಒಳ್ಳೆ ವಿನಯದ ನಡತೆಯನ್ನು ಬಿಟ್ಟು, ಉರ್ಕಿ = ಗರ್ವಪಟ್ಟು; ಕುಲಹೀನನೆಂಬ ಪರಿವಾದಂ = ನನಗೆ ಕುಲಹೀನನೆಂಬ ಅಪಖ್ಯಾತಿಯು; (ಪರಿವಾದ ಅಥವಾ ಪರೀವಾದ = ಅಪಕೀರ್ತಿ) ಎನಗೆ ಈಗಳ್ ಆಗಿರದೇ = ನನಗೆ ಈಗಲೇ ಉಂಟಾಗಲಾರದೆ? (ಕುಲೀನನೂ ಶೂರನೂ ಆದ ಮದ್ರಭೂಪತಿಯನ್ನು ನನ ಸಾರಥಿಯಾಗೆಂದು ವಿನಯವನ್ನು ಮೀರಿ ನಾನು ಕೇಳಿಕೊಂಡರೆ ನಿಜವಾಗಿಯೂ ನನಗೆ ಕುಲಹೀನನೆಂಬ ಅಪಖ್ಯಾತಿಯು ಈಗಲೇ ಉಂಟಾಗದೇ ಎಂದು ಕರ್ಣನ ಅಭಿಪ್ರಾಯವು ॥ ೬ ॥

ಆಯದ — ಇಂತೆಂದು ಕಂದಂ ॥ ಈ ಯುಗದೊಳ್ = ಈ ಯುಗದಲ್ಲಿ, ಮೊದಲ್ ನೀಂ ಆಯದ ಕಟ್ಟಾಳ್ = ಪ್ರಥಮದಲ್ಲಿ ನೀವು ಮಹಾಸಮರ್ಥರಾದ ಶೂರರು, (ಈ ಯುದ್ಧದಲ್ಲಿ ನೀವೇ ಶೂರರಲ್ಲಿ ಅಗ್ರಗಣ್ಯರು ಎಂದು ತಾತ್ಪರ್ಯವು) ಪೆಱರುಂ ಒಳರೆ = ಬೇರೆಯವರು ಉಂಟೆ? (ಇಲ್ಲವೆಂದರ್ಥವು) ಧಾತ್ರನಿಂ ಸಾವು ಅಕ್ಕೆ, ಜಯಶ್ರೀ ಅಕ್ಕೆ = ವಿಧಿಯಿಂದ ಸಾವಾಗಲಿ, ಗೆಲವಾಗಲಿ (ಜಯಶ್ರೀ = ಜಯಸಂಪತ್ತು) ಸೋಲ ಗೆಲವುಗಳು ವಿಧಿಯೆಣಿಸಿದಂತಾಗಲಿ ಎಂದು ಭಾವವು) ಕಟ್ಟಾಯದ ಬಟಿಸಂದು = ಕಡುಪರಾಕ್ರಮಕ್ರಮವನ್ನು ಅನುಸರಿಸಿ (ಕಡಿದು + ಆಯ = ಕಟ್ಟಾಯ, ಬಟಿಸಲ್ = ಅನುಸರಿಸು) ನಿಮ್ಮಂಅಂ ಮೆಚ್ಚಿಸುವೆಂ = ನಿಮ್ಮನ್ನು ನಾನು ಮೆಚ್ಚಿಸುವೆನು ॥ ೭ ॥

ಎಂಬುದುಂ — ಇಂತೆಂದು ವಚನಂ ॥ ಎಂಬುದುಂ = ಕರ್ಣನು ಹೀಗೆನ್ನಲು; ಸಿಂಧುತನೂಜಂ = ಭೀಷ್ಮನು; ಅಂಗಾಧಿರಾಜನ = ಕರ್ಣನ; ನಯದ ವಿನಯದ

ಪತಾಕಿನಿಯುಮರ್ಧಚಂದ್ರವ್ಯೂಹಮನೊಡ್ಡಿನಿಂದುದು. ಅಂತುಭಯ ಬಲದ ಚತುರ್ವರ್ಗಂಗಳೊಂದೊಂದಱೊಳ್ ಕಾದೆ ನಟ್ಟ ಸರಲ್ವಿಡಿದು ಕರಗದ ಧಾರೆಯಂತೆ ಸುರಿವ ನೆತ್ತರಧಾರೆಗಳಂಬಿರಿವಿಡುವಿನಂ ಕೆನ್ನೆತ್ತರೊಳ್ ಮೆತ್ತಿ ರೂಪಱಿಯಲಾಗದಂತಿರ್ದ ವೀರಭಟರಗುರ್ವಂ ಪಡೆಯೆ ಕರ್ಣನನೇಕವಿಕರ್ಣಕೋಟಿಗಳಿಂ ಪಾಂಡವಬಲಮನಸುಂಗೊಳೆ ಕಾದುದಲ್ಲಿ ಅಂದಿನನುವರದೊಳ್ ಪಾಂಡವಬಲಜಳನಿಧಿಯಂ ಬಡಬಾನಳನಳುರ್ವಂತಳುರ್ದು ತನ್ನೊಳ್ ಪೋಗದೆ ಪೆಣೆದ ಪ್ರಭದ್ರಕಬಲಮೆಲ್ಲಮಂ ಕೊಂದಂ. ಅಂದು ಪತಂಗಮಂಡಲಮಪರಗಿರಿತಟಮನೆಯ್ದುವುದುಮೆರಡುಂ ಪಡೆಗಳಪಹಾರತೂರ್ಯಂಗಳಂ ಬಾಜಿಸಿ ತಂತಮ್ಮ ಬೀಡುಗಳ್ಗೆ ಪೋದಾಗಳ್ ರಾಜರಾಜನಲ್ಲಿಗಂಗರಾಜಂ ಬಂದು ಹಯೋಪಾಯಕುಶಲರಪ್ಪ ಗಾಂಗೇಯರಱಿಪಿದ ಮಾತನೇಕಾಂತದೊಳಱಿವುದುಂ ತ್ರಿಣೇತ್ರನೊಳ್ ಕಲ್ತತ್ವಹೃದಯದೊಳಂ ರಥಕಲ್ಪದೊಳಂ ಶಲ್ಯಂ ಮುರಾಂತಕಂಗಂ ಪ್ರವೀಣನಪ್ಪುದಱಿಂದಾತನನೆಂತಾನುಮೊಡಂಬಡೆ ನುಡಿದು ನಿನಗೆ ಸಾರಥಿಮಾಡುವೆನೆಂದು ದಿನಕರತನೂಜನಂ ಬೀಡಿಂಗೆ ಪೋಗಲ್ವೇೞ್ದು ರಾಜರಾಜಂ ಮದ್ರರಾಜನ ಮನೆಗೆ ಬರ್ಪುದುಮಾತನತ್ಯಂತಸಂಭ್ರಮಾಕ್ರಾಂತಹೃದಯನಾಗಿ ಬೇಗಮಿದಿರೇೞ್—

---

ಪಾೞಿಯ ಪಸುಗೆಯ ನುಡಿಗಳ್ಗೆ=(ಪಾೞಿಯ=ನ್ಯಾಯವಾದ; ಪಸುಗೆಯ=ಕ್ರಮಬದ್ಧವಾದ) ಮನದೇಗೊಂಡು=ಮನಸ್ಸಿನಲ್ಲಿ ಒಪ್ಪಿಕೊಂಡು (ಮನವೊಚ್ಚಿದವನಾಗಿ) ಈತಂ ಕುಲಹೀನನಲ್ಲಂ; ಉಭಯಕುಲವಿಶುದ್ಧನಾಗಲೆವೇೞ್ಕುಂ=ಈತನು ಕುಲಹೀನನಲ್ಲ; ಪಿತೃಕುಲ ಮಾತೃಕುಲಗಳೆಂಬ ಉಭಯಕುಲಗಳ ದೃಷ್ಟಿಯಿಂದಲೂ ಶುದ್ಧನಾಗಿರಲೇ ಬೇಕು (ತಂದೆಯ ದೆಸೆಯನ್ನು ಬಗೆದರೂ ತಾಯ ದೆಸೆಯನ್ನು ಬಗೆದರೂ ಸತ್ಕುಲೀನನೆಂದೆಣಿಸಲ್ಪಡತಕ್ಕವನೇ ಆಗಿರಬೇಕು (ಬೇಡುಗುಂ-ಬೇೞ್ಕುಂ., ಆಗಲೆ ಬೇೞ್ಕುಂ=ಆಗಲೆವೇೞ್ಕುಂ) ಹೊಸಗನ್ನಡದಲ್ಲಿ ಆಗಲೇ ಬೇಕು ಎಂದು=ಹೀಗೆಂದು (ಯೋಚಿಸಿಕೊಂಡು) ನೀನೆಮಗೆಂಬುಕೆಯ್ವೊಡಂ=ನೀನು ನಮ್ಮ ಮಾತಿನಂತೆ ನಡೆಯುವುದಿದ್ದರೂ (ಎಂಬುಕೆಯ್ದಂ=ಎಂದುದಂ ಮಾಡಿದಂ) 'ನೀನೆಮಗಿಂಬುಕೆಯ್ವೊಡಂ' ಎಂಬ ಪಾಠವಿದ್ದರೂ 'ನೀನೆಮಗೆಂಬುಕೆಯ್ವೊಡಂ' ಎಂದಿರುವುದೇ ಸೂಕ್ತವೆಂದು ಇಲ್ಲಿ ಪಾಠಾಂತರವಾಗಿ ಮಾರ್ಪಡಿಸಿದೆ) ಸುಯೋಧನನ ರಾಜ್ಯಮಂ ಒಲ್ವೊಡಂ=ಸುಯೋಧನನಿಗೆ ರಾಜ್ಯವಾಗುವುದನ್ನು ಒಲ್ಲುವುದಿದ್ದರೂ (ಯುದ್ಧ

ದಲ್ಲಿ ಜಯವನ್ನು ಸಂಪಾದಿಸಿ ದುರ್ಯೋಧನನಿಗೆ ರಾಜ್ಯವು ಸ್ಥಿರವಾಗುವಂತೆ ಮಾಡುವ ಇಚ್ಛೆ ನಿನಗಿದ್ದರೆ ಎಂದು ತಾತ್ಪರ್ಯವು) ಶಲ್ಯನನೆ ಸಾರಥಿಯಾಗಿ ಮಾಡಿ ಕಾದು ಎಂದು ಪರಸಿ ಆಶೀರ್ವದಿಸಿ, ಪೋಗೆಂಬುದುಂ=ಹೋಗೆಂದಾಗ; (ಕಳಿಸಿ ಕೊಟ್ಟಾಗ) ಮಹಾಪ್ರಸಾದಂ ಎಂದು ಪೊಡೆಮಟ್ಟು=ತಮ್ಮ ಅನುಗ್ರಹವು (ಅಪ್ಪಣೆ) ಎಂದು ನಮಸ್ಕರಿಸಿ; ಸಂಗ್ರಾಮಭೂಮಿಗೆ ವಂದು=ರಣರಂಗಕ್ಕೆ ಬಂದು; ಹಸ್ತ್ಯಶ್ವ ರಥಪದಾತಿಬಲಂಗಳಂ ಒಂದು ಮಾಡಿ=ಆನೆ ಕುದುರೆ ತೇರು ಕಾಲಾಳುಗಳೆಂಬ ಸೈನ್ಯಗಳನ್ನು ಒಟ್ಟುಗೂಡಿಸಿ; ಮಕರವ್ಯೂಹಮಂ ಒಡ್ಡಿದಂ=ಮೊಸಳೆಯ ಆಕಾರ ದಲ್ಲಿ ಸೇನೆಯನ್ನು ನಿಲ್ಲಿಸಿದನು (ವ್ಯೂಹ=ಸಮೂಹವಾಗಿ ಸೈನ್ಯವನ್ನು ನಿಲ್ಲಿಸುವ ರೀತಿ ಸೇನಾನಾಯಕನು ಸೈನ್ಯವನ್ನು ಬೇರೆ ಬೇರೆ ಆಕೃತಿಗಳಲ್ಲಿ ನಿಲ್ಲಿಸುವ ರೂಢಿ ಯಲ್ಲಿ ಮಕರವ್ಯೂಹ, ಚಕ್ರವ್ಯೂಹ, ಪದ್ಮವ್ಯೂಹ, ಗೃಧ್ರವ್ಯೂಹ ಮುಂತಾದುವು ಪುರಾಣಗಳಲ್ಲಿ ಹೇಳಲ್ಪಟ್ಟಿವೆ ) ಪಾಂಡವ ಪತಾಕಿನಿಯುಂ=ಪಾಂಡವರ ಸೇನೆಯೂ (ಪತಾಕಿನಿ, ಧ್ವಜಿನಿ, ರಥಿನಿ ಇವು ಸಮಾನಾರ್ಥಕಗಳು) ಅರ್ಧಚಂದ್ರವ್ಯೂಹಮಂ ಒಡ್ಡಿನಿಂದುದು=ಅರ್ಧಚಂದ್ರಾಕೃತಿಯಲ್ಲಿ ಬಲಿದು ನಿಂತಿತು. ಅಂತು ಉಭಯ ಬಲದ ಚತುರ್ಬಲಂಗಳ್=ಹಾಗೆ ಎರಡು ಕಡೆಗಳಲ್ಲಿರುವ ಹಸ್ತ್ಯಶ್ವ ರಥ ಪದಾತಿ ಗಳೆಂಬ ನಾಲ್ಕು ತೆರದ ಸೇನೆಗಳೂ; ಒಂದು ಒಂದರೊಳ್ ಕಾದೆ=ಒಂದು ಮತ್ತೊಂದರೊಡನೆ ಹೀಗೆ ಪರಸ್ಪರ ಹೋರಾಡಲು;ನಟ್ಟಸರಲ್ವಿಡಿದು=ನಾಟಿಕೊಂಡ ಬಾಣದೊಡನೆ; ಕರಗದ ದಾರೆಯಂತೆ=ಸುರಿವಪಾತ್ರದ ನೀರಧಾರೆಯ ಹಾಗೆ; ಕರಗ (ಸಂ) ಕರಕ (ನೀರುಹೊರುವ ಮಡಕೆ; ದೇವಾಸುರ ಯುದ್ಧಕ್ಕೆ ಕರಗಂಬೊತ್ತಂತೆ) ನೆತ್ತರ ಧಾರೆಗಳ್ ಅಂಬಿರಿವಿಡುವಿನಂ=ರಕ್ತಧಾರೆಗಳು ಪ್ರವಹಿಸುತ್ತಿರಲು; [ಅಂಬಿರಿ ವಿಡು-(ಧಾತು) ಧಾರಾಕಾರವಾಗಿ ಪ್ರವಹಿಸು—ಉದಾ ತೊರೆದ ಕುಚಯುಗಳ ಮಂದಂಬಿರಿವೊಡೆ ॥ ಪಂ ಭಾ ೯।೭೪॥] ಕೆನ್ನೆತ್ತರೊಳ್ಮೆತ್ತಿ=ಕೆನ್ನೆತ್ತರಲ್ಲಿ ಚೆನ್ನಾಗಿ ಅಂಟಿಕೊಂಡು; [ಕೆಚ್ಚನೆ+ನೆತ್ತರ್=ಕೆನ್ನೆತ್ತರ್=ಕ ಸ ಮೆತ್ತು (ಧಾತು) ಅಂಟಿ ಕೊಳ್ಳು], ರೂಪಱಿಯಲಾಗದಂತಿರ್ದ ಭಟರ್=ಕುರ ಹು ತಿಳಿಯದಂತಿದ್ದ ವೀರ ಯೋಧರು; ಅಗುರ್ವಂ ಪಡೆಯೆ=ಭೀಕರತೆಯನ್ನು ಪಡೆದಿರಲು; (ಭಯಂಕರ ರಾಗಿ ತೋರುತ್ತಿರಲು) ಕರ್ಣಂ=ಕರ್ಣನು; ಅನೇಕ ವಿಕರ್ಣಕೋಟಿಗಳಿಂ=ಹಲವು ಕೋಟಿ ಬಾಣಗಳಿಂದ, (ವಿಕರ್ಣ=ಅಸ್ತ್ರವು) ಪಾಂಡವಬಲಮಂ ಅಸುಂಗೊಳೆಕಾದು ವಲ್ಲಿ=ಪಾಂಡವಸೈನ್ಯವು ಶಕ್ತಿಗುಂದುವಂತೆ ಹೋರಾಡುತ್ತಿರುವಲ್ಲಿ; ಅಂದಿನ ಅನು ವರದೊಳ್=ಆ ದಿವಸದ ಕಾಳೆಗದಲ್ಲಿ; ಪಾಂಡವಬಲಜಳನಿಧಿಯುಂ=ಪಾಂಡವ ಸೇನಾಸಮುದ್ರವನ್ನು; ಬಡವಾನಳಂ ಆಳುರ್ವಂತೆ=ವಡವಾಗ್ನಿಯು ವ್ಯಾಪಿಸುವ ಹಾಗೆ; ಪಾಂಡವಬಲವನ್ನು ಜಳನಿಧಿಯೆಂದು ರೂಪಿಸಿದುದರಿಂದ ಕರ್ಣನ ಅನೇಕ

ವಿಕರ್ಣ ಕೋಟಿಗಳನ್ನು ವಡವಾನಲದ ಜ್ವಾಲೆಗಳಿಂದೂ ರೂಪಿಸಿರುವುದಾಗಿ ತಿಳಿಯ ಬೇಕು ಅದುದರಿಂದಲೆ ಅಳುರ್ವಂತೆ ಎಂದುದು. ಸಾಗರಗಳ ಗರ್ಭದಲ್ಲಿ 'ವಡವ' ಅಥವಾ 'ಬಡಬ' ಎಂಬ ಮಹಾಗ್ನಿಯು ಇರುವುದೆಂದೂ ಅದು ಸದಾ ಸಮುದ್ರವನ್ನು ಶೋಷಿಸುತ್ತಿರುತ್ತದೆ ಎಂದೂ ಪ್ರಸಿದ್ಧಿಯು ಅಳುರ್(ಧಾತು)ಆವರಿಸು; ಮುತ್ತಿಕೊಳ್ಳು) ಅಳುರ್ದು= ಮುತ್ತಿಕೊಂಡು; ಪೋಗದೆ ತನ್ನೊಳ್‌ಪೆಣೆದ= ಹಿಮ್ಮೆಟ್ಟದೆ ತನ್ನೊಡನೆ ಇದಿರಾಡಿದ; [ಪೆಣೆ (ಧಾತು) ದ್ವಂದ್ವಯುದ್ಧೇ, ಪ್ರತಿಭಟಿಸು] ಪ್ರಭದ್ರಕಬಲಮೆಲ್ಲ ಮಂ= ಪ್ರಭದ್ರಕನೆಂಬ ರಾಜನ ಸೈನ್ಯವೆಲ್ಲವನ್ನೂ, ಕೊಂದಂ = ನಾಶಮಾಡಿದನು; ಅಂದು (ಈ ಪ್ರಕಾರ ಒಂದು ದಿವಸ ಸಂಪೂರ್ಣವಾಗಿ ಯುದ್ಧವನ್ನು ಮಾಡಿ) ಆ ದಿನ, ಪತಂಗಮಂಡಲಂ= ಸೂರ್ಯಬಿಂಬವು, ಅಪರಗಿರಿತಟಮಂ ಎಯ್ದುವುದುಂ= ಅಸ್ತಾ ಚಲವನ್ನು ಸೇರಿದಾಗ (ಸೂರ್ಯಾಸ್ತಮಯಸಮಯದಲ್ಲಿ ಎಂದು ತಾತ್ಪರ್ಯವು) ಎರಡುಂಪಡೆಗಳ್= ಉಭಯಬಲಗಳೂ; ಅಪಹಾರತೂರ್ಯಂಗಳಂಬಾಜಿಸಿ= ಯುದ್ಧಾ ವಸಾನ ಸೂಚಕ ದುಂದುಭಿಗಳನ್ನು ಮೊಳಗಿಸಿ; ತಂತಮ್ಮ ಬೀಡುಗಳ್ಗೆ ಪೋದಾಗಳ್ = ತಮ್ಮ ತಮ್ಮ ಬಿಡಾರಗಳಿಗೆ ಹೋದಾಗ, ಅಂಗರಾಜಂ - ಕರ್ಣನು; ರಾಜರಾಜನಲ್ಲಿಗೆ ಬಂದು = ದುರ್ಯೋಧನನಿದ್ದಲ್ಲಿಗೆ ಬಂದು; (ರಾಜರಾಜ = ರಾಜರಿಗೆಲ್ಲ ರಾಜನಾದಂಥವ, ರಾಜಾಧಿರಾಜ, ದುರ್ಯೋಧನನಿಗೆ ವಿಶೇಷಣವು ಪಂಪ ಭಾರತದಲ್ಲಿ ಅಲ್ಲಲ್ಲಿ ದುರ್ಯೋ ಧನನನ್ನು ಈ ವಿಶೇಷಣದಿಂದ ಹೆಸರಿಸಲಾಗಿದೆ ಗದಾಯುದ್ಧದಲ್ಲಿ ರನ್ನನು ಪಂಪನನ್ನೇ ಅನುಸರಿಸಿ ದುರ್ಯೋಧನನನ್ನು ರಾಜರಾಜನೆಂದೇ ಹೇಳಿದ್ದಾನೆ ಕೆಲವು ಸಾಹಿತ್ಯ ವಿಮರ್ಶಕರು–ಈ ವಿಶೇಷಣವು ಐತಿಹಾಸಿಕ ದೃಷ್ಟಿಯಿಂದ ಆ ಕಾಲದ ಚೋಳರಾಜ ನನ್ನು ಸೂಚಿಸುತ್ತದೆಂದು ಅಭಿಪ್ರಾಯಪಡುತ್ತ ರನ್ನನನ್ನು ರಾಜರಾಜ ಚೋಳನ ಕಾಲಕ್ಕೆ ಸಮಕಾಲಿಕನನ್ನಾಗಿ ಮಾಡಲು ಹವಣಿಸಿರುತ್ತಾರೆ (ರನ್ನಕವಿಪ್ರಶಸ್ತಿ) ಆದರೆ ರನ್ನನು ಸ್ವಲ್ಪ ಹೆಚ್ಚುಕಡಮೆ ಎಲ್ಲಾ ವಿಷಯಗಳಲ್ಲಿಯೂ ತನ್ನ ಗದಾಯುದ್ಧದಲ್ಲಿ ಪಂಪ ಭಾರ ತದ ಆನುಪೂರ್ವಿಯನ್ನೇ ಆಧಾರವಾಗಿಟ್ಟುಕೊಂಡಿದ್ದಾನೆ ಎಂಬುದನ್ನು ಮರೆಯಲಾ ಗದು.) ಹಯೋಪಾಯಕುಶಲರಪ್ಪ= ಅಶ್ವವಿದ್ಯೆಯಲ್ಲಿ ಪಾಂಡಿತ್ಯವುಳ್ಳವರಾದಂತಹ; ಗಾಂಗೇಯರ್ ಅಱಿಪಿದ ಮಾತಂ= ಭೀಷ್ಮರು ತಿಳಿಸಿದ ಮಾತನ್ನು (ಶಲ್ಯನನೆ ಸಾರಥಿ ಯಾಗಿರೆ ಮಾಡಿ ಕಾದು ಎಂಬ ಮಾತು.) ಏಕಾಂತದೊಳ್ ಅಱಿಪುವುದುಂ= ಗುಟ್ಟಿ ನಲ್ಲಿ ತಿಳಿಸಿದಾಗ; ತ್ರಿಣೇತ್ರನೊಳ್ ಕಲ್ತು= ಮುಕ್ಕಣ್ಣನಲ್ಲಿ ಕಲಿತು (ಶಲ್ಯನು ಮುಕ್ಕಣ್ಣ ನಲ್ಲಿ ಅಶ್ವವಿದ್ಯೆಯನ್ನೂ ರಥಕಲ್ಪವನ್ನೂ ಕಲಿತನು ಎಂದು ಮಹಾಭಾರತದ ಕರ್ಣ ಪರ್ವದಲ್ಲಿ ಹೇಳಿದೆ ) ಅಶ್ವಹೃದಯದೊಳಂ= ಅಶ್ವವಿದ್ಯಾರಹಸ್ಯದಲ್ಲಿಯೂ; ರಥಕಲ್ಪ ದೊಳಂ= ತೇರನ್ನು ನಡೆಯಿಸುವ ಜಾಣ್ಮೆಯಲ್ಲಿಯೂ (ರಥವಿದ್ಯಾರಹಸ್ಯದಲ್ಲಿಯೂ)

॥ ಮಲ್ಲಿಕಾಮಾಲೆ ॥

ಅಂತೆ ಕುಳ್ಳಿರಿರಪ್ಪೊಡಿಂ ನಿಮಗಾಣೆಯೆಂದಿರವೇೞ್ದಿಳಾ- ।
ಕಾಂತನುಂ ತೊಡೆಸೋಂಕಿ ಕುಳ್ಳಿರೆ ಬಾೞ್ತೆಯುಳ್ಳೊಡೆ ನೀನೆ ಬ- ॥
ರ್ಪಂತುಟಾದುದೆ ಪೇೞ ನೀಂ ಬೞಿಯಟ್ಟಲಾಗದೆ ಕೆಮ್ಮನಿ- ।
ನ್ನೆಂತುಮೇಂ ಮನೆವಾೞ್ತೆಯಂ ಬೆಸಸಲ್ಕೆ ಬಂದೆಯಿಳಾಧಿಪಾ ॥ ೮ ॥

---

ಶಲ್ಯಂ ಮುರಾಂತಕಂಗಂ ಪ್ರವೀಣನಪ್ಪುದಱಿಂದೆ= ಶಲ್ಯನು ಶ್ರೀಕೃಷ್ಣನಿಗಿಂತ ಹೆಚ್ಚು ಕುಶಲನಾಗಿರುವುದರಿಂದ; ಆತನಂ ಎಂತಾನುಂ ಒಡಂಬಡೆ ನುಡಿದು= ಆತನನ್ನು ಹೇಗಾದರೂ ಒಪ್ಪಿಸುವಂತೆ ಮಾತಾಡಿ; (ಯಾವ ರೀತಿಯಿಂದಲಾದರೂ ಆತನನ್ನು ಒಡಂಬಡಿಸಿ) ನಿನಗೆ ಸಾರಥಿಮಾಡುವೆನೆಂದು; ದಿನಕರತನೂಜನಂ ಬೀಡಿಂಗೆ ಪೋಗಲ್ವೇೞ್ದು = ಕರ್ಣನನ್ನು ಬಿಡಾರಕ್ಕೆ ಹೋಗಹೇಳಿ; ರಾಜರಾಜಂ = ದುರ್ಯೋಧನನು, ಮದ್ರರಾಜನ ಮನೆಗೆ ಬರ್ಪುದುಂ = ಮದ್ರದೇಶಾಧಿಪನಾದ ಶಲ್ಯನ ವಸತಿಗೆ ಬಂದಲ್ಲಿ; (ಶಲ್ಯನು ಮದ್ರದೇಶದ ಅರಸನು. ಧೃತರಾಷ್ಟ್ರನ ರಾಣಿಯಾದ ಗಾಂಧಾರಿಯ ಒಡಹುಟ್ಟಿದವನು. ದುರ್ಯೋಧನನ ಸೋದರಮಾವನು ಪಾಂಡುರಾಜಪತ್ನಿಯಾದ ಮಾದ್ರಿಯೂ ಶಲ್ಯನ ಸಹೋದರಿಯಾದುದರಿಂದ ಮಾದ್ರೀಪುತ್ರರಾದ ನಕುಲಸಹದೇವರಿಗೂ ಆತನು ಸೋದರಮಾವನಾಗಿರುವನು. ಉಭಯಪಕ್ಷದಲ್ಲಿಯೂ ಶಲ್ಯನ ಸಮೀಪದ ಬಂಧುಗಳು ಇರುವರಾದರೂ ಆತನು ದುರ್ಯೋಧನನ ಪಕ್ಷದಲ್ಲಿಯೇ ನಿಂತು ಕಾದಿದನು. ಆತನು ಕರ್ಣನನ್ನು ಮಾತ್ರ ಅಂತರ್ಯದಲ್ಲಿ ಮೆಚ್ಚುತ್ತಿರಲಿಲ್ಲ ) ಆತಂ = ಶಲ್ಯನು, ಅತ್ಯಂತ ಸಂಭ್ರಮಾಕ್ರಾಂತಹೃದಯನಾಗಿ = ಮನಸ್ಸಿನಲ್ಲಿ ಒಹುಸಂತೋಷಗೊಂಡವನಾಗಿ (ಅತ್ಯಂತಸಂಭ್ರಮದಿಂದ ಆಕ್ರಮಿಸಲ್ಪಟ್ಟ ಹೃದಯವುಳ್ಳವನಾಗಿ) ಬೇಗಂ ಇದಿರೇೞೆ = ಬೇಗನೆ ಇದಿರೇಳಲು; (ದುರ್ಯೋಧನನು ತನ್ನ ಅಳಿಯನಾಗಿದ್ದರೂ ರಾಜಾಧಿರಾಜನಾದುದರಿಂದ ಆತನ ಮುಂದೆ ಗೌರವಾರ್ಥವಾಗಿ ಇದಿರೆದ್ದನು ಎಂಬುದು ಶಲ್ಯನ ವಿನಯಗುಣವನ್ನು ತೋರ್ಪಡಿಸುತ್ತದೆ )

ಅಂತೆ ಕುಳ್ಳಿರಿರ್ — ಇಂತೆಂದು ಮಲ್ಲಿಕಮಾಲಾವೃತ್ತಂ ॥ ಅಂತೆ ಕುಳ್ಳಿರಿರ್ ಅಪ್ಪೊಡೆ ಇಂ ನಿಮಗಾಣೆ= ಹಾಗೆ ನೀವು ಕುಳಿತುಕೊಳ್ಳಿರಿ, ನನ್ನಾಣೆಯಿದೆ. (ನೀವು ಕುಳಿತುಕೊಳ್ಳದಿದ್ದರೆ ನನ್ನಾಣೆಯುಂಟು "ಕುಳ್ಳಿರಿರಪ್ಪೊಡೆ ನಿಮಗಾಣೆ" ಈ ಪ್ರಯೋಗ ವೈಶಿಷ್ಟ್ಯವನ್ನು ಯೋಚಿಸಿರಿ. ಇದು ಸಲುಗೆಯ ಮಾತು ನೀವು ಹಾಗೆ ಕುಳಿತುಕೊಳ್ಳದಿದ್ದರೆ ನನ್ನಾಣೆಯುಂಟೆಂದು ಹೇಳಿ ದುರ್ಯೋಧನನು ತನ್ನ ಮುಂದೆ ಎದ್ದುನಿಂತಿದ್ದ ಮಾವನನ್ನು ಒತ್ತಾಯದಿಂದ ಕುಳ್ಳಿರಿಸಿದನು ಎಂದು ತಾತ್ಪರ್ಯವು ) ಎಂದು= ಹೀಗೆ ಹೇಳಿ; ಇಳಾಕಾಂತನುಂ= ಭೂಪತಿಯಾದ ದುರ್ಯೋಧನನೂ; ತೊಡೆಸೋಂಕಿ

ಬೆಸಸೆನೆಯುಂ ನುಡಿಯಲ್ ಶಂ- ।
ಕಿಸಿದಪೆನಾನೆಂದೊಡೇಕೆ ಶಂಕಿಸುವಯ್ ನೀಂ ॥
ಬೆಸವೇಟ್ಟೆನೆ ಜಯವಧು ಕೂ- ।
ರ್ತೊಸೆದಿರ್ಕುಂ ಮಾವ ನಿಮ್ಮ ದಯೆಯಿಂದೆಮ್ಮಂ ॥ ೯ ॥

---

ಕುಳ್ಳಿರೆ = ತೊಡೆ ತೊಡೆ ತಾಗುವಂತೆ ಕುಳ್ಳಿರಲು; (ತೊಡೆಸೋಂಕಿ ಕುಳಿತುಕೊಳ್ಳು ವುದು ಗೆಳೆತನದ ಉಪಲಕ್ಷಣವು) ಇಳಾಧಿಪಾ = ಭೂಪತಿಯೇ; ಬಾಟ್ಟೆಯುಳ್ಳೊಡೆ = ಅಗತ್ಯದ ಕೆಲಸವಿದ್ದಿದ್ದರೆ; (ಬಾಟ್ಟೆ–ವಾರ್ತೆ = ಪ್ರಯೋಜನದ ಕಾರ್ಯವು ಎಂದು ಇಲ್ಲಿ ಅರ್ಥವು) ನೀನೆ ಬರ್ಪಂತುಟು ಅದುದೆಪೇಟಿ = ನೀನೇ ಬರುವಂತೆ ಆಯ್ತೋ ಹೇಳು (ಪ್ರಭುವಾದ ನೀನೇ ಬರಬೇಕೆ ಎಂದು ತಾತ್ಪರ್ಯವು.) ಕೆಮ್ಮನೆ ಎಂತುಂ ನೀಂ ಬಟಿ ಯಟ್ಟಲಾಗದೆ ? = ನೀನು ಹೇಗೂ ಸುಮ್ಮನೆ ಹೇಳಿಕಳುಹಿಸಬಾರದಾಗಿತ್ತೆ? (ಬಟಿ ಯಟ್ಟು = ದೂತನನ್ನು ಕಳಿಸು; ಕರೆಯು ಕಳುಹಿಸು ನನ್ನಿಂದ ನಿನಗೆ ಏನಾದರೂ ಕೆಲಸ ವಾಗಬೇಕಿದ್ದರೆ ಪ್ರಭುವಾದ ನೀನು ನನ್ನನ್ನು ಕರೆಯಕಳುಹಿಸಬಾರದಾಗಿತ್ತೇ ಎಂದು ಭಾವವು) ಏಂಮನೆವಾಟ್ಟೆಯುಂ ಬೆಸಸಲ್ಕೆ ಬಂದೆ = ಯಾವ ಮನೆವಾರ್ತೆಯನ್ನು ಆಜ್ಞಾಪಿಸುವುದಕ್ಕೆ ಬಂದೆ? (ಮನೆವಾಟ್ಟೆ–ಮನೆವಾರ್ತೆ–ಗೃಹಕೃತ್ಯ) ಇಲ್ಲ ಗುಟ್ಟಿನಲ್ಲಿ ಹೇಳತಕ್ಕ ಗೃಹಕೃತ್ಯದ ವಿಚಾರವೇನೂ ಇರದೆ ರಾಜಕಾರ್ಯವೇ ಇರಬೇಕೆಂದು ತಾತ್ಪ ರ್ಯವು) ಮಲ್ಲಿಕಾಮಾಲೆಗೆ ಲಕ್ಷಣವು–ಮಲ್ಲಿಕಾಯುತಮಾಲೆಯುಪ್ಪುದು ರಂಸಜಂ ಜಭರಂಬರಲ್ ॥ ೮ ॥

ಬೆಸಸೆನೆ– ಇಂತೆಂದು ಕಂದಂ ॥ 'ಬೆಸಸು' ಎನೆಯುಂ = ಆಜ್ಞಾಪಿಸು ಎಂದು ಶಲ್ಯನೆನ್ನಲೂ; ಅಂನುಡಿಯಲ್ ಶಂಕಿಸಿದಪೆಂ = ನಾನು ಹೇಳಲು ಸಂಕೋಚ ಪಡುತ್ತಿದ್ದೇನೆ: ಎಂದೊಡೆ = ಎಂದು ದುರ್ಯೋಧನನೆನ್ನಲು; ಏಕೆಶಂಕಿಸುವಯ್? ನೀಂ ಬೆಸವೇಟ್ = ಏಕೆ ಸಂದೇಹಪಡುವೆ? ನೀನು ಆಜ್ಞಾಪಿಸು; [ಬೆಸಮಂ+ ಬೇಟ್ = ಬೆಸವೇಟ್ (ಅಪ್ಪಣೆಕೊಡು) ಎನೆ = ಎಂದು ಶಲ್ಯನು ಹೇಳಲು, ಮಾವ = ಮಾವನಾದ ಶಲ್ಯದೊರೆಯೇ; ನಿಮ್ಮ ದಯೆಯಿಂದಂ = ನಿಮ್ಮ ಅನುಗ್ರಹ ದಿಂದ; ಜಯವಧು ಎಮ್ಮಂ ಕೂರ್ತು ಒಸೆದಿರ್ಕುಂ = ಜಯಾಂಗನೆ ನಮ್ಮಲ್ಲಿ ಪ್ರೀತಿಯಿಟ್ಟು ಒಲಿದಿರುವಳು ("ನಿಮ್ಮ ಅನುಗ್ರಹದಿಂದ ನಾವು ಜಯಶೀಲರಾ ಗಿರುವೆವು" ಎಂದು ಶಲ್ಯನ ಮನಸ್ಸನ್ನು ಒಲಿಸಿಕೊಳ್ಳುವುದಕ್ಕಾಗಿ ಹೇಳಿದ ಉಪ ಚಾರರೂಪವಾದ ಪೀಠಿಕೆಯೆಂದು ಭಾವಿಸಬೇಕು) ಕಾರ್ಯದ ಮಾತನ್ನು ಮುಂದೆ ಹೇಳುತ್ತಾನೆ. ॥ ೯ ॥

ಪುಸಿಯೆನೆ ರಥಮಂ ಹರಿ ಚೋ- ।
ದಿಸುವಂತೆವೊಲಿರ್ದದೆಂತು ನರನಂ ಗೆಲಿಪಂ ॥
ವಿಸಸನದೊಳಂತೆ ನೀಮುಂ ।
ಪೆಸರಂ ಕರ್ಣಂಗೆ ಮಾಡಿ ಗೆಲ್ಲಂಗೊಳ್ಳಿಂ ॥ ೧೦ ॥

ವ ॥ ಎಂಬುದುಂ ಮದ್ರರಾಜನುಮ್ಮಚ್ಚದೊಳುಮ್ಮನೆ ಬೆಮರ್ತು ಕಿನಿಸಿ ಕಿಂಕಿಱಿವೋಗಿ—

---

ಪುಸಿಯೆನೆ —ಇಂತೆಂದು ಕಂದಂ ॥ ಪುಸಿಯೆನೆ=ತೋರಿಕೆಗೆ ಮಾತ್ರವೆಂಬಂತೆ (ಪುಸಿ=ಸುಳ್ಳು) ಹರಿ=ಶ್ರೀಕೃಷ್ಣನು, ರಥಮಂ ಚೋದಿಸುವಂತೆವೊಲಿರ್ದು=ರಥವನ್ನು ನಡೆಯಿಸುವ ಹಾಗಿದ್ದು; ವಿಸಸನದೊಳ್=ಯುದ್ಧದಲ್ಲಿ, ಅದೆಂತು ನರನಂಗೆಲಿಪಂ=ಹೇಗೆ ಅರ್ಜುನನನ್ನು ಗೆಲ್ಲಿಸುತ್ತಾನೋ; ಅಂತೆನೀಮುಂ=ಹಾಗೆ ನೀವೂ,(ವಿಶಸನದೊಳ್=ಯುದ್ಧದಲ್ಲಿ)ಕರ್ಣಂಗೆ ಪೆಸರಂ ಮಾಡಿ=ಕರ್ಣನಿಗೆ ಹೆಸರು ಬರುವಂತೆ ಕರ್ಣನನ್ನು ನೆವವಾಗಿ ಮಾಡಿ (ಎಂದರೆ "ಪುಸಿಯೆನೆ ನೀಮುಂ ಕರ್ಣನ ರಥಮಂ ಚೋದಿಸುವಂತೆವೊಲಿರ್ದು ಎಂದು ಭಾವವು) ಗೆಲ್ಲಂಗೊಳ್ಳಿಂ=ಜಯವನ್ನು ಪಡೆಯಿರಿ; (ಪಾಂಡವ ಬಲದಲ್ಲಿ ಹೇಗೆ ಶ್ರೀಕೃಷ್ಣನು ನೆಪಕ್ಕೆ ಮಾತ್ರ ಅರ್ಜುನನ ತೇರನ್ನೆಸಗುತ್ತ ಹೇಗೆ ಅರ್ಜುನನಿಗೆ ಗೆಲವನ್ನುಂಟು ಮಾಡಲು ಬದ್ಧನಾಗಿರುವನೋ ಹಾಗೆ ನಮ್ಮ ಬಲದಲ್ಲಿ ನೀವೂ ಕೂಡ ಶ್ರೀಕೃಷ್ಣನಿಗೆ ಪ್ರತಿದ್ವಂದ್ವಿಯಾಗಿ ನೆಪಕ್ಕೆ ಮಾತ್ರ ಕರ್ಣನಿಗೆ ಸಾರಥ್ಯವನ್ನು ಮಾಡಿ ನಮಗೆ ಗೆಲ್ಲವನ್ನು ಉಂಟುಮಾಡಬೇಕು" ಎಂದು ದುರ್ಯೋಧನನ ಕೇಳಿಕೆಯು. ಶಲ್ಯನು ಕುಲದ ಚಲದ ಒಳ್ಪಿನ ಭೂಪನಾದುದರಿಂದ ಆತನೊಡನೆ ಕುಲಹೀನನಾದ ಕರ್ಣನ ತೇರೆಸಗೆಂದು ಬೆಸಸುವುದಕ್ಕೆ ದುರ್ಯೋಧನನು ಶಂಕಿಸಿದುದು ನ್ಯಾಯವೇ ಆಗಿದೆ. ಕುಲದ ಪ್ರತಿಷ್ಠೆಯನ್ನೇ ಗೌರವಿಸುವ ಶಲ್ಯನು ದುರ್ಯೋಧನನ ಮಾತನ್ನು ಕೇಳಿ ರೋಷಗೊಂಡು, ಇಂತಹ ನುಡಿಯನ್ನು ತಾನು ಕೇಳುವಂತಾದುದು ಅಧಿರಾಜಸೇವೆಯಂಥ ನಿಕೃಷ್ಟಕಾರ್ಯಕ್ಕೆ ತಾನು ಒಳಗಾದುದರಿಂದಲೇ ಸರಿಯೆಂದು ಮನಃಕ್ಷತಗೊಂಡು "ಇಳಾಧಿನಾಥರಂ ಓಲಗಿಸಿ ಬಾಳ್ವುದೆ ಕಷ್ಟಂ" ಎಂಬ ಸಾಮಾನ್ಯವಾದ ನೀತಿಯನ್ನು ಸಮರ್ಥಿಸಿ ಹೇಳುತ್ತಾನೆ.) ॥ ೧೦ ॥

ಎಂಬುದುಂ— ಇಂತೆಂದು ವಚನಂ ॥ ಎಂಬುದುಂ=(ಹೀಗೆಂದು ದುರ್ಯೋಧನನು) ಹೇಳಲು; ಮದ್ರರಾಜಂ=ಶಲ್ಯಭೂಪತಿಯು; ಉಮ್ಮಚ್ಚದೊಳ್=ಬಹಳವಾದ ಮನೋವ್ಯಥೆಯಿಂದ; ಉಮ್ಮನೆ ಬೆಮರ್ತು=ಚೆನ್ನಾಗಿ ಬೆವರುತ್ತ; ಕಿನಿಸಿ ಕಿಂಕಿಱಿವೋಗಿ=ಕೋಪಿಸಿ ಕಿಡಿಕಿಡಿಯಾಗಿ—

ಕಲಿಯನೆ ಪಂದೆ ಮಾೞ್ಪ ಕಡುವಂದೆಯನೊಳ್ಗಲಿಮಾೞ್ಪ ತಕ್ಕನಂ ।
ಪೊಲೆಯನೆ ಮಾೞ್ಪ ಮುಂ ಪೊಲೆಯನಂ ನೆಱೆ ತಕ್ಕನೆ ಮಾೞ್ಪ ತಮ್ಮೊಳ-॥
ಗ್ಗಲಿಸಿ ಪೊದಟ್ದು ಪರ್ವಿದವಿವೇಕತೆಯಿಂ ನೃಪಚಿತ್ತವೃತ್ತಿ ಸಂ- ।
ಚಲಮದಱಿಂದ ಮೋಲಗಿಸಿ ಬಾೞ್ವುದೆ ಕಷ್ಟಮಿಳಾಧಿನಾಥರಂ ॥ ೧೧ ॥

ಅನುಪಮವಿಕ್ರಮಕ್ರಮಮುದಾರಗುಣಂ ಋತವಾಕ್ಯಮೆಂಬ ಪೆಂ- ।
ಪೆನಲಿವು ಮೂಱೆ ನಾಲ್ಕೆ ಗುಣಮತ್ತ ಮದಾನ್ವಿತರಾಜಬೀಜ ಸಂ- ॥
ಜನಿತಗುಣಂ ಮದಂ ಮದಮನಾಳ್ದವಿವೇಕತೆಯಿಂದಮಲ್ತೆ ತೊ- ।
ಟ್ತಿನಮೊಲೆವಾಲನುಂಡಗುಣಮಿಂತಿವನಾರ್ ಕಿಡಿಪರ್ ನರೇಂದ್ರರೊಳ್ ॥೧೨॥

---

ಕಲಿಯನೆ— ಇಂತೆಂದು ಚಂ ಮಾಲಾವೃತ್ತಂ ॥ ಕಲಿಯನೆ= ಧೀರನನ್ನೇ, ಪಂದೆಮಾೞ್ಪ=(ಪಂದೆಯಂ+ ಮಾಡುವ) ಹೇಡಿಯನ್ನಾಗಿ ಮಾಡುವಂತಹ; ಕಡುವಂದೆಯಂ (ಕಡಿದು+ ಪಂದೆಯಂ) ಬಹಳ ಹೇಡಿಯಾದವನನ್ನು; ಒಳ್ಗಲಿಮಾೞ್ಪ= (ಒಳ್ಳಿದಂ+ ಕಲಿ) ಒಳ್ಳೆಯ ಧೀರನನ್ನಾಗಿ ಮಾಡುವಂತಹ, ತಕ್ಕನಂ= ಯೋಗ್ಯನಾದವನನ್ನು; ಪೊಲೆಯನೆಮಾೞ್ಪ= ನೀಚನನ್ನಾಗಿಯೇ ಮಾಡುವಂತಹ; ಮುಂ ಪೊಲೆಯನಂ= ಮೊದಲು ನೀಚನಾಗಿದ್ದವನನ್ನು, ನೆಱೆತಕ್ಕನೆಮಾೞ್ಪ= ಬಹು ಯೋಗ್ಯನನ್ನಾಗಿ ಮಾಡುವಂತಹ, ತಮ್ಮೊಳ್ ಅಗ್ಗಲಿಸಿ ಪೊದಟ್ದು ಪರ್ವಿದ ಅವಿವೇಕತೆಯಿಂ= ತಮ್ಮಲ್ಲಿ ಹೆಚ್ಚಾಗಿ ಪ್ರಕಟವಾಗಿ ಹಬ್ಬಿದ ಬುದ್ಧಿಹೀನತೆಯಿಂದ; ನೃಪಚಿತ್ತವೃತ್ತಿ= ಅರಸರ ಮನಸ್ಸು, ಸಂಚಲಂ= ಬಹಳ ಚಂಚಲವಾಗಿರುವುದು, ಅದಱಿಂದಂ= ಅದರಿಂದಲಾಗಿ, ಇಳಾಧಿನಾಥರಂ= ಅರಸರನ್ನು, ಓಲಗಿಸಿ= ಓಲೈಸಿ (ಮನಸ್ಸು ಮೆಚ್ಚುವಂತೆ ಸೇವಿಸಿ) ಬಾೞ್ವುದೆ ಕಷ್ಟಂ= ಬದುಕುವುದೇ ಕಷ್ಟವು, "ಅರಸನ ಮುಂದಿರಬೇಡ, ಕುದುರೆಯ ಹಿಂದಿರಬೇಡ!" "ರಾಜಕಾರ್ಯಾಣಿ ಮೋಘಾನಿ" ಮೊದಲಾದ ನುಡಿಗಟ್ಟುಗಳೂ ಈ ತತ್ವವನ್ನೇ ಸಾರುತ್ತಿವೆಯಷ್ಟೆ. ಕಾವ್ಯಲಿಂಗಾಲಂಕಾರವು. ॥ ೧೧ ॥

ಅನುಪಮ— ಇಂತೆಂದು ಚಂಪಕಮಾಲಾವೃತ್ತಂ॥ ಪೆಂಪೆನಲ್=(ರಾಜರಿಗೆ) ಹೆಚ್ಚಿನ ಯೋಗ್ಯತೆಯನ್ನು ಪ್ರಕಟಪಡಿಸುವ ವಿಷಯವೆಂದರೆ, ಅನುಪಮ ವಿಕ್ರಮಕ್ರಮಂ= ಸಮಾನವಿಲ್ಲದ ಪರಾಕ್ರಮದ ರೀತಿಯು, ಉದಾರಗುಣಂ= ವಿಶೇಷವಾಗಿ ದಾನಮಾಡುವ ಸ್ವಭಾವವೆಂಬ ಗುಣವು, ಋತವಾಕ್ಯಂ = ಸತ್ಯವನ್ನಾಡುವುದು; ಎಂಬ= ಈ ರೀತಿಯ; ಮೂಱೆಗುಣಂ= ಮೂರೇ ಗುಣಗಳು (ರಾಜರಿಗೆ ಪ್ರಸಿದ್ಧ ಗುಣಗಳೆಂದರೆ ಈ ಮೂರು) ಅತ್ತ= ಈ ಕ್ರಮವು ವಿಪರ್ಯಯವಾದಲ್ಲಿ; ಮದಾನ್ವಿತ ರಾಜಬೀಜಸಂಜನಿತಗುಣಂ= ಅಹಂಕಾರದಿಂದ ಕೂಡಿದ ರಾಜಬೀಜದಿಂದ ಹುಟ್ಟಿ

ಪಿಂದೆ ಕಡಂಗಿ ತೇರನೆಸಗೆಂಬವನಂಬಿಗನಾಜಿರಂಗದೊಳ್ ।
ಮುಂದೆ ಸಮಾನನಾಗಿ ಬೆಸದಿರ್ಪವನುಂ ತುಱುಕಾರನಾಗೆ ಮ- ॥
ತ್ಸ್ಯಂದನಚೋದನಕ್ರಮಮುಮಂ ಪೊಲೆಯಂಗಮರ್ದಿ*ರ್ಕುಮಂತುಟಂ ।
ನೀಂದಯೆಗೆಯ್ದು ಪೇೞ್ದಿಡನಾರ್ ಪಡೆವರ್ ಫಣಿರಾಜಕೇತನಾ ॥ ೧೩ ।

---

ಬಂದ ಗುಣವು, ಮದಂ=ಅಹಂಕಾರವು, ಮದಮುಂ ಅಳ್ದ ಅವಿವೇಕತ=ಹೆಚ್ಚು ಗರ್ವಗೊಂಡುದರಿಂದ ಉಂಟಾದ ತಿಳಿಗೇಡಿತನವು, ತೊೞ್ತಿನ=ದಾಸಿಯ; ಮೊಲೆವಾಲಂ=ಎದೆಯ ಹಾಲನ್ನು (ಸ್ತನ್ಯವನ್ನು) (ಮೊಲೆಯ+ಪಾಲ್=ಮೊಲೆವಾಲ್) ಉಂಡಗುಣಂ=ಕುಡಿದುದರಿಂದ ಉಂಟಾದಗುಣವು ಎಂಬುದಾಗಿ, ನಾಲ್ಕೆ ಗುಣಂ=ನಾಲ್ಕು ದುರ್ಗುಣಗಳು, ನರೇಂದ್ರರೊಳ್=ಅರಸರಲ್ಲಿ (ನೆಲಸಿರುವ) ಇವಂ=ಈ ದುರ್ಗುಣಚತುಷ್ಟಯವನ್ನು, ಆರ್ ಕಿಡಿಪರ್=ಯಾರು ಹೋಗಲಾಡಿಸುವರು? [ಕಿಡು (ಧಾತು) ವಿನಾಶೇ=ಹಾಳುಮಾಡು] ಯಾರಿಂದಲೂ ಸಾಧ್ಯವಿಲ್ಲವೆಂಬುದು ತಾತ್ಪರ್ಯವು. ಸತ್ಕುಲೀನರಾದ ಕ್ಷತ್ರಿಯರಲ್ಲಿರಬೇಕಾದುವು ಶೌರ್ಯೌದಾರ್ಯ ಸತ್ಯವಾಕ್ಯಗಳೆಂಬ ಮೂರು ಪ್ರಸಿದ್ಧಗುಣಗಳು. ಬರಬರುತ್ತ ಅವುಗಳಿರಬೇಕಾದ ಸ್ಥಾನದಲ್ಲಿ ಬೇರೆ ನಾಲ್ಕು ವಿಪರೀತಗುಣಗಳು ನೆಲಸುತ್ತಿರುವುವು. ಅವು ರಕ್ತಗತವಾಗುತ್ತಿರುವಾಗ ಅವನ್ನು ಹೋಗಲಾಡಿಸುವುದು ಯಾರಿಂದ ಸಾಧ್ಯವು? ಚಂದ್ರವಂಶೋತ್ಪನ್ನನಾಗಿ ಪರಂಪರಾಗತವಾದ ಹಸ್ತಿನಾವತಿಯ ಪಟ್ಟದ ಅಧಿಕಾರವನ್ನು ನಡೆಯಿಸುವ ದುರ್ಯೋಧನನು ಕುಲಗೌರವದ ಕಡೆಗೆ ಲಕ್ಷಿಸದೆ ಸತ್ಕುಲೀನನಾದ ತನ್ನೊಡನೆ ನೀಚನಿಗೆ ಸಾರಥ್ಯವನ್ನು ಮಾಡಬೇಕೆಂದು ಕೇಳಿದುದಕ್ಕಾಗಿ ಶಲ್ಯನು ದುರ್ಯೋಧನನನ್ನು ಮಾರ್ಮಿಕವಾಗಿ ನುಡಿಯುವ ಮಾತಿದು ಬಹುಸ್ವಾರಸ್ಯವಾಗಿರುವುದು. ಸಂಪತ್ತಿನ ಹೆಮ್ಮೆಯಿಂದ ಕ್ಷತ್ರಿಯರು ಮಕ್ಕಳಿಗೆ ದಾಸಿಯರ ಮೊಲೆಹಾಲನ್ನು ಕುಡಿಯಿಸುವ ರೀತಿಯು ಹೇಗೆ ನಿಂದ್ಯವೆಂಬುದನ್ನು ತಕ್ಕ ಸಂದರ್ಭದಲ್ಲಿ ಪಂಪನು ಹೀಗೆ ಚಮತ್ಕಾರವಾಗಿ ತಿಳಿಸಿರುವನು ॥ ೧೨ ॥

ಪಿಂದೆ—ಇಂತೆಂದು ಉತ್ಪಲಮಾಲಾವೃತ್ತಂ ॥ ಫಣಿರಾಜಕೇತನಾ=ಸರ್ಪಧ್ವಜನೆನಿಸಿದ ದುರ್ಯೋಧನನೇ; ಆಜಿರಂಗದೊಳ್ ಯುದ್ಧರಂಗದಲ್ಲಿ, ಪಿಂದೆ=ಹಿಂದುಗಡೆ (ಸಾರಥಿಯ ಹಿಂಬದಿ ರಥದ ಮಧ್ಯದಲ್ಲಿ ಕುಳಿತುಕೊಂಡು) ಕಡಂಗಿ=ಇಷ್ಟವುಳ್ಳವನಾಗಿ (ಬೇಕುಬೇಕೆಂದೇ) [ಕಡಂಗು=ಧಾತು, ಔತ್ಸುಕ್ಯೇ=(ಔತ್ಸುಕ್ಯವೆಂದು ಇಚ್ಛೆ] ತೇರನೆಸಗು=ರಥವನ್ನು ಚೋದಿಸು [ಎಸಗು (ಧಾತು) ಉದ್ಯೋಗೇ] ಎಂಬವಂ=ಎಂದು ಹೇಳತಕ್ಕವನು, ಅಂಬಿಗಂ=ಬೆಸ್ತರವನು [ಅಂಬಿಗ=ತದಾಚರತಿ ॥ ಭಾಭೂ ॥ ಸೂತ್ರ ॥ ೧೬೮ ॥ ಆಚರಿಸುವವನು ಎಂಬರ್ಥದಲ್ಲಿ ಇಗಪ್ರತ್ಯಯ] ಮುಂದೆ=

ಎನಿತೊಲ್ಲದಿರ್ದೊಡಂ ಸ-।
ಜ್ಜನರುಂ ಪತಿಹಿತರುಮಱಿಯವೇೞ್ಕುಂ ನೀನಿ- ॥
ನ್ನೆನಿತಂ ಕೂರದೊಡಂ ನಿ-।
ನ್ನನುಡಿಯನಾನಾಜಿರಂಗದೊಳ್ ಮಿಾಱುವನೇ ॥ ೧೪ ॥

---

ಎದುರುಗಡೆಯಲ್ಲಿ (ವೈರಿಪಕ್ಷದ) ಸಮಾನನಾಗಿ= ಸಮಾನವ್ಯಕ್ತಿಯುವನಾಗಿ; ಬೆಸದಿರ್ಪವನುಂ= ಸೇರಿಕೊಂಡಿರತಕ್ಕವನಾದರೂ (ಗರ್ವಗೊಂಡು ಇರತಕ್ಕವನಾದರೂ) ತುಱುಕಾರಂ= ಗೋವಳನು, ತುಱುಕಾರ= ಅದೇ ವೃತ್ತಿಯುನ್ನವಲಂಬಿಸಿರುವನೆಂಬರ್ಥದಲ್ಲಿ ಕಾರಪ್ರತ್ಯಯು ಬಂದ ತದ್ಧಿತರೂಪವು) ಆಗೆ= ಆಗಿರಲು; ಮತ್ಸ್ಯಂದನಚೋದನಕ್ರಮುಮದುಂ= (ಮತ್+ಸ್ಯಂದನ) ನನ್ನ ಪಾಲಿಗಿರತಕ್ಕ ಆ ರಥ ಹೊಡೆಯುವ ಕೆಲಸವಾದರೂ, ಪೊಲೆಯಂಗೆ= (ಹೊಲೆಯುನಿಗೆ) ನೀಚನಿಗೆ, ಅಮರ್ದಿರ್ಕುಂ= (ಯೋಗ್ಯವಾಗಿ) ಹೊಂದಿಕೆಯಾಗಿರುವುದು (ಅಮರ್ದು) ಇಲ್ಲಿ ಶಿಥಿಲದ್ವಿತ್ವವು ಅತುಂಟಂ= ಅಂತಹ ನೀಚವೃತ್ತಿಯುನ್ನು, ನೀಂ= ನೀನು, ದಯೆಗೆಯ್ದು= ದೊಡ್ಡ ಮನಸ್ಸುಮಾಡಿ (ಇಲ್ಲಿಯು ವರೆಗೂ ಬಂದು) ಪೇೞ್ದೆ= ಹೇಳಿದೆಯಲ್ಲಾ; ಇದಂ= ಇಂತಹ ಸಂದರ್ಭವನ್ನು, ಆರ್ ಪಡೆವರ್= ಯಾರು ತಾನೇ ಹೊಂದುವರು? (ಪಡೆ= (ಧಾತು) ಉಪಾರ್ಜನೇ, ನಾಮುಪದ= ಸೈನ್ಯ] ಇಂತಹ ಸಂದರ್ಭವು ಯಾರಿಗೂ ಉಂಟಾಗಲಾರದೆಂಬುದು ಸುಸ್ಪಷ್ಟವು) ಉತ್ತಮರ ಕಾರ್ಯವೇನಾದರೂ ಮಾಡಬಹುದಲ್ಲದೆ, ನೀಚರ ಕಾರ್ಯವು ಸಲ್ಲದು, ಇದಿರಲ್ಲಿರತಕ್ಕವನ ಯೋಗ್ಯತೆಯೂ ಅಷ್ಟರಲ್ಲೇ ಇದೆ, ನೀನೆಷ್ಟು ಯೋಚನೆಮಾಡಿ ನನಗೆ ಇಂತಹ ನೈಚ್ಯಾನುಸಂಧಾನವನ್ನು ಮಾಡಿದೆಯೋ ತಿಳಿಯದು. ಒಟ್ಟಿನಲ್ಲಿ ನನ್ನ ದೌರ್ಭಾಗ್ಯದ ಮೂಲಕವೇ ನಾನಿಂತಹ ಮಾತನ್ನು ನಿನ್ನಿಂದ ಕೇಳಬೇಕಾಯಿತಲ್ಲದೆ ಬೇರೇನೂ ಅಲ್ಲವೆಂದು ತಾತ್ಪರ್ಯವು. ಇಲ್ಲಿ ವ್ಯಾಜಸ್ತುತಿಯಿದೆ ॥ ೧೩ ॥

ಎನಿತು— ಇಂತೆಂದು ಕಂದಂ ॥ ಎನಿತು= ಎಷ್ಟು, ಒಲ್ಲದಿರ್ದೊಡಂ= ಮನಸ್ಸು ಬೇಡವೆನಿಸುತ್ತಿದ್ದರೂ, ಸಜ್ಜನರುಂ= (ಸತ್+ಜನ) ಒಳ್ಳೆಯುವರೂ, ಪತಿಹಿತರುಂ= ಸ್ವಾಮಿಯು ಹಿತವನ್ನು ಬಯುಸತಕ್ಕವರೂ, ಅಱಿಯವೇೞ್ಕುಂ= (ಸ್ವತಃ) ತಿಳಿದುಕೊಳ್ಳಬೇಕು ನೀಂ ಇನ್ನು ಎನಿತಂಕೂರದೊಡಂ= ನೀನು ಇನ್ನೆಷ್ಟು ಅಹಿತವನ್ನು ಎಣಿಸುತ್ತಿರುವೆಯಾದರೂ, ಆಂ= ನಾನು, ಆಜಿರಂಗದೊಳ್= ಯುದ್ಧಭೂಮಿಯಲ್ಲಿದ್ದವನಾಗಿ; ನಿನ್ನ ನುಡಿಯುಂ= ನಿನ್ನ ಹೇಳಿಕೆಯನ್ನು; ಮಿಾಱುವೆನೇ= ಅತಿಕ್ರಮಿಸುವೆನೇ [ಮಿಾಱು (ಧಾತು) ಅತಿಕ್ರಮಣೇ] (ನೀನು ಕರ್ಣನಿಗೆ ಸಾರಥ್ಯಮಾಡೆಂದು ನನಗೆ ಹೇಳಬಾರದಾಗಿತ್ತು. ಯೋಚನೆ ಮಾಡದೆ ಹೇಳಿ ನನಗೆ ಅವಮಾನವನ್ನು ಉಂಟುಮಾಡಿದೆ. ನಾನು ಯುದ್ಧದಲ್ಲಿ ನಿನಗೆ ಸಹಾಯ ಮಾಡುವುದಕ್ಕಾಗಿ ಇಲ್ಲಿ ಬಂದು ಸೇರಿದವನಾದ

ವ ॥ ಎಂದು ನೊಂದು ನುಡಿದ ಮದ್ರರಾಜನ ನುಡಿಗೆ ಫಣಿರಾಜಕೇತನ
ನಿಂತೆಂದಂ—

ನೀಮೆನಗಿನಿತಂ ಕೆಮ್ಮನೆ ।
ಮಾಮ ಮನಂನೊಂದು ಬೆಸಸಿದಿರ್ ಬಿನ್ನಪಮಂ ॥
ನೀಮವಧಾರಿಸಿಮೆಂತೆನೆ ।
ಸಾಮಾನ್ಯದ ಮನುಜನಲ್ಲನಂಗಮಹೀಶಂ ॥ ೧೫ ॥
ಕುಲಹೀನನನೆ ಅಪ್ಪೊಡೆ ಕೇ– ।
ವಲಬೋಧಂ ಪರಶುರಾಮನೇನೀಗುಮೆ ನಿ–॥
ರ್ಮಲಿನ ಕುಲಂಗಲ್ಲದೆ ಪಿಡಿ– ।
ಯಲಲ್ಲದಂತಪ್ಪ ದಿವ್ಯಬಾಣಾವಳಿಯಂ ॥ ೧೬ ॥

---

ರಿಂದ ಒಲ್ಲೆನೆಂದು ಹೇಳಿ ಸ್ವಾಮಿಗೆ ಅಹಿತವನ್ನು ಉಂಟುಮಾಡಿಕೊಳ್ಳುವಂತಹ ತಿಳಿಗೇಡಿತನವು ನನ್ನಲ್ಲಿರುವುದಿಲ್ಲ. ಆದ್ದರಿಂದ ಮಾತ್ರ ನಿನ್ನ ಹೇಳಿಕೆಯನ್ನು ವಿಾರಲಾರೆನು ಎಂಬುದು ಭಾವವು. ॥ ೧೪ ॥

ಎಂದು — ಇಂತೆಂದು ವಚನಂ ॥ ಎಂದು = ಹೀಗೆ; ನೊಂದು ನುಡಿದ = ವ್ಯಸನದಿಂದ ಹೇಳಿದ; ನುಡಿಗೆ ಫಣಿರಾಜಕೇತನಂ = ಮಾತಿಗೆ ಪನ್ನಗಪತಾಕನಾದ ದುರ್ಯೋಧನನು; ಇಂತೆಂದಂ = (ಉತ್ತರವಾಗಿ) ಹೀಗೆ ಹೇಳಿದನು ॥

ನೀಮೆನಗೆ — ಇಂತೆಂದು ಕಂದಂ ॥ ಮಾಮ = ಮಾವನಾದ ಶಲ್ಯನೇ; ನೀಂ = ನೀವು; ಮನಂನೊಂದು = ಮನಸ್ಸಿನಲ್ಲಿ ವ್ಯಸನ ಹೊಂದಿದವರಾಗಿ; ಕೆಮ್ಮನೆ = ಸುಮ್ಮಗೆ (ಹೆಚ್ಚು ವಿಚಾರಮಾಡದೇನೇ) ಎನಗೆ ಇನಿತಂಬಿನ್ನಪಮಂ = ನನಗೆ ಇಂತಹ ಅಭಿಪ್ರಾಯವನ್ನು; ಬೆಸಸಿದಿರ್ = ಆಜ್ಞಾಪಿಸಿದಿರಿ; ನೀಂ ಅವಧಾರಿಸಿಂ = ನೀವು ಮನಸ್ಸಿಗೆ ತಂದುಕೊಳ್ಳಿರಿ; ಎಂತು + ಎನೆ = ಹೇಗೆಂದರೆ; ಅಂಗಮಹೀ + ಈಶಂ = ಅಂಗಾಧಿಪನಾದ ಕರ್ಣನು, ಸಾಮಾನ್ಯದ ಮನುಜಂ ಅಲ್ಲಂ = ಅಲ್ಪನು (ಕೇವಲನು) ಆಗಿರುವುದಿಲ್ಲ. (ತಾನು ಹೇಳಿದ ಅಭಿಪ್ರಾಯವನ್ನು ಮುಂದೆ ಬೇರೆ ಬೇರೆ ಆಧಾರಗಳಿಂದ ಹೀಗೆ ಸಮರ್ಥಿಸಿಕೊಳ್ಳುವನು.) ॥ ೧೫ ॥

ಕುಲಹೀನನನೆ — ಇಂತೆಂದು ಕಂದಂ ॥ ಕುಲಹೀನನನೆ = (ಕರ್ಣನು) ಹೀನಕುಲೋತ್ಪನ್ನನೇ ಅಪ್ಪೊಡೆ ಆಗಿದ್ದರೆ; [ಕುಲಹೀನನನೆ + ಅಪ್ಪೊಡೆ = ಎಂಬಲ್ಲಿ ಸಂಧಿಯಿಲ್ಲದುದಕ್ಕೆ ಸೂತ್ರ = ಅವಿಕೃತಿಗಳೆವರ್ಣಮೊವ । ರ್ಣವಂತ್ಯವೆನಿಸಿದನಿಪಾತಮವಧಾರಣೆತ । ಳ್ತವಿಶಂಕೆಗಳೆಂಬಿವಱೊಳ್ ವ್ಯವಹರಿಸದು ಸಂಧಿ–ಶ. ಮ. ದ. ಸೂ ॥೫೬॥] ಕೇವಲಬೋಧಂ = ಪರಮಜ್ಞಾನಿಯಾದ; ಪರಶುರಾಮಂ = ಕ್ಷತ್ರಿಯಾಂತಕನೆನಿಸಿದ

ಮಣಿಕುಂಡಲಮುಂ ಕವಚಂ ।
ಮಣಿಯದ ಚಾರಿತ್ರಮುಗ್ರತೇಜಮುಮಿವಾಯೊ- ॥
ಳ್ಗುಣಮುಂ ಕಲಿತನಮುಮಿವೇಂ ।
ಪ್ರಣತಾರೀ ಸೂತಸುತನೊಳೊಡವುಟ್ಟುಗುಮೇ ॥ ೧೭ ॥

ಕಲಿತನದ ನೆಗಟ್ದ* ಕಸವರ- ।
ಗಲಿತನದ ಪೊದಟ್ದ ಪರಮಕೋಟಿಗೆ ಪೆಱರಾರ್ ॥
ಸಲೆ ಕರ್ಣನಲ್ಲದೆನಿಸುವ ।
ಕಲಿತನಮಂ ಹರಿಗೆ ಕವಚಮಿತ್ತುದೆ ಪೇಟ್ಗುಂ ॥ ೧೮ ॥

---

ಭಾರ್ಗವರಾಮನು; ನಿರ್ಮಲಿನ ಕುಲಂಗೆ ಅಲ್ಲದೆ= ಉತ್ತಮ ಕುಲೋತ್ಪನ್ನನಿಗಲ್ಲದೆ, ಪಿಡಿಯಲಲ್ಲದ= ಸ್ವೀಕರಿಸಿಕೊಳ್ಳಲು ಸಾಧ್ಯವಾಗದ; ಆಂತಪ್ಪ= ಅಷ್ಟು ಪ್ರಭಾವದಿಂದ ಕೂಡಿದ, ದಿವ್ಯಬಾಣ+ಆವಳಿಯುಂ= ದಿವ್ಯಾಸ್ತ್ರಗಳ ಸಮೂಹವನ್ನು, ಈಗುವೆಏಂ= ಕೊಡುವನೊ ಏನು? [ಈ (ಧಾತು) ಪ್ರದಾನೇ] ದಿವ್ಯಜ್ಞಾನಿಯು ವಿಚಾರ ಮಾಡದೆ ಯಾವುದನ್ನೂ ಮಾಡುವುದಿಲ್ಲ. ಭಾರ್ಗವನು ಉಪದೇಶಿಸಬೇಕಾದರೆ ಕರ್ಣನು ಸಾಮಾನ್ಯನಲ್ಲವೆಂಬುದು ಭಾವಾರ್ಥವು; ಕಾವ್ಯಲಿಂಗಾಲಂಕಾರವು ॥ ೧೬ ॥

ಮಣಿಕುಂಡಲಂ—ಇಂತೆಂದು ಕಂದಂ ॥ ಪ್ರಣತಾರೀ(ಪ್ರಣತ+ಅರಿ) ನಮಸ್ಕರಿಸುವಂತೆ ಮಾಡಲ್ಪಟ್ಟ ವೈರಿಗಳುಳ್ಳವನೆಂದು ಪ್ರಖ್ಯಾತನಾದ ಮಾವನೇ; ಮಣಿಕುಂಡಲಮುಂ= ರತ್ನಕುಂಡಲವೂ, ಕವಚಂ= (ಅಭೇದ್ಯವಾದ) ಕಂಚುಕವೂ, ಮಣಿಯದ= ತಪ್ಪಿಬೀಳದ (ಬಾಗದ), ಚಾರಿತ್ರಂ= ನಡತೆಯುಳ್ಳವನೆಂಬ ಖ್ಯಾತಿಯೂ, ಉಗ್ರತೇಜಮುಂ= ಮಹಾತೇಜವೂ, ಕಲಿತನಮುಂ= ಪರಾಕ್ರಮವೂ (ಎಂಬ) ಈ ಒಳ್ಗುಣಮುಂ= ಈ ಸದ್ಗುಣತ್ರಯವೂ ಸೂತಸುತನೊಳ್ = ಸೂತಕುಲೋತ್ಪನ್ನನಲ್ಲಿ, ಒಡವುಟ್ಟುಗುಮೇಏಂ= ಜನ್ಮದಿಂದಲೇ ಒಡನಾಡಿಗಳಾಗಿರಬಹುದೋ ಏನು? (ಒಡನೆ+ಪುಟ್ಟುಗುಂ= ಒಡವುಟ್ಟುಗುಂ) ಒಳ್ಗುಣಮುಂ ಎಂಬುದನ್ನು ಒಂದೊಂದಕ್ಕೂ ಬೇರೆ ಬೇರೆ ವಿಶೇಷಣವನ್ನಾಗಿ, ಅಥವಾ ಕಲಿತನಮುಂ ಎಂಬುದಕ್ಕೆ ಮಾತ್ರವಾಗಿ, ಇಲ್ಲವ ಇಲ್ಲಿ ಹೇಳಿರುವ ಮೂರು ಗುಣಗಳ ಸಮೂಹವಾಗಿಯೂ ತೆಗೆದುಕೊಳ್ಳುವಂತಿದೆ ॥೧೭॥

ಕಲಿತನದ— ಇಂತೆಂದು ಕಂದಂ ॥ ನೆಗಟ್ದ = ಪ್ರಸಿದ್ಧವಾದ (ಇಲ್ಲಿ ಶಿಥಿಲದ್ವಿತ್ವವು); ಕಲಿತನದ= ಪೌರುಷದ; ಪೊದಟ್ದ = (ಲೋಕದಲ್ಲೆಲ್ಲಿಯೂ) ವ್ಯಾಪ್ತವಾದ ಕಸವರದ= ಬಂಗಾರದಂತೆ ಸರ್ವಶ್ಲಾಘ್ಯವಾದ; ಕಲಿತನದ= ವೀರತೆಯು; ಪರಮಕೋಟಿಗೆ= ಅಸಂಖ್ಯತೆಗೆ; ಸಲೆಕರ್ಣಂ ಅಲ್ಲದೆ= ಖಂಡಿತವಾಗಿಯೂ ಕರ್ಣನೊಬ್ಬನೇ ಅಲದೆ: ಪೆಱರಾರ್ = ಬೇರೆಯಾರಿರುವರು? ಎನಿಸುವ= ಎಂದು ಹೇಳಿಸಿಕೊಳ್ಳುವ;

ವ ॥ ಎಂದು ಕುರುಕುಲಚೂಡಾಮಣಿ ಶಲ್ಯನ ಹೃಚ್ಛಲ್ಯಮೆಲ್ಲಮುಂ ಕಟಲೆ
ನುಡಿದೊಡಾತನಿಂತೆಂದಂ—

ಅಱಿಯದೆಯುಂ ವಿಚಾರಿಸದೆಯುಂ ನೃಪ ನೀಂ ನೆಗೞ್ವನ್ನೆಯಲ್ಲೆಯೊ-।
ನಱಿವೆನದಂತೆ ಕರ್ಣನೆಣೆಗಂ ತೊಣೆಗಂ ನೃಪರಾರುಮಿಲ್ಲ ಬೆ- ॥
ಳ್ಕುಱೆ ರಿಪುಸೇನೆ ತೇರನೊಸೆದಾನೆಸಗುತ್ತಿರೆ ಕರ್ಣನಂ ಗೆಲಲ್ ।
ನೆಱೆವರೆ ನಾಳೆ ಫಲ್ಗುಣನುಮಚ್ಯುತನುಂ ರಣರಂಗಭೂಮಿಯೊಳ್ ॥ ೧೯ ॥

---

ಕಲಿತನಮುಂ = (ಕರ್ಣನ) ವಿಕ್ರಮಾತಿಶಯವನ್ನು; ಹರಿಗೆ = ಇಂದ್ರನಿಗೆ, ಕವಚಮಿ
ತ್ತುದೆ = ಅಭೇದ್ಯವಾದ ಕವಚವನ್ನು ಸುಲಿದು ದಾನಮಾಡಿದುದೇ (ಕವಚಮುಂ+
ಇತ್ತುದೆ = ಕವಚಮಿತ್ತುದೆ = ಕ್ರಿಯಾಸಮಾಸವು) ಪೇೞ್ಗಂ = ಹೇಳುವುದು ॥ ೧೮ ॥

ಎಂದು — ಇಂತೆಂದು ವಚನಂ ॥ ಎಂದು = ಈ ಪ್ರಕಾರವಾಗಿ, ಕುರುಕುಲ
ಚೂಡಾಮಣಿ = ಕುರುವಂಶದಲ್ಲಿ ಶಿರೋಭೂಷಣದಂತೆ ಪ್ರಧಾನನೆನಿಸಿದ ದುರ್ಯೋ
ಧನನು; ಶಲ್ಯನ = ಮದ್ರಭೂಪಾಲನ; ಹಚ್ಛಲ್ಯಮೆಲ್ಲಮುಂ = ಹೃತ್ + ಶಲ್ಯ) ಹೃದ
ಯಕ್ಕೆ ನಾಟಿದ ವ್ಯಸನರೂಪವಾದ ದೊಡ್ಡ ಬಾಣಗಳೆಲ್ಲವೂ; ಕಟಲೆ = (ಕಳಚಿ
ಹೋಗುವ ಹಾಗೆ) (ಕಡಿಮೆಯಾಗುವಂತೆ) [ಕಟಿಲ್ (ಧಾತು) ತನುತ್ವೇ] ನುಡಿ
ದೊಡೆ = ಹೇಳಲು; ಆತಂ = ಶಲ್ಯನು, ಇಂತೆಂದಂ = (ಉತ್ತರವಾಗಿ) ಹೀಗೆಂದನು ॥

ಅಱಿಯದೆ — ಇಂತೆಂದು ಚಂ. ಮಾಲಾವೃತ್ತಂ ॥ ನೃಪ = ಅರಸನಾದ
ದುರ್ಯೋಧನನೇ, ನೀಂ = ನೀನು; ಅಱಿಯದೆಯುಂ = ಸರಿಯಾಗಿ ತಿಳಿದುಕೊಳ್ಳ
ದೆಯೂ, ವಿಚಾರಿಸದೆಯುಂ = ನಿಜಸ್ಥಿತಿಯನ್ನು ವಿವೇಚಿಸಿಕೊಳ್ಳದೆಯೂ, ನೆಗೞ್ವ
ನ್ನೆಯಲ್ಲೆ = ಕಾರ್ಯದಲ್ಲಿ ಪ್ರವರ್ತಿಸುವವನು ಅಲ್ಲವಯ್ಯಾ, ಆಂ = ನಾನು, ಅಱಿ
ವೆಂ = ಬಲ್ಲೆನು, ಅದು ಅಂತೆ = (ಕರ್ಣನೇ ಶ್ರೇಷ್ಠನೆಂದು) ನೀನು ಹೇಳಿದುದು
ಹಾಗೆಯೇ ಸರಿ, ಕರ್ಣನ ಎಣೆಗಂತೊಣೆಗಂ = (ಇವೆರಡೂ ಸಾದೃಶ್ಯವಾಚಿಗಳಾದ
ಸಮಾನ ಶಬ್ದಗಳು) = ಕರ್ಣನ ಸರಿಸಮಾನತೆಗೆ (ಬರತಕ್ಕ); ನೃಪರ್ ಆರುಂ ಇಲ್ಲ =
ಅರಸರು ಯಾರೂ ಇರುವುದಿಲ್ಲ, ನಾಳೆ = ನಾಳೆಯ ದಿನ, ಆಂ = ನಾನು, ಒಸೆದು =
ಮನಃಪೂರ್ತಿಯಾದ ಸಂತೋಷದಿಂದ (ಪ್ರಸನ್ನಚಿತ್ತನಾಗಿ) ತೇರಂ ಎಸಗುತ್ತಿರೆ =
ರಥವನ್ನು ಚೋದಿಸುತ್ತಿರಲು, ರಿಪುಸೇನೆ = ವೈರಿಗಳ ಸೈನ್ಯವು, ಬೆಳ್ಕುಱೆ = ಅತ್ಯಾ
ಶ್ಚರ್ಯದಿಂದ ತಬ್ಬಿಬ್ಬಾಗಿರಲು; ಕರ್ಣನಂಗೆಲಲ್ = ಕರ್ಣನನ್ನು ಜಯಿಸಿಕೊಳ್ಳ
ಬೇಕೆಂದು; ಫಲ್ಗುಣನುಂ = (ಫಲುಗುಣೀ ನಕ್ಷತ್ರದಲ್ಲಿ ಜನಿಸಿದವನಾದುದರಿಂದ ಅರ್ಜು
ನನಿಗೆ ಫಲುಗುಣನೆಂಬ ಹೆಸರಾಯಿತು. ಇದು ಆತನಿಗಿರುವ ದಶನಾಮಗಳಲ್ಲಿ

ಒಂದೆಗಡ ಹರಿಯ ಪೇೞ್ದೊಂ– ।
ದಂದದೆ ನರನೆಸಗುವಂತೆ ಕರ್ಣನುಮೆನ್ನಂ– ॥
ದೊಂದೋಜೆಯೊಳೆಸಗದೊಡಾಂ ।
ಸ್ಯಂದನದಿಂದಿೞಿದು ಪೋಪೆನೆಸಗೆಂ ತೇರಂ ॥ ೨೦ ॥
ಎಂಬುದುಮಂಗಮಹೀಪತಿ– ।
ಯಂ ಬರಿಸಿ ಮಹಾಜಿಯಲ್ಲಿ ಮಾವಂ ತಾನೇ–॥
ನೆಂಬನದನಂತೆ ಮೀಱದೊ– ।
ಡಂಬಡು ನೀನೆಂದು ಭೂಭುಜಂ ಪ್ರಾರ್ಥಿಸಿದಂ ॥ ೨೧ ॥

---

ಒಂದಾಗಿದೆ) ಅರ್ಜುನನೂ, ಅಚ್ಯುತನುಂ=ನಾಶರಹಿತನಾದ ಶ್ರೀಕೃಷ್ಣನೂ; ರಣರಂಗದೊಳ್=ಯುದ್ಧಭೂಮಿಯಲ್ಲಿ; ನೆಱೆವರೆ?=ಬಂದು ಸೇರುವರೆ? (ನಾಳೆ ನಾನು ಸಾರಥಿಯಾಗಿರಲು ಕರ್ಣನನ್ನು ಜಯಿಸುವುದು ಆ ಕೃಷ್ಣಾರ್ಜುನರಿಂದ ಸಾಧ್ಯವಾಗದೆಂಬುದು ಸಾರಾಂಶವು. ॥ ೧೯ ॥

ಒಂದೆ— ಇಂತೆಂದು ಕಂದಂ ॥ ಒಂದೆಗಡ=(ಆದರೆ ನನ್ನದು) ಇದೊಂದು ನಿರ್ಧಾರವು; ಹರಿಯಪೇೞ್ದ ಒಂದು ಅಂದದೆ= ಕೃಷ್ಣನು ಹೇಳಿದಂತೆಯೇ;(ಹರಿಯ+ಪೇೞ್ದ) ವಿಭಕ್ತಿಪಲ್ಲಟವು–ಪ್ರಥಮಾರ್ಥದಲ್ಲಿ ಷಷ್ಠೀಪ್ರಯೋಗವಿದು) ನರಂ=ಅರ್ಜುನನು (ನರನಾರಾಯಣರೇ ಅರ್ಜುನ ಕೃಷ್ಣರಾಗಿ ಅವತರಿಸಿರುವರೆಂಬುದಕ್ಕೆ ಪುರಾಣದಲ್ಲಿ ಆಧಾರವಿದೆ.) ಎಸಗುವಂತೆ=ಪ್ರವರ್ತಿಸುವ ಹಾಗೆಯೇ, ಕರ್ಣನುಂ=ಅಂಗಾಧಿಪತಿಯೂ; (ಎನ್ನ+ಎಂದ+ಒಂದು+ಓಜೆಯೊಳ್.) ನಾನು ಹೇಳಿದ ರೀತಿಯಲ್ಲೇ (ವಿಭಕ್ತಿಪಲ್ಲಟವಿದೆ) ಎಸಗದೊಡೆ=ಮಾಡದಿದ್ದರೆ; ಆಂ=ನಾನು; ಸ್ಯಂದನದಿಂದೆ=ರಥದಿಂದ, ಇೞಿದು ಪೋಪೆಂ=ಇಳಿದು ಹೋಗುವೆನು; ತೇರಂ=ರಥವನ್ನು ಚೋದಿಸುವ ಕಾರ್ಯವನ್ನು; ಎಸಗೆಂ=ಮಾಡೆನು. ॥ ೨೦ ॥

ಎಂಬುದುಂ— ಇಂತೆಂದು ಕಂದಂ ॥ ಎಂಬುದುಂ=(ಶಲ್ಯನು) ಹೀಗೆನ್ನಲು; ಭೂಭುಜಂ=ಅರಸನಾದ ದುರ್ಯೋಧನನು; ಅಂಗಮಹೀಪತಿಯಂ=ಅಂಗಾಧಿಪತಿಯಾದ ಕರ್ಣನನ್ನು; ಬರಿಸಿ=ಬರಮಾಡಿ, ನೀಂ=ಕರ್ಣನೇ ನೀನು; ಮಹಾಜಿಯಲ್ಲಿ=(ಮಹಾ+ಆಜಿ)=ನಡೆಯುತಕ್ಕ ಭೀಕರ ಸಂಗ್ರಾಮದಲ್ಲಿ; ಮಾವಂತಾಂ=ಮಾವನಾದ ಶಲ್ಯನು ತಾನು; ಏನೆಂಬಂ=ಏನು ಹೇಳುವನೋ; ಅದಂ ಅಂತೆ=ಅದನ್ನು ಹಾಗೆಯೇ; ಮೀಱದೆ = ಉಲ್ಲಂಘಿಸದೆ; ಒಡಂಬಡು= ಸ್ವೀಕರಿಸಿಕೊಳ್ಳುವವನಾಗು; ಎಂದು= ಈ ಪ್ರಕಾರವಾಗಿ; ಪ್ರಾರ್ಥಿಸಿದಂ= ಯಾಚಿಸಿಕೊಂಡನು. ॥ ೨೧ ॥

ಅ ॥ ಅಂತಿರ್ವರುಮನೊರ್ವರೊರ್ವರೊಳೊಡಂಬಡಿಸಿ ತನ್ನೊಡನೆೞ್ದು ನಿಂದಿರ್ದ ಮದ್ರರಾಜನನಿರಲ್ವೇೞ್ದು ಕರ್ಣನುಂ ತಾನುಂ ನಿಜನಿವಾಸಂಗಳ್ಗೆ ಪೋದರ್ ॥

---

ಅಂತಿರ್ವರುಂ— ಇಂತೆಂದು ವಚನಂ ‖ ಒರ್ವರೊರ್ವರೊಳ್= ಒಬ್ಬರು ಇನ್ನೊಬ್ಬರಲ್ಲಿ, ಅಂತು= ಹಾಗೆಯೇ; ಇರ್ವರುಮಂ =ಇಬ್ಬರನ್ನೂ, ಒಡಂಬಡಿಸಿ= ಸಮಾಧಾನಗೊಳಿಸಿ; ತನ್ನೊಡನೆ =ತನ್ನೊಂದಿಗೆ; ಎೞ್ದು ನಿಂದಿರ್ದ= ಎದ್ದು ನಿಂತಿದ್ದ, ಮದ್ರರಾಜನಂ =ಶಲ್ಯನನ್ನು, ಇರಲ್ವೇೞ್ದು = ಕುಳಿತುಕೊಳ್ಳುವಂತೆ ಹೇಳಿ; ಕರ್ಣನುಂ ತಾನುಂ= ಕರ್ಣನೂ ದುರ್ಯೋಧನನೂ; ನಿಜನಿವಾಸಂಗಳ್ಗೆ= ತಂತಮ್ಮ ವಸತಿಗಳ ಕಡೆಗಾಗಿ; ಪೋದರ್ =ಹೋದರು.

ಎಂಬಲ್ಲಿಗೆ ಕರ್ಣರಸಾಯನದಲ್ಲಿ
ಸಪ್ತಮಗ್ರಾಸವು ಮುಗಿದುದು



## ಅಷ್ಟಮ ಗ್ರಾಸಂ

ಇಂದೆನ್ನ ಮಗನನರ್ಜುನ– ।
ನೊಂದುಂ ತಳ್ವಿಲ್ಲದಟಿವನವನಂ ನೀಂ ಕಾ– ॥
ಯೆಂದು ಸುರಪತಿಯ ಕಾಲ್ವಿಡಿ– ।
ವಂದಮನಿಟಿಸಿದುವು ಪಸರಿಪಿನಕಿರಣಂಗಳ್ ॥ ೧ ॥

---

ಅವತರಣಿಕೆ ॥ ಕರ್ಣನು ಪ್ರಾತರ್ವಿಧಿಗಳನ್ನು ನೆರವೇರಿಸಿ ಶರಕಾರ್ಮುಕವೇ ಮೊದಲಾದ ಯುದ್ಧೋಪಕರಣಗಳಲ್ಲದೆ ಮಿಕ್ಕ ತನ್ನ ಐಶ್ವರ್ಯವೆಲ್ಲವನ್ನೂ ದಾನವಾಡಿ ರಣರಂಗಕ್ಕೆ ಹೊರಡಲು ಉದ್ಯುಕ್ತನಾಗಿ ಮದ್ರರಾಜನನ್ನು ಕಂಡು ನಮಸ್ಕರಿಸಿ ಆತನನ್ನು ತುಷ್ಟಿಗೊಳಿಸಿ ಆತನ ಸಾರಥ್ಯದಿಂದ ಸೇನಾಸಮೇತನಾಗಿ ಹೋಗಿ ಕುರುಕ್ಷೇತ್ರದಲ್ಲಿ ಸೈನ್ಯವನ್ನು ಪದ್ಮವ್ಯೂಹವಾಗಿ ನಿಲ್ಲಿಸುವನು. ಅತ್ತ ಸಂಶಪ್ತಕರು ಸಂಗರಕ್ಕೆ ಬರಬೇಕೆಂದು ನರನನ್ನು ಕರೆದಿದ್ದರು. ಇತ್ತ ಕರ್ಣನನ್ನಿದಿರಿಸಿ ಪಾಂಡವಪತಾಕಿನಿಯು ಎಂದೂ ಕಾಣದ ಬೇನೆಯನ್ನು ಉಣ್ಣುತ್ತಿದ್ದಿತು. ಕರ್ಣನ ಆ ಏಟಿಗೆ ಯುಧಿಷ್ಠಿರನು ಹಣ್ಣಾದನು. ಸಂಶಪ್ತಕರ ಯುದ್ಧವು ಕೊನೆಗಾಣುವ ವೇಳೆಗೆ ಸರಿಯಾಗಿ ಈ ವಾರ್ತೆಯನ್ನು ತಿಳಿದು ಪಾರ್ಥಸಾರಥಿಯು ರಥವನ್ನು ಶಿಬಿರಕ್ಕೆ ಹಿಂತುರುಗಿಸಿ ಬಂದು ನೋಡಲು ನೊಂದ ಧರ್ಮಜನು ವೈರಾಗ್ಯಪರನಾಗಿ 'ನೀನು ಇನಜನನ್ನು ಕೊಂದು ಬಂದೆಯೋ' ಎಂದು ಪ್ರಸ್ತಾವಿಸಿ ನಿಂದಿಸಿದನು. ಆಗ ಪಾರ್ಥನು ವ್ಯಸನಾರ್ತನಾಗಿ ಹರಿಯೊಂದಿಗೆ ಅವರನ್ನು ಸಮಾಧಾನಪಡಿಸಿ ಕರ್ಣನ ವಧೆಗಾಗಿ ಅನುಮತಿಯನ್ನು ಪಡೆದುಕೊಂಡು ರಣರಂಗಕ್ಕೆ ಬಂದನು. ಆಗ ಕೌರವಸೇನೆಯು ಭಯದಿಂದ ಕರ್ಣನನ್ನು ಮೊರೆಯಿಡುತ್ತಿದ್ದಿತು. ಇನಜನಾಗ ಕಡುಮುಳಿದು ಪಾರ್ಥನನ್ನು ಪ್ರತಿಭಟಿಸಲು ಸನ್ನದ್ಧನಾದನು ಎಂಬ ಕಥಾಂಶವು ಈ ಗ್ರಾಸದಲ್ಲಿ ಅಡಕವಾಗಿರುವುದು

ಕರ್ಣನು ಅರ್ಜುನನೊಡನೆ ಭೀಕರಸಂಗ್ರಾಮವೆಸಗುವಂದಿನ ಸೂರ್ಯೋದಯವನ್ನು ಕವಿಯು ಬಹುಸ್ವಾರಸ್ಯವಾಗಿ ಹೀಗೆ ವರ್ಣಿಸುತ್ತಾನೆ—

ಇಂದೆನ್ನ—ಇಂತೆಂದು ಕಂದಂ ॥ ಪಸರಿಪ= ಲೋಕವನ್ನು ವ್ಯಾಪಿಸಿಕೊಳ್ಳತಕ್ಕ; ಇನಕಿರಣಂಗಳ್= ಸೂರ್ಯನ ಕಾಂತಿಗಳು, ಇಂದು= ಈ ದಿನ; ಎನ್ನ ಮಗನಂ= ನನ್ನ ಮಗನಾದ ಕರ್ಣನನ್ನು, ಒಂದುಂತುಳ್ವು+ಇಲ್ಲದೆ= ತಡವೇನೂ ಇಲ್ಲದೆ (ಬಹುಬೇಗನೆ) ಅಟಿವಂ= ನಾಶಪಡಿಸುವನು; ನೀಂ= ನೀನು (ಎಂದರೆ ದೇವೇಂದ್ರನು) ಅವನಂ= ನನ್ನ ಮಗನಾದ ಆ ಕರ್ಣನನ್ನು; ಕಾಯೆಂದು= ಕಾಪಾಡು ಎಂಬುದಾಗಿ; ಸುರಪತಿಯ= ದೇವೇಂದ್ರನ, ಕಾಲ್ವಿಡಿವ= ಕಾಲುಗಳನ್ನು ಹಿಡಿದುಕೊ

ವ ॥ ಆಗಳಂಗರಾಜಂ ತನ್ನಂ ಪರಿಚ್ಛೇದಿಸಿ ನೇಸಱ್ ಮೂಡೆಯಾಜ್ಯಾವೇಕ್ಷಣಂಗೆಯ್ದು ಸವತ್ಸಸುರಭಿಯನಭಿವಂದಿಸಿ ನಿಜರಥದಿವ್ಯಾಸ್ತ್ರಂಗಳುೞಿಯೆ ಪಸುರ್ಮಣಿಯನಪ್ಪೊಡಮುೞಿಯದಂತು ಚಾಗಂಗೆಯ್ದು ಚಾಗಬೀರದ ಪೞಯಿಗೆಯನೆತ್ತಿಸಿ ಪಂಚರತ್ನಗರ್ಭಂಗಳಪ್ಪ ಮಂಗಳ ಜಳಂಗಳಂ ಮಿಂದು ಮೆಯ್ಯನಾಱಿಸಿ ದುಕೂಲಾಂಬರಮನುಟ್ಟು ಪೊಸವಾವುಗೆಯಂ ಮೆಟ್ಟಿ ಕನಕಸಂವ್ಯಾನಸೂತ್ರನಾಚಮಿಸಿ ಕನಕ ಕಮಳಂಗಳಿಂ ಕಮಳಾಕರಬಾಂಧವಂಗರ್ಘ್ಯಮೆತ್ತಿ ಪಾಲ್ಗಡಲ ತೆರೆಯ ನೊರೆಯ ದೊರೆಯ ದುಕೂಲಾಂಬರದೊಳಿಂಬಾಗಿ ಚಲ್ಲಣಮನುಟ್ಟು ಪುಡಿಗತ್ತುರಿಯಂ ತಲೆಯೊಳ್ ತೀವೆ ಪೊಯ್ದು ಪಸಿಯ ನೇತ್ರದಸಿಯ ಪಾಳೆಯೊಳ್ ತಲೆನವಿರಂ ಪಚ್ಚುಗಂಟಿಕ್ಕಿ ಮಣಿಮಯ ಮಕುಟಮಂ ಕವಿದು ತೋರ ನೆಲ್ಲಿಯ ಕಾಯಿಂ ಪಿರಿಯವಪ್ಪ ಮುತ್ತಿನ ಬ್ರಹ್ಮಸೂತ್ರಮಂ ನೆಟಲಿಕ್ಕಿ ಪಸದನಮನೆನಗಿಂದಿನಿತೆ ಎಂಬಂತೆ ನೆಱೆಯೆ ಕೆಯ್ಗೆಯ್ದು ಬಂದು ಮದ್ರರಾಜಂಗೆ ಪೊಡೆಮಟ್ಟು ಸನ್ನಣಂಗಳೆಲ್ಲ ಮನಾತಂಗೆ ನೆಱೆಯೆ ತುಡಿಸಿ—

---

ಳ್ಳುವ, ಅಂದಮಂ = ರೀತಿಯನ್ನು, ಇೞಿಸಿದುವು = ನಿಂದಿಸಿದುವು. ಕರ್ಣನ ತಂದೆಯಾದ ಸೂರ್ಯನು ಅರ್ಜುನನ ತಂದೆಯಾದ ದೇವೇಂದ್ರನನ್ನು ಕುರಿತು ‘ಅಯ್ಯಾ ನಿನ್ನ ಮಗನು ನನ್ನ ಮಗನನ್ನು ಕೊಲ್ಲದ ಹಾಗೆ ಮಾಡೆಂದು ಕೇಳಿಕೊಳ್ಳುತ್ತ ಕಾಲುಗಳನ್ನು ಹಿಡಿದುಕೊಳ್ಳುವ ಹಾಗೆ ಸೂರ್ಯಕಿರಣಗಳು ಪಸರಿಸತೊಡಗಿದುವು (ಲೋಕದಲ್ಲಿ ಮಕ್ಕಳೇನಾದರೂ ಅನರ್ಥಗಳನ್ನು ಮಾಡಿಕೊಂಡರೆ ವಿವೇಕಿಗಳಾದ ತಾಯ್ತಂದೆಗಳು ಮಕ್ಕಳಪರವಾಗಿ ಬೇರೆಯವರೊಂದಿಗೆ ಕ್ಷಮಾಯಾಚನೆಯನ್ನು ಮಾಡಿಕೊಳ್ಳುವ ರೀತಿಯು ಇಲ್ಲಿ ಸರಿಯಾಗಿ ತೋರುತ್ತಿದೆ ) ಉತ್ಪ್ರೇಕ್ಷಾಲಂಕಾರವು ॥ ೧ ॥

ಆಗಳ್ — ಇಂತೆಂದು ವಚನಂ ॥ ಆಗಳ್ = ಆ ವೇಳೆಗೆ, ತನ್ನಂ = ತನ್ನ ವಿಚಾರವನ್ನು, ಪರಿಚ್ಛೇದಿಸಿ = ನಿರ್ಧರಿಸಿಕೊಂಡು; ನೇಸಱ್ ಮೂಡೆ = ಆದಿತ್ಯನು ಉದಯಿಸಲು, ಅಂಗರಾಜಂ = ಕರ್ಣನು; ಆಜ್ಯಾವೇಕ್ಷಣಂಗೈದು = (ಆಜ್ಯ + ಅವೇಕ್ಷಣಮಂ + ಗೆಯ್ದು) ದನದ ತುಪ್ಪವನ್ನು ನೋಡಿ; ಸವತ್ಸಸುರಭಿಯಂ ಅಭಿವಂದಿಸಿ = ಕರುವಿನೊಂದಿಗಿರುವ ಧೇನುವನ್ನು ನಮಸ್ಕರಿಸಿ, ನಿಜರಥ ದಿವ್ಯಾಸ್ತ್ರಂಗಳ್ ಉೞಿಯೆ = ತನ್ನ ರಥ ಬಾಣವೇ ಮೊದಲಾದ ಯುದ್ಧೋಪಕರಣಗಳು ಮಾತ್ರವೇ ಬಾಕಿ ಉಳಿಯುವ ಹಾಗೆ, ಪಸುರ್ಮಣಿಯಂ ಅಪ್ಪೊಡಂ = ಅನರ್ಘ್ಯಗಳಾದಪಚ್ಚೆಯ ರತ್ನಗಳನ್ನಾದರೂ ಉೞಿಯದಂತು = ಬಾಕಿ ಇರದ ಹಾಗೆ, ಚಾಗಂಗೆಯ್ದು = ದಾನಮಾಡಿ (ಚಾಗ

(ಸಂ) ತ್ಯಾಗ ಚಾಗಮುಂ+ಗೆಯ್ದು = ಚಾಗಂಗೆಯ್ದು ಕ್ರಿ. ಸಮಾಸ) ಚಾಗಬೀರದ= ತ್ಯಾಗಮಾಡುವುದರಲ್ಲಿ ತಾನೇ ಮೊದಲಿಗನೆಂಬ ಹೆಗ್ಗಳಿಕೆಯನ್ನು ಸಾರುವಂತಿರುವ, ಪಟಿಯಿಗೆಯಂ– ಪತಾಕೆಯನ್ನು (ಪತಾಕೆ (ದ್ಭ) ಪಟಿಯಿಗೆ) ಎತ್ತಿಸಿ= ಮೇಲೆ ತೋರುವಂತೆ ಎತ್ತಿ ಕಟ್ಟಿಸಿ; ಪಂಚರತ್ನ ಗರ್ಭಂಗಳಪ್ಪ= ಪಂಚರತ್ನಗಳಿಂದ ಕೂಡಿರುವ (ನಾಂದಿ ಮೊದಲಾದ ವೈದಿಕ ಕ್ರಿಯೆಗಳಲ್ಲಿ ಕಲಶಪಾತ್ರೆಗಳಿಗೆ ಹಿರಣ್ಯವನ್ನು ಹಾಕುವ ಸಂಪ್ರದಾಯುವಿದೆ. ನರಕಚತುರ್ದಶಿಯಂದು ಸ್ನಾನಮಾಡುವಾಗಲೂ ನೀರಿನ ಹಂಡೆಗೆ ನಾಣ್ಯಗಳನ್ನು ಹಾಕಿಡುವ ಪದ್ಧತಿಯುಂಟು) ಮಂಗಳಜಳಂಗಳಂ= ಪುಣ್ಯಕರವಾದ ತೀರ್ಥೋದಕಗಳನ್ನು, ಮಿಂದು= ಸ್ನಾನಮಾಡಿ; ಮೆಯ್ಯಂ ಆಱಿಸಿ= ಧೂಪವೇ ಮೊದಲಾದ ಸುರಭಿದ್ರವ್ಯಗಳನ್ನು ಕೆಂಡಕ್ಕೆ ಹಾಕಿ ಉಂಟಾಗುವ ಹೊಗೆಗೆ ಮೆಯ್ಯೊಡ್ಡಿ ಒಣಗಿಸುವುದು ಸಂಪ್ರದಾಯವು) ದೇಹದಲ್ಲಿರುವ ಆರ್ದ್ರತೆಯು ಆರುವಂತೆ ಮಾಡಿ; ದುಕೂಲಾಂಬರಮುಂಉಟ್ಟು= ರೇಶ್ಮೆಯ ಉಡಿಗೆಯನ್ನು ಧರಿಸಿ; ಪೊಸವಾವುಗೆಯಂ= ಹೊಸತಾದ ಪಾದುಕೆಯನ್ನು (ಪೊಸತು+ಪಾವುಕೆ= ಪೊಸವಾವುಗೆ; ಪಾದುಕ (ದ್ಭ) ಪಾವುಗೆ ಜಾತ್ಯೇಕವಚನ; ಮೆಟ್ಟಿ= ಕಾಲಿಗೆ ಹಾಕಿಕೊಂಡು; ಕನಕಸಂವ್ಯಾನಸೂತ್ರಂ= ಹೊನ್ನಿನ ಜರಿಗೆಗಳುಳ್ಳ ಉತ್ತರಿಗೆಯನ್ನು ಹಾಕಿಕೊಂಡವನಾಗಿ; ಆಚಮಿಸಿ= ಆಚಮನ ಮಾಡಿಕೊಂಡವನಾಗಿ (ಅಂಗೈಯಲ್ಲಿ ಸ್ವಲ್ಪ ನೀರುಹಾಕಿ ಮೂರುಬಾರಿ ಕುಡಿಯುವುದಕ್ಕೆ ಆಚಮನ ಮಾಡುವುದೆಂದು ಹೆಸರು) ಕನಕಕಮಲಂಗಳಿಂ= ಸ್ವರ್ಣ ಕಮಲಗಳಿಂದ (ಹೊಂದಾವರೆಗಳಿಂದ) ಕಮಲಾಕರ ಬಾಂಧವಂಗೆ= ಸೂರ್ಯನಿಗೆ (ಕಮಲಪ್ರಿಯನಿಗೆ ಕಮಲಗಳಿಂದಲೇ ಅರ್ಘ್ಯ ಕೊಡುವುದರ ಔಚಿತ್ಯವನ್ನು ಊಹಿಸಿಕೊಳ್ಳಬೇಕು) ಅರ್ಘ್ಯವೆತ್ತಿ = ಅರ್ಘ್ಯವನ್ನು ನೀಡಿ (ಅರ್ಘ್ಯ ಕುಡಿಯುವುದಕ್ಕೆ ಕೊಡುವ ಜಲ) ಪಾಲ್ಗಡಲ ತೆರೆಯ ನೊರೆಯ ದೊರೆಯ= ಕ್ಷೀರಸಾಗರದ ತೆರೆಗಳ ಚಲನೆಯಿಂದೇಳುವ ಬುದ್ಬುದಗಳೊಡನೆ ಸಮಾನವಾದ (ಹಾಲು ಸಮುದ್ರದ ನೊರೆಯು ಎಷ್ಟು ಬಿಳುಪಿರಬಹುದೋ ಅದರಂತೆಯೇ ಬಿಳುಪಾದ) ದುಕೂಲಾಂಬರದೊಳ್= ಬೆಳ್ಳಗೆ ಬೆಳಗುವ ಪಟ್ಟೆಯಿಂದ, ಇಂಬಾಗಿ= ಯುದ್ಧದ ಉಡಿಗೆಗೆ ಒಪ್ಪುವ ಹಾಗೆ; ಚಲ್ಲಣಮಂ ಉಟ್ಟು= ವೀರಗಾಸೆಯನ್ನು ಧರಿಸಿ (ಗಂಡುಡಿಗೆಯನ್ನು ಧರಿಸಿದವನಾಗಿ) ಪುಡಿಗತ್ತುರಿಯಂ= ಕಸ್ತೂರಿಯ ಪುಡಿಯನ್ನು; ತಲೆಯೊಳ್ ತೀವೆ ಪೊಯ್ದು= ತಲೆಯಲ್ಲಿ ತುಂಬುವಂತೆ ಹಾಕಿಕೊಂಡು (ಕೂದಲು ಕಪ್ಪಾಗಿರುವುದರಿಂದ ಸುವಾಸನೆಗಾಗಿ ಕಸ್ತೂರಿಯನ್ನೆರಚಿಕೊಳ್ಳುವುದರಲ್ಲಿ ಔಚಿತ್ಯವಿದೆ) ಪಸಿಯನೇತ್ರದ= ಹಚ್ಚನೆ ಕಂಗೊಳಸುವ ಕಂಗಿನ; ಯಾ, ಬೆತ್ತದ; ಅಸಿಯ= (ತೆಳ್ಳಗಾದ) ಕೃಶವಾದ; ಪಾಳೆಯೊಳ್= ಹಾಳೆಯಲ್ಲಿ (ಅಡಿಕೆಮರದ ಹಾಳೆಯ ಹೊರಮೈಯ್ಯನ್ನೆಬ್ಬಿಸಿ ನಾರಿನಂತೆ ಉಪಯೋಗಿಸುವ ಕ್ರಮವೀಗಲೂ ಇದೆ)

ತಿದಿಯುಗಿದು ಕೊಟ್ಟೆನೊಡವು- ।
ಟ್ಟಿದ ಕವಚಮನಮರಪತಿಗೆ ಮುನ್ನಿನ್ನೆನಗೊ- ॥
ಪ್ಪದು ಮಱೆಯನಾಸೆವಡಲೆಂ- ।
ದದಟನಣಂ ತುಡನೆ ಕವಚಮಂ ರಾಧೇಯಂ ॥ ೨ ॥

---

ತಳೆನವಿರಂ = ಕೂದಲುಗಳನ್ನು, ಪಚ್ಚುಗಂಟಿಕ್ಕಿ = ಪ್ರತ್ಯೇಕ ಪ್ರತ್ಯೇಕವಾಗುವಂತೆ ವಿಭಾಗಿಸಿ ಕಟ್ಟಿ, ಮಣಿಮಯಮಕುಟಮಂ = ರತ್ನಖಚಿತವಾದ ಕಿರೀಟವನ್ನು (ತಲೆಗೆ ಕವಿದು = ಕೂದಲಗಂಟುಗಳನ್ನು ಆವರಿಸುವಂತೆ ಇಟ್ಟು, ತೋರನೆಲ್ಲಿಯ ಕಾಯಿಂ = ದೊಡ್ಡ ನೆಲ್ಲಿಕಾಯಿಗಳಿಗಿಂತಲೂ, ಪಿರಿಯವು ಅಪ್ಪ = ದೊಡ್ಡವಾಗಿ ಇರುವ, ಮುತ್ತಿನ= ಆಣಿ ಮುತ್ತುಗಳನ್ನು ಕೋದುಮಾಡಿದ; ಬ್ರಹ್ಮಸೂತ್ರಮಂ= ಉಪವೀತವನ್ನು, ಎಟಿ ಲಿಕ್ಕಿ = ನೇತಾಡುವಂತೆ ಬಿಟ್ಟು (ಜೋಲುಬಿಟ್ಟು) ಪಸದನಮಂ = (ಪ್ರಸಾಧನ (ದ್ಭ) ಪಸದನ) ಭೂಷಣಜಾತವನ್ನು, ಎನಗೆ ಇಂದು ಇನಿತೆ ಎಂಬಂತೆ = ಈ ದಿನ ನನಗೆ ಇಷ್ಟೇ ಎಂಬ ಹಾಗೆ, ನೆಱೆಯೆ = ಪೂರ್ಣವಾಗಿ, ಕೆಯ್ಗೆಯ್ದು = ಧರಿಸಿಕೊಂಡವನಾಗಿ (ಕೆಯ್ಗೆ ಯ್ = ಭೂಷಣೋದ್ವಹನೇ) ಬಂದು ಮದ್ರರಾಜಂಗೆ ಪೊಡೆಮಟ್ಟು = ಬಂದು ಶಲ್ಯನಿಗೆ ನಮಸ್ಕರಿಸಿ; ಸನ್ನಣಂಗಳೆಲ್ಲಮಂ = ಎಲ್ಲಾ ವಿಧದ ಆಭರಣಗಳನ್ನೂ (ಯುದ್ಧರಂಗಕ್ಕೆ ಹೋಗಲಿರುವ ಉಡಿಗೆತೊಡಿಗೆಗಳನ್ನೂ, ಸನ್ನಾಹ (ದ್ಭ) ಸನ್ನಣ) ಆತಂಗೆ = ಆ ಶಲ್ಯನಿಗೆ; ನೆಱೆಯೆ = ಸಂಪೂರ್ಣ ಭೂಷಿತನಾಗುವಂತೆ, ತುಡಿಸಿ = ತೊಟ್ಟುಕೊಳ್ಳುವ ಹಾಗೆ ಮಾಡಿ ॥

ತಿದಿಯುಗಿದು — ಇಂತೆಂದು ಕಂದಂ ॥ ಮುನ್ನೆ = ಮೊದಲು (ಹಿಂದೆಯೇ); ಒಡವುಟ್ಟಿದ = ಹುಟ್ಟುವಾಗಲೇ ದೇಹದೊಡನೆ ಅಂಟಿಕೊಂಡಿದ್ದ; ಕವಚಮಂ = ಕಂಚುಕವನ್ನು; ತಿದಿಯುಗಿದು = ತಿದಿಯನ್ನು ಉಗಿವಂತೆ ಉಗಿದು (ತಿದಿಯನ್ನು ಸುಲಿಯುವಂತೆ ಸುಲಭವಾಗಿ ಸುಲಿದು) ಅಮರಪತಿಗೆ = ಇಂದ್ರನಿಗೆ; ಕೊಟ್ಟೆಂ = ದಾನಮಾಡಿದೆನು; (ಅದ್ದರಿಂದ) ಇನ್ನು = ಇನ್ನು ಮೇಲೆ; ಎನಗೆ = ನನಗೆ; ಮಱೆಯಂ = ದೇಹವನ್ನು ಮರೆಯಿಸುವ ಕವಚವನ್ನು; ಆಸೆವಡಲ್ ಒಪ್ಪದು = ಇಚ್ಛಿಸುವುದಾಗದು; ಎಂದು = ಎಂಬುದಾಗಿ, ಅದಟಂ = ಧೀರನಾದ; ರಾಧೇಯಂ = ರಾಧೆಯಿಂದ ಪೋಷಿಸಲ್ಪಟ್ಟವನಾದ ಕರ್ಣನು, ಕವಚಮಂ ಅಣಂ = ಕಂಚುಕವನ್ನೇನೂ; ತುಡನೆ = ಧರಿಸಿಕೊಳ್ಳದಾದನು. ತುಡನೆ ಎಂಬಲ್ಲಿ ನಿಷೇಧಾರ್ಥದ ಎಕಾರವು; (ಸಹಜವಾಗಿದ್ದ ಕವಚವನ್ನೇನೂ ಸಂಕೋಚಪಡದೆ ದಾನಮಾಡಿದ ತನಗೆ ಕೃತ್ರಿಮಕಂಚುಕದ ಹಂಗೇನೆಂದು ಆ ಧೀರನು ಕಂಚುಕವಿಲ್ಲದೇನೇ ಯುದ್ಧರಂಗಕ್ಕೆ ತೆರಳುವವನಾದನು)॥ ೨ ॥

ವ ॥ ಆಗಳ್ ಮದಗಜಕಕ್ಷಧ್ವಜವಿರಾಜಿತಮಪ್ಪ ತನ್ನ ಪೊನ್ನ ರಥಮಂ ಮ-
ದ್ರರಾಜನನೇಱಲ್ವೇೞ್ದು ಮೂಱು ಸೂೞ್ ಬಲವಂದು ಪೊಡವಟ್ಟು
ತನ್ನ ಸಗ್ಗಮೇಱುವುದನನುಕರಿಸುವಂತೇಱ ನೆಲನಂಬರದೆಡೆಗೆ ಬ-
ರ್ಪಂತೆ ರಣರಂಗಭೂಮಿಗೆವಂದು ಕುರುರಾಜಧ್ವಜಿನಿಯಂ ಪದ್ಮವ್ಯೂ-
ಹಮನೊಡ್ಡಿದೊಡೆ—

ಕಂಸಾರಿಸಖಂ ಪರಿವಿ- ।
ಧ್ವಂಸಿತರಿಪುನೃಪಸಮೂಹನೊಡ್ಡಿದನಾಗಳ್ ॥
ಹಂಸವ್ಯೂಹಮನುತ್ತುಂ- ।
ಗಾಂಸಂ ತಾಂ ವಿಬುಧವನಜವನಕಳಹಂಸಂ ॥ ೩ ॥

---

ಆಗಳ್ — ಇಂತೆಂದು ವಚನಂ॥ಆಗಳ್ = ಆ ವೇಳೆಗೆ; ಮದಗಜಕಕ್ಷಧ್ವಜವಿರಾಜಿತಂ ಅಪ್ಪ= ಮದಗಜವು ವಾಸಿಸತಕ್ಕ ಅರಣ್ಯವೇ ಗುರುತಾಗಿರುವ (ಅರಣ್ಯದ ಚಿತ್ರವುಳ್ಳ) ಧ್ವಜ= ಧ್ವಜಸ್ತಂಭದಿಂದ; ವಿರಾಜಿತಂ ಅಪ್ಪ= ಶೋಭಿಸುತ್ತಿರುವುದಾದ, ತನ್ನ ಪೊನ್ನರಥಮಂ= ತನ್ನ ಹೇಮನಿರ್ಮಿತವಾದ ರಥವನ್ನು; ಮದ್ರರಾಜನಂ= ಶಲ್ಯನನ್ನು, ಏಱಲ್ವೇೞ್ದು = ಹತ್ತುವಂತೆ ಹೇಳಿ; ಮೂಱುಸೂೞ್ ಬಲವಂದು= ಮೂರು ಸಾರಿ ಪ್ರದಕ್ಷಿಣೆ ಮಾಡಿ- ಪೊಡೆಮಟ್ಟು= ನಮಸ್ಕರಿಸಿ, ತನ್ನ ಸಗ್ಗಮೇರುವುದಂ= ತಾನು ಸ್ವರ್ಗಲೋಕಕ್ಕೆ ಹೋಗುವುದನ್ನು (ತಾಂ ಎಂಬ ಪ್ರಥಮಾರ್ಥದಲ್ಲಿ ಷಷ್ಠಿ) ಅನುಕರಿಸುವಂತೆ= ಅಭಿನಯಿಸುವ ಹಾಗೆ; ಏಱ= ಹತ್ತಿ; ನೆಲಂ ಅಂಬರದೆಡೆಗೆ ಬರ್ಪಂತೆ= ಭೂಮಿಯು ಆಕಾಶದತ್ತ ಬರುವಹಾಗೆ (ಬಹುಬೇಗನೆ ಎಂದು ತಿಳಿಯಬೇಕು) ರಣರಂಗ ಭೂಮಿಗೆವಂದು= ಯುದ್ಧಭೂಮಿಗೆ ಬಂದು; ಕುರುರಾಜಧ್ವಜಿನಿಯಂ= ಕೌರವ ಸೇನೆಯನ್ನು; ಪದ್ಮವ್ಯೂಹಮಂ ಒಡ್ಡಿದೊಡೆ= ಪದ್ಮವ್ಯೂಹವಾಗಿ ನಿಲ್ಲಿಸಲು ॥ಉತ್ಪ್ರೇಕ್ಷೆಯಿದೆ॥

ಕಂಸಾರಿ — ಇಂತೆಂದು ಕಂದಂ ॥ ಆಗಳ್ ಆ ಕಾಲದಲ್ಲಿ; ಉತ್ತುಂಗಾಂಸಂ= ಉನ್ನತವಾದ ಹೆಗಲುಗಳುಳ್ಳವನೂ (ವೃಷಸ್ಕಂಧನು ಎಂಬ ತಾತ್ಪರ್ಯವು) ವಿಬುಧವನಜವನಕಳಹಂಸಂ= ವಿದ್ವಾಂಸರೆಂಬ ತಾವರೆಗಳ ಗುಂಪಿಗೆ ರಾಜಹಂಸನಾಗಿಯೂ( ವಿಶೇಷ ಜ್ಞಾನಿಯೆಂದು ತಾತ್ಪರ್ಯವು) ಪರಿವಿಧ್ವಂಸಿತರಿಪುನೃತಸಮೂಹಂ= ಸಂಪೂರ್ಣ ನಾಶಪಡಿಸಲ್ಪಟ್ಟ ವೈರಿರಾಜರ ಗುಂಪುಗಳುಳ್ಳವನೂ ( ಅಸಮಾನವೀರನೆಂಬುದು ತಿಳಿಯುವುದು) ಕಂಸಾರಿಸಖಂ= ಕೃಷ್ಣನ ಸ್ನೇಹಿತನಾದ (ಭಾವ ಮೈದುನನೂ ಆಗಿರುವ [ಕಂಸ ಯದುವಂಶದ ಉಗ್ರಸೇನನ ಮಗನು. ಮಥುರೆಯ ಅರಸನು. ಜರಾಸಂಧನ ಪುತ್ರಿಯರಾದ ಅಸ್ತಿಪ್ರಾಸ್ತಿಯರು ಇವನ ಹೆಂಡಂದಿರು. ಕಾಲನೇಮಿಯೆಂಬ ರಾಕ್ಷಸನ ಅಂಶದಿಂದ ಜನಿಸಿದವನು. ಉಗ್ರಸೇನನರಾಣಿ ಒಮ್ಮೆ ಸಖಿಯರಸಂಗಡ ಸ್ನಾನಕ್ಕಾಗಿ ಯಮುನಾ

ವ ॥ ಅಂತೊಡ್ಡಿದೊಡ್ಡಿನೆರಡುಂ ಬಲದ ನಾಯಕರುಂ ತಮ್ಮ ಕೋಪಾಗ್ನಿಗಳನೆ ಬೀಸುವಂತೆ ಕೆಯ್ವೀಸಿದಾಗಳಂದೆರಡುಂ ಬಲಮುಗ್ರಕೋಪದಿಂ ತಱ್ತಱಿದುವು. ಅನ್ನೆಗಂ ದುರ್ಯೋಧನಂಗಾಪ್ತರಪ್ಪ ಸಂಸಪ್ತಕರತಿರಥಮಥನನ ರಥಮುಂ ತಮ್ಮತ್ತ ತೆಗೆಯಲೊಡಮವರ ರಥಕ್ಕೆ ಮದಾಂಧಗಂಧಸಿಂಧುರದಂತಮ್ಮನಗಂಧವಾರಣಂ ಪರಿದು ಸಂಸಪ್ತಕಬಲಕ್ಕಾಳ್ದನಾಗಿರ್ದ ಸುಶರ್ಮನಂ ರಾವಣನಂ ರಾಘವಂ ಕೊಲ್ವಂತೆ ವಿದ್ವಿಷ್ಟವಿದ್ರಾವಣಂ ಕೊಂದೊಡುಱಿದ ನಾಯಕರೆಲ್ಲರ್ ತಮ್ಮಾಳ್ದನ ಸಾವಂ ಕಂಡು ರಿಪುಕುರಂಗಕಂಠೀರವನಂ ಮಾರ್ಕೊಂಡು ಕಾದುತ್ತಿರ್ಪನ್ನೆಗಮಿತ್ತ ಕರ್ಣನುಮುದೀರ್ಣವೀರರಸಾಸ್ವಾದನಲಂಪಟನಾಗಿ ನೀಮೆಲ್ಲಮಿಂದೆನ್ನ ಕಾಳೆಗಮುಂ ಸುರಿಗೆಗಾಳೆಗಮುಂ ನೋಟ್ಟಂತೆ ನೋಟ್ಟುದೆಂದು ಕೌರವಬಲದ ನಾಯಕರೆಲ್ಲರುಮನೊಡ್ಡಿ ಪಾಂಡವಬಲಕ್ಕೆ ಮಿಱ್ತು ಬರ್ಪಂತೆ ಬಂದು ತಾಗಿದಾಗಳ್ ತನಗಿದಿರೊಳದಿರದಾಂತ ಸೋಮಕಶ್ರೀಜಯಪ್ರಮುಖಕೋಸಲಾಧೀಶಸೈನ್ಯಂಗಳನಲ್ಲಕಲ್ಲೋಲಂ ಮಾಡಿ ಪೆಸರಱಿಕೆಯ ನಾಯಕರನಱುವತ್ತು ಸಾಸಿರ್ವರನೊರ್ವನಂ ಕೊಲ್ವಂತೆ ಕೊಂದು ನಿಟ್ಟಾಲಿಗೊಂಡು ಯುಧಿಷ್ಠಿರನಂ ಮುಟ್ಟೆವಂದಾಗಳ್—

---

ನದಿಗೆ ಹೋಗಿದ್ದು ಕಾಮುಪರವಶೆಯಾಗಿ ತನ್ನ ಪತಿಯನ್ನು ಸ್ಮರಿಸಿಕೊಂಡಳು. ಕೂಡಲೆ ದ್ರುಮಿಲನೆಂಬ ರಾಕ್ಷಸನು ಉಗ್ರಸೇನನ ರೂಪದಿಂದ ಅಲ್ಲಿಗೆ ಬಂದು ಆಕೆಯೊಂದಿಗೆ ಸೇರಿದನು. ರಾಣಿ ಕೆಲವು ಕುರುಹುಗಳಿಂದ ಇವನನ್ನು ಉಗ್ರಸೇನನಲ್ಲವೆಂದು ಶಂಕಿಸಿ ಅವನಿಂದ ನಿಜಸ್ಥಿತಿಯನ್ನು ತಿಳಿದು ರೋಷಭರದಿಂದ "ನಿನ್ನ ದುರ್ಬೀಜದಿಂದ ಜನಿಸಿದವನು ಯದುವಂಶದವನಿಂದಲೇ ಸಾಯಲಿ" ಎಂದು ಶಪಿಸಿದಳು ಕೊನೆಗೆ ಕೃಷ್ಣನಿಂದ ಹತನಾದನು.] ತಾಂ= ಅರ್ಜುನನು ತಾನು, ಹಂಸವ್ಯೂಹಮುಂ ಒಡ್ಡಿದಂ = ಸೈನ್ಯವೆಲ್ಲವನ್ನೂ ಹಂಸದ ಆಕೃತಿಯಿಂದ ನಿಲ್ಲಿಸಿದನು. "ವಿಬುಧವನಜವನಕಳಹಂಸಂ" ಎಂಬ ವಿಶೇಷಣವು ಅರ್ಜುನನಿಗೂ ಅಭೇದ್ಯವಾಗಿ ಅರಿಕೇಸರಿಗೂ, ಕವಿಸಂಪನಿಗೂ ಅನ್ವಯಿಸುವಂತೆ ಕಾವ್ಯದ ಹಲವೆಡೆಗಳಿಂದ ತಿಳಿದುಬರುವುದು ಅರ್ಜುನನ ವರ್ಣನೆಯು ಬರುವಲ್ಲೆಲ್ಲಾ ಕವಿಯು ಎದೆಯುಬ್ಬಿ ವರ್ಣಿಸಲು ಮುಂದೆ ಬರುವಂತೆ ಕಾಣುವುದು. ಕರ್ಣನು ಪದ್ಮವ್ಯೂಹವೊಡ್ಡಿದರೆ ವಿಬುಧವನಜವನಕಳಹಂಸನು ಹಂಸವ್ಯೂಹವೊಡ್ಡುವುದರಲ್ಲಿ ಔಚಿತ್ಯವಿದೆ. ರೂಪಕಪರಿಕರಾಲಂಕಾರಗಳಿವೆ ॥ ೩ ॥

ಅಂತು — ಇಂತೆಂದು ವಚನಂ ॥ ಅಂತು=ಹಾಗೆ, ಒಡ್ಡಿದ=ಪ್ರತಿಭಟಿಸಲು ತಯಾರಾಗಿನಿಂತಿದ್ದ; ಒಡ್ಡಿನ=ಸೈನ್ಯದ; ಎರಡುಂ ಬಲದ ನಾಯಕರುಂ=ಉಭಯ

ಪಕ್ಷದ ಸೇನಾನಿಗಳೂ; ತಮ್ಮ=ತಮ್ಮಲ್ಲೇ ಉಂಟಾಗುತ್ತಿರುವ, ಕೋಪಾಗ್ನಿಗಳನೆ= ಕ್ರೋಧರೂಪವಾದ ಬೆಂಕಿಗಳನ್ನೇ, ಬೀಸುವಂತೆ=ಗಾಳಿಹಾಕಿ ಪ್ರೋತ್ಸಾಹಿಸುವ ಹಾಗೆ, ಕೆಯ್ವೊಸಿದಾಗಳ್=ತೋಳುಗಳನ್ನು ಬೀಸಿಕೊಳ್ಳುತ್ತಿರಲು; ಅಂದು=ಆ ದಿನ, ಎರಡುಂ ಬಲಂ=ಪಕ್ಷ ಪ್ರತಿಪಕ್ಷಗಳ ಸೈನ್ಯಗಳು; ಉಗ್ರಕೋಪದಿಂ=ಅತಿಯಾದ ಮುಳಿಸಿಂದ, (ತಱ್ತು+ಇಱಿದುವು) ತಱ್ತಿಱಿದುವು=ಒಬ್ಬರಮೇಲೊಬ್ಬರಂತೆ ತಾಗಿ ಸೈನ್ಯಗಳು ಅನ್ಯೋನ್ಯ ಹೋರಾಡಿದುವು, ಅನ್ನೆಗಂ=ಅಷ್ಟರಲ್ಲಿ, ದುರ್ಯೋಧನಂಗೆ ಆಪ್ತರ್ ಅಪ್ಪ=ದುರ್ಯೋಧನನ ವಿಶ್ವಾಸಕ್ಕೆ ಪಾತ್ರರಾದ, ಸಂಸಪ್ತಕರ್=ಸಂಶಪ್ತಕರೆಂಬ ದೈತ್ಯವರ್ಗವು, [ಸಂಸಪ್ತಕ—ಯುದ್ಧದಲ್ಲಿ ಶಪಥಮಾಡಿ (ಆಣೆಯಿಟ್ಟು) ಕೊಂಡು ಹೋರಾಡುವವರಿಗೆಲ್ಲ ಈ ಹೆಸರು ಸಲ್ಲುತ್ತದೆ ಸಾಮಾನ್ಯವಾಗಿ ಭಾರತಯುದ್ಧದಲ್ಲಿ ತ್ರಿಗರ್ತರಾಜನಾದ ಸುಶರ್ಮ, ಅವನ ತಮ್ಮಂದಿರಾದ ಸತ್ಯೇಷು, ಸತ್ಯಕರ್ಮ, ಸತ್ಯದೇವ, ಸತ್ಯರಥ ಇವರೈವರಿಗೂ ಈ ಹೆಸರು ರೂಢಿಯಲ್ಲಿದೆ ಇವರು ಒಂಬತ್ತುಕೋಟಿ ಸೈನ್ಯದೊಂದಿಗೆ ಶಪಥಪೂರ್ವಕವಾಗಿ ಯುದ್ಧಮಾಡಿ, ಅರ್ಜುನನನ್ನು ಇದಿರಿಸಿ ಮಡಿದರು] ಅತಿರಥ ಮಥನನ=ಅತಿರಥರನ್ನು ಮಥಿಸುವವನಾದ ಅರ್ಜುನನ, ರಥಮುಂ=ತೇರನ್ನು, ತಮ್ಮತ್ತ ತೆಗೆಯಲೊಡಂ=ತಮ್ಮ ಕಡೆಗಾಗಿ ಬರುವಂತೆ ಮಾಡಿಕೊಳ್ಳಲು, ಅಮ್ಮನ ಗಂಧವಾರಣಂ=ಅರ್ಜುನನು (ಇದು ಅರಿಕೇಸರಿಗಿರುವ ಬಿರುದುಗಳಲ್ಲೊಂದು) ಮದಾಂಧ ಗಂಧಸಿಂಧುರದಂತೆ= ಮದದಿಂದ ಕಣ್ಣುಕಾಣಿಸದಾದ(ಗರ್ವದಿಂದ ಕಂಗೆಟ್ಟ) ಮದ್ದಾನೆಯು ಹಾಗೆ; ಅವರ ರಥಕ್ಕೆ ಪರಿದು=ಅವರ ತೇರುಗಳ ಕಡೆಗಾಗಿ ಧಾವಿಸಿ, ಸಂಸಪ್ತಕ ಬಲಕ್ಕೆ=ಅವರ ಗುಂಪಿಗೆ, ಆಳ್ದಂಆಗಿಇರ್ದ=ಯಜಮಾನನಾಗಿದ್ದ, ಸುಶರ್ಮನಂ=ಸುಶರ್ಮನೆಂಬವನನ್ನು, ವಿದ್ವಿಷ್ಟವಿದ್ರಾವಣಂ=ವೈರಿಸಂಹಾರಕಾರಿಯಾದ ಅರ್ಜುನನು (ಇದೂ ಅರಿಕೇಸರಿಯ ಬಿರುದಾವಳಿಗಳಲ್ಲೊಂದು) ರಾಘವಂ=ರಘುವಂಶಜನಾದ ರಾಮಚಂದ್ರನು; ರಾವಣನಂ=ರಾವಣಾಸುರನನ್ನು; ಕೊಲ್ವಂತೆ=ವಧಿಸುವರೀತಿಯಲ್ಲೇ, ಕೊಂದೊಡೆ=ಸಂಹಾರಗೈಯ್ಯಲು, ಉೞಿದನಾಯಕರೆಲ್ಲರ್=ಅವಶಿಷ್ಟರಾದ ಅಧಿಕಾರಿಗಳೆಲ್ಲರೂ, ತಮ್ಮ ಆಳ್ದನ ಸಾವಂಕಂಡು=ತಮ್ಮ ಯಜಮಾನನ ಮರಣವನ್ನು ನೋಡಿ; ರಿಪುಕುರಂಗಕಂಠೀರವನಂ=ವಿರೋಧಿಗಳೆಂಬ ಮೃಗಗಳಿಗೆ ಸಿಂಹಪ್ರಾಯನಾದ ಅರ್ಜುನನನ್ನು (ಇದೂ ಅರಿಕೇಸರಿಯ ಬಿರುದುಗಳಲ್ಲೊಂದು) ಮಾರ್ಕೊಂಡು = ಪ್ರತಿಭಟಿಸಿ, ಕಾದುತ್ತ ಇರ್ಪ+ಅನ್ನೆಗಂ = ಹೋರಾಡುತ್ತಿರುವಾಗ; ಇತ್ತ=ಈಚೆ (ಕುರುಕ್ಷೇತ್ರದಲ್ಲಿ) ಕರ್ಣನುಂ=ಅಂಗಾಧಿಪನೂ ಕೂಡ; ಉದೀರ್ಣವೀರರಸಾಸ್ವಾದನ ಲಂಪಟಂ ಆಗಿ=ಹೆಚ್ಚಾಗುತ್ತಿದ್ದ ವೀರರಸವನ್ನು ಆಸ್ವಾದಿಸಬೇಕೆಂಬ ಲವಲವಿಕೆಯುಳ್ಳವನಾಗಿ; ಇಂದು=ಈ ದಿನ; ನೀವರ್ ಎಲ್ಲಂ=

ಯಮಸುತನಣ್ಮಿ ಸತ್ತೆಯೆನುತುಂ ನಿಶಿತಾಸ್ತ್ರಮನುರ್ಚಿಕೊಂಡು ವ- ।
ಕ್ಷಮನಿರದೆಚ್ಚೊಡೆಚ್ಚ ಶರಮಂ ಕಲಿ ಚಕ್ಕನೆ ಕಿಟ್ಟುರಃಪ್ರದೇ- ॥
ಶಮನಿಸೆ ನೆತ್ತರೊಕ್ಕು ಪತಿ ಮುಚ್ಚೆಯೊಳಿಚ್ಚೆಯೆ ಕೆಟ್ಟು ಜೋಲ್ದೊಡಾ ।
ದಮೆನಸುನೊಂದು ನಂದಿಸದೆ ತನ್ನನೆ ನಿಂದಿಸಿದಂ ದಿನೇಶಜಂ ॥ ೪ ॥

---

ನೀವೆಲ್ಲರೂ; ಎನ್ನ ಕಾಳೆಗಮಂ= ನಾನು ಮಾಡತಕ್ಕ ಯುದ್ಧವನ್ನು, ಸುರಿಗೆಗಾಳೆಗಮಂ=[ಛುರಿಕಾ (ದ್ಭ) ಸುರಿಗೆ] ಕತ್ತಿಯ ಕಾಳೆಗವನ್ನು, (ಖಡ್ಗಾಖಡ್ಗಿಯೆಂಬ ಯುದ್ಧವನ್ನು) ನೋಟ್ಪಂತೆ= ನೋಡುವ ಹಾಗೆ= ನೋಟ್ಟುದು= ನೋಡುತ್ತಿರುವುದು, ಎಂದು= ಹೀಗೆಂಬುವಾಗಿ, ಕೌರವಬಲದ ನಾಯಕರೆಲ್ಲರುಮಂ= ಕೌರವರ ಕಡೆಯ ಅಧಿಕಾರಿಗಳೆಲ್ಲರನ್ನೂ; ಒಡ್ಡಿ= ಅವರವರ ಸ್ಥಾನಗಳಲ್ಲಿ ನಿಲ್ಲಿಸಿ, ಪಾಂಡವ ಬಲಕ್ಕೆ= ಪಾಂಡವರ ಸೇನೆಗೆ; ಮಿಟ್ಟು ಬರ್ಪಂತೆ ಬಂದು= ನ್ರುತ್ಯ ಬರುವಹಾಗೆ ಬಂದು, ತಾಗಿದಾಗಳ್= ಸಮೀಪಿಸಿದಾಗ; ತನಗೆ= ಕರ್ಣನಿಗೆ, ಅದಿರದೆ= ಹೆದರದೆ, ಇದಿರೊಳ್= ಮುಂದೆಸೆಯಲ್ಲಿ, ಆಂತ= ಪ್ರತಿಭಟಿಸಿನಿಂತ, ಸೋಮಕ ಶ್ರೀ ಜಯ ಪ್ರಮುಖ ಕೋಸಲಾಧೀಶ ಸೈನ್ಯಂಗಳಂ= ಸೋಮಕ ಶ್ರೀಜಯರೇ ಮೊದಲಾದವರು ನಡೆಯಿಸುವ ಕೋಸಲೇಶ್ವರನ ಸೇನೆಗಳನ್ನು, ಅಲ್ಲಕಲ್ಲೋಲಂ ಮಾಡಿ= ಚಲ್ಲಾಪಿಲ್ಲಿಯಾಗುವಂತೆ ಚದರಿಸಿಬಿಟ್ಟು, ಪೆಸರಱಿಕೆಯನಾಯಕರಂ ಅಱುವತ್ತು ಸಾಸಿರ್ವರಂ= ಹೆಸರುವಾಸಿಗೆ ಬಂದ ಅರುವತ್ತುಸಾವಿರ ನಾಯಕರನ್ನು, ಒರ್ವನಂ ಕೊಲ್ವಂತೆ ಕೊಂದು= ಒಬ್ಬನನ್ನು ಕೊಲ್ಲುವಹಾಗೆ ಸುಲಭವಾಗಿ ಕೊಂದು, ನಿಟ್ಟಾಲಿಗೊಂಡು= ಮುಂದೆ ಉದ್ದಕ್ಕೂ ನೋಡುತ್ತ, (ಎವೆಯಿಕ್ಕದೆ ದುರದುರನೆ ನೋಡುತ್ತ) ಯುಧಿಷ್ಠಿರನಂ= ಧರ್ಮಜನನ್ನು (ಯುಧಿ+ಷ್ಠಿರ= ಯುದ್ಧದಲ್ಲಿ ಸ್ಥಿರತೆಯುಳ್ಳವನು) ಮುಟ್ಟೆವಂದಾಗಳ್= ಸಮೀಪಿಸಿದಾಗ ॥

ಯಮಸುತಂ— ಇಂತೆಂದು ಚಂ ಮಾಲಾವೃತ್ತಂ ॥ ಯಮಸುತಂ= ಧರ್ಮನಂದನನಾದ ಯುಧಿಷ್ಠಿರನು; ಅಣ್ಮಿ= ಹೋರಾಡಿ; [ಅಣ್ಮ (ಧಾತು) ಪೌರುಷೇ] ಸತ್ತೆ=(ಕರ್ಣನೇ ನೀನು) ನಾಶವೆಯ್ದಿದೆ, ಎನುತುಂ= ಎಂದು ಹೇಳುತ್ತ; ನಿಶಿತಾಸ್ತ್ರಮಂ=(ನಿಶಿತ+ಅಸ್ತ್ರ) ಕೂರಲಗನ್ನು; ಉರ್ಚಿಕೊಂಡು=(ಬತ್ತಳಿಕೆಯಿಂದ) ಹೊರತೆಗೆದುಕೊಂಡು; [ಉರ್ಚು (ಧಾತು) ಆಕರ್ಷಣೇ] ಇರದೆ= ಕೂಡಲೆ (ಕಾಲಾತಿಪಾತವಿಲ್ಲದೇನೇ); ವಕ್ಷಮಂ= ಎದೆಯನ್ನು; ಎಚ್ಚೊಡೆ= ಗುರಿಹಿಡಿದು ಹೊಡೆಯಲು; ಕಲಿ= ವೀರನಾದ ಕರ್ಣನು; ಎಚ್ಚ ಶರಮಂ= (ಧರ್ಮಜನ) ಹೊಡಿದ ಬಾಣವನ್ನು; ಚಕ್ಕನೆ=(ಅನುಕರಣ) ಬಹುಬೇಗನೆ; ಕಿಟ್ಟು= ಕಿತ್ತುತೆಗೆದು; ಉರಃ ಪ್ರದೇಶಮಂ= ವಕ್ಷಃಸ್ಥಳವನ್ನು; ಇಸೆ= ಹೊಡೆಯಲು; ನೆತ್ತರ್= ರಕ್ತವು;

ವ ॥ ಅಂತು ಕೊಂತಿಗೆ ನಾಲ್ವರೊಳಾರುಮಂ ಕೊಲ್ಲೆನೆಂದು ನುಡಿದ ತನ್ನ ನನ್ನಿಗೆ ಬನ್ನಂಬಂದಪುದೆಂದು ಕರ್ಣಂ ಚಿಂತಿಸುತ್ತಿರ್ದನಿತ್ತಲರಸನಂ ಪೆಱಗಿಕ್ಕಿ ನಕುಲಸಹದೇವರಿರ್ವರುಂ ಬಂದಾಂತೊಡಿವರನೇಗೆಯ್ವು ದೆಂದು ಕರುಣಿಸಿ ಶಲ್ಯನ ಮನಮಂ ನೋಡಲೆಂದು ಬೆಸಗೊಂಡೊಡ ತನ್ನಳಿಯಂದಿರ ಸಾವಿಂಗಾಱದೆ ಶಲ್ಯನಿಂತೆಂದಂ—

ಒಕ್ಕು=ಹೊರಸೂಸಿ, [ಉಗು (ಧಾತು) ವಿಸರ್ಜನೇ] ಪತಿ=ಅರಸನಾದ ಯುಧಿಷ್ಠಿರನು; ಮುಚ್ಚೆಯೊಳ್=ವಿಸ್ಮೃತಿಯಲ್ಲಿ [ಮುಚ್ಚೆ (ಸಂ) ಮೂರ್ಛೆ] ಇಚ್ಚೆಯಿ-ತನ್ನ ಅರಿವೇ; ಕೆಟ್ಟು=ಇಲ್ಲದಾಗಿ [ಕಿಡು (ಧಾತು) ವಿನಾಶೇ] ಜೋಲ್ದೊಡೆ= ಜೋತಾಡುತ್ತಿರಲು; ದಿನೇಶಜಂ=ಸೂರ್ಯಸುತನಾದ ಕರ್ಣನು; ಆದಮೆನಸು= ಬಹಳವಾಗಿಯೇ (ಆದಂ+ಎನಸು=ಇವೆರಡೂ ಅಧಿಕಾರ್ಥದ ಅವ್ಯಯುಗಳು) ನೊಂದು=ವ್ಯಸನಪಟ್ಟು [ನೋ (ಧಾತು) ವ್ಯಥನೇ] ನಂದಿಸದೆ=ಆರಿಸಿಕೊಳ್ಳದೆ; (ವೈರವನ್ನು ಯಾ ವೈರಿಯ ಪ್ರಾಣವನ್ನು ಅಥವಾ ತನ್ನ ಮನಸ್ಸಿನ ವ್ಯಸನವನ್ನು ಇಲ್ಲವೆ ತನ್ನ ಮನಸ್ಸಿನ ಕೋಪವನ್ನು ಎಂದು ಹೊಂದಿಸಿಕೊಳ್ಳುವುದು) ತನ್ನನೆ ನಿಂದಿಸಿದಂ=ತನ್ನನ್ನೇ ನಿಂದಿಸಿಕೊಂಡನು, ಅಥವಾ ಆದಮೆಜೋಲ್ದೊಡೆ, ನಸುನೊಂದು (ತನ್ನ ಕೃತ್ಯಕ್ಕಾಗಿ) ನಸುನೊಂದು=ಸ್ವಲ್ಪ ವ್ಯಸನಹೊಂದಿ; ನಂದಿಸದೆ ತನ್ನನೆ ನಿಂದಿಸಿದಂ ಎಂದು ಹೇಳಿಕೊಳ್ಳುವಂತಿದೆ. (ತಾನು ಮಾತೆಯೊಡನೆ ಮಾತು ಕೊಟ್ಟುದು ವ್ಯರ್ಥವಾಯಿತೇ ಎಂದು ವ್ಯಸನಕ್ಕೆ ಕಾರಣ) ॥ ೪ ॥

ಅಂತು — ಇಂತೆಂದು ವಚನಂ॥ ಅಂತು = ಹಾಗೆಯೇ; ಕೊಂತಿಗೆ = (ಮೊದಲು) ತಾಯಿಯಾದ ಕುಂತೀದೇವಿಗೆ (ಪಂಪರನ್ನರು ಕೊಂತಿಯೆಂದು ಹೇಳಿರುವರು) ನಾಲ್ವರೊಳ್ = ನಾಲ್ಕು ಮಂದಿಯಲ್ಲಿ, ಆರುಮಂ = ಯಾರನ್ನೂ, ಕೊಲ್ಲೆಂ ಎಂದು = ನಾಶಮಾಡೆನು ಎಂಬುದಾಗಿ; ನುಡಿದ ತನ್ನ ನನ್ನಿಗೆ = ಹೇಳಿದ ತನ್ನ ಸತ್ಯವಾಕ್ಯಕ್ಕೆ; ಬನ್ನಂ = ಭಂಗವು; ಬಂದಪುದು ಎಂದು = ಬರುತಿದೆಯಲ್ಲಾ ಎಂಬುದಾಗಿ, ಕರ್ಣಂ ಚಿಂತಿಸುತ್ತ ಇರ್ದಂ = ಕರ್ಣನು ಯೋಚಿಸುತ್ತಿದ್ದನು; ಇತ್ತಲ್ = ಈಚೆ ಪಾಂಡವ ಪಕ್ಷದಲ್ಲಿ,ಅರಸನಂ = ರಾಜನಾದ ಯುಧಿಷ್ಠಿರನನ್ನು; ಪೆಱಗೆ(ಪೆಱಗು) + ಇಕ್ಕಿ = ಹಿಂದೆ ಸರಿಯುವಂತೆ ಮಾಡಿ; ನಕುಲಸಹದೇವರಿರ್ವರುಂ = ನಕುಲಸಹದೇವರೆಂಬ ಕಿರುದಮ್ಮಂದಿರಿಬ್ಬರೂ; ಬಂದು + ಆಂತೊಡೆ = ಸಮೀಪಿಸಿ ಇದಿರಿಸಲು; ಇವರಂ = ಈ ಕಿರಿಯರನ್ನು; ಏಗೆಯ್ವುದು = (ಏನಂ + ಗೆಯ್ವುದು) ಏನು ತಾನೇ ಮಾಡಲಿ, ಎಂದು = ಈ ವಿಧವಾಗಿ; ಕರುಣಿಸಿ = (ಅವರಲ್ಲಿ) ದಯೆದೋರಿ; ಶಲ್ಯನ = ಮದ್ರೇಶ್ವರನ; ಮನಮಂ = ಚಿತ್ತವು ಹೇಗಿರುವುದೆಂಬುದನ್ನು; ನೋಡಲೆಂದು = ನೋಡಬೇಕೆಂದು; ಬೆಸ

ಎರೆದನ ಪೆಂಪುಮಾಂತಧಿಕನಪ್ಪನ ಪೆಂಪುಮನೀವ ಕಾವ ನಿ- ।
ನ್ನೆರಡು ಗುಣಂಗಳುಂ ಬಯಸುತಿರ್ಪುವು ನಿನ್ನೊಳಿವಂದಿರೇತಱೊಳ್ ॥
ದೊರೆ ದೊರೆವೆತ್ತ ಕಾಳೆಗದ ಗೆಲ್ಲವ ಸೋಲದ ಮಾತು ನಿನ್ನೊಳಂ ।
ನರನೊಳ ಮಿರ್ದುದುಯ್ಗೆ ಸಿಸುಗಳ್ ಸಿಬಿರಕ್ಕೆ ಬಟಿಲ್ದ ಭೂಪನಂ ॥ ೫ ॥

---

ಗೊಂಡೊಡೆ = ಕೇಳಲು, ಶಲ್ಯಂ = (ಸಾರಥ್ಯವನ್ನು ನಿರ್ವಹಿಸುತ್ತಿದ್ದ) ಮದ್ರ ಭೂಪನು, ತನ್ನ ಅಳಿಯಂದಿರ ಸಾವಿಂಗೆ ಅಱಿದೆ = ತನ್ನ ಅಳಿಯಂದಿರಾದ ನಕುಲ ಸಹದೇವರ್ಕಳ ಮರಣಕ್ಕೆ ಇಷ್ಟಪಡದವನಾಗಿ; ಇಂತು ಎಂದಂ – ಹೀಗೆ ಹೇಳಿದನು ॥

ಎರೆದನ — ಇಂತೆಂದು ಚಂ ಮಾಲಾವೃತ್ತಂ ॥ ಎರೆದನ = ಬೇಡಿಕೊಂಡವನಾದ ನನ್ನ, ಪೆಂಪುಂ = ಗೌರವವೂ, [ಎರ (ಧಾತು) ಯಾಚ್ಞಾಯಾಂ] ಅಂತ = ವೈರಿಗಳನ್ನು ಇದಿರಿಸಲುನಿಂತ; ಅಧಿಕಂ = ಯೋಗ್ಯತೆಯಲ್ಲಿ ಹಿರಿಯವನು; ಅಪ್ಪನ = ಆಗಿರುವವನಾದ ನಿನ್ನ; ಪೆಂಪುಮಂ = ಗೌರವವೂ ಯಾವುದಿರುವುದೋ ಅವೆರಡನ್ನೂ; ಈವ = ಕೊಡುವ; ಕಾವ = ರಕ್ಷಿಸಿಕೊಳ್ಳುವ; ನಿನ್ನ ಎರಡು ಗುಣಂಗಳುಂ = ನಿನ್ನಲ್ಲಿರುವ ಇವೆರಡು ಗುಣಗಳೂ; (ಯಥಾಸಂಖ್ಯಾಲಂಕಾರ) [ಸಾರಥ್ಯಮಾಡಲು ಒಪ್ಪಿಕೊಳ್ಳುವಾಗಲೇ ತಾನು ಹೇಳಿದಂತೆ ಕರ್ಣನು ವರ್ತಿಸಬೇಕೆಂದು ಶಲ್ಯನು ಹೇಳಿದ್ದನಷ್ಟೆ! ಈಗ ಅದನ್ನು ನೆನೆದುಕೊಂಡು ಶಲ್ಯನು ಹೇಳುವುದಾಗಿದೆ–ನನ್ನ ಬೇಡಿಕೆಗೆ ಮನ್ನಣೆ ಕೊಡುವ ನಿನ್ನ ಗುಣವು ಮತ್ತು ಇದಿರಿಸುವ ವೈರಿಯ ಯೋಗ್ಯತೆಯನ್ನು ನೋಡಿಕೊಂಡು ಹೋರಾಡಬೇಕೆಂಬುದೂ; ಅಲ್ಪನಾಗಿದ್ದರೆ ಅವನೊಡನೆ ಹೋರಾಡದೆ ಅವನನ್ನು ಕಾಪಾಡಬೇಕೆಂಬುದೂ ನಿನ್ನ ಮಹಿಮೆಯನ್ನು ತೋರಿಸತಕ್ಕ ದೊಡ್ಡ ಗುಣಗಳು] ಬಯಸುತಿರ್ಪುವು (ಬಯಸುವಂತಿರ್ಪುವು ಎಂಬುದು ಅರ್ಥವು) ಇವಂದಿರ್ = ಚಿಕ್ಕವರಾದ ಈ ನಕುಲಸಹದೇವರು, ನಿನ್ನೊಳ್ = ಅತಿಶಯ ಗುಣಾನ್ವಿತನೂ ಮಹಾಸತ್ವಶಾಲಿಯೂ ಆದ ನಿನ್ನ ಕೂಡೆ, ಏತಱೊಳ್ ದೊರೆ = ಯಾವುದರಲ್ಲಿ ಸಮಾನರು ? ದೊರೆವೆತ್ತ = ಸಮಾನತೆ ಹೊಂದಿದ; ಕಾಳೆಗದ – ಯುದ್ಧದ, ಗೆಲ್ಲದ ಸೋಲದ ಮಾತು = ಜಯಾಪಜಯಗಳ ಮಾತು; ನಿನ್ನೊಳಂ = ನಿನ್ನಲ್ಲಿಯೂ; ನರನೊಳಂ = ಅರ್ಜುನನಲ್ಲಿಯೂ, ಇರ್ದುದು = ಇರುವುದು (ವರ್ತಮಾನಾರ್ಥದಲ್ಲಿ ಭೂತಕಾಲದ ಪ್ರಯೋಗವಿದು) ಸಿಸುಗಳ್ (ಸಂ) ಶಿಶುಗಳ್ = ಈ ಬಾಲಕರು; ಬಟಿಲ್ದ = ಯುದ್ಧದಲ್ಲಿ ಕಂಗೆಟ್ಟುಹೋದ; ಭೂಪನಂ = ಅರಸನಾದ ಧರ್ಮಜನನ್ನು; ಸಿಬಿರಕ್ಕೆ (ಸಂ) ಶಿಬಿರಕ್ಕೆ = ವಸತಿಯ ಕಡೆಗಾಗಿ; ಉಯ್ಗೆ = ಕರೆದುಕೊಂಡು ಹೋಗಲಿ' [ಉಯ್ (ಧಾತು) ನಿಯಾಮೇ] ಆಡಿದ ಮಾತನ್ನು ಪಾಲಿಸಬೇಕೆಂಬ; ಸರಿಸಮಾನರೊಡನೆ ಹೋರಾಡಿ ಜಯಿಸಬೇಕಲ್ಲದೆ ಅಲ್ಪರನ್ನು ಕಾಪಾಡಬೇಕೆಂಬ

ವ ॥ ಅದಲ್ಲದೆಯುಮತ್ತಂ ದುರ್ಯೋಧನಂಗಂ ಭೀಮಂಗಮನುವರಂ ಪೊಣರ್ದಿರ್ದುದರಸನಂ ಬೇಗಂ ಪೋಗಿ ಕೆಯ್ಕೊಳ್ವೆಮೆಂದು ಬರೆವರೆ, ಯುಧಿಷ್ಠಿರನಟಿಯೆ ನೊಂದ ನೋವಂ ಕಂಡು ಪಾಂಡವಬಲದ ನಾಯಕರುತ್ತಾಯಕರಾಗಿ ತಂತಮ್ಮ ಚತುರ್ಬಲಂಗಳನೊಂದು ಮಾಡಿಕೊಂಡು ಕಾಲಾಗ್ನಿಯಂ ಕಿಡಿ ಸುತ್ತುವಂತೆ ಕರ್ಣನಂ ಸುತ್ತಿ ಮುತ್ತಿಕೊಂಡು ಕಣಯಕಂಪಣಮುಸಲಮುಸುಂಡಿಭಿಂಡಿವಾಳತೋಮರಮುದ್ಗರ ಮಹಾ ವಿವಿಧಾಯುಧಂಗಳೊಳಿಟ್ಟುಮೆಚ್ಚುಮಿಱಿದುಮಗುರ್ವುಮದ್ಭುತಮುಮಾಗೆ ಕಾದುವಾಗಳ್ —

---

ಇವೆರಡು ನಿನ್ನ ಗುಣಗಳು ಸರ್ವಾದರಣೀಯಗಳೇ ಸರಿ. ಈ ಬಡವುಗಳನ್ನು ನಿನ್ನಂತಹ ಮಹಾಸತ್ವಶಾಲಿಗಳು ಇದಿರಿಸುವುದೆಂದರೆ ನಿಂದೆಗೇಡಲ್ಲವೆ, ಎಂದು ಸಾರಾಂಶವು ॥ ೫ ॥

ಅದಲ್ಲದೆಯುಂ — ಇಂತೆಂದು ವಚನಂ ॥ ಅದಲ್ಲದೆಯುಂ = ಅಷ್ಟು ಮಾತ್ರವೇ ಅಲ್ಲದೆ, ಅತ್ತಂ = ಕುರುಕ್ಷೇತ್ರದ ಬೇರೊಂದೆಡೆಯಲ್ಲಿ,ದುರ್ಯೋಧನಂಗಂ ಭೀಮಂಗಂ = ದುರ್ಯೋಧನನಿಗೂ ಭೀಮಸೇನನಿಗೂ; ಅನುವರಂ = ಯುದ್ಧವು, ಪೊಣರ್ದಿರ್ದುದು = ಸೇರಿಒಂದಿದಿ ತು; ಬೇಗಂಪೋಗಿ = ಬೇಗನೆಹೋಗಿ; ಅರಸನಂ = ಸ್ವಾಮಿಯಾದ ಯುಧಿಷ್ಠಿರನನ್ನು; ಕೆಯೊ ಟ್ವಿಂ = ಸೇರಿಕೊಳ್ಳೋಣ; ಎಂದು ಬರೆವರೆ = ಎಂಬುದಾಗಿ ಬರುತ್ತಿದ್ದಾಗ; ಯುಧಿಷ್ಠಿರಂ = ಧರ್ಮಜನು; ಅಟಿಯೆನೊಂದ = ಪ್ರಾಣಾಂತಿಕದಂತಹ ಯಾತನೆಯನ್ನು ಅನುಭವಿಸಿದ, ನೋವಂ = ಆ ಸಂಕಷ್ಟ ಸ್ಥಿತಿಯನ್ನು, ಕಂಡು = ನೋಡಿ; ಪಾಂಡವಬಲದ ನಾಯಕರ್ = ಪಾಂಡವ ಪಕ್ಷದ ಸೇನಾಧಿಕಾರಿಗಳೆಲ್ಲರೂ; ಉತ್ತಾಯಕರಾಗಿ = ಒಂದುಗೂಡಿ, (ಪ್ರತಿಭಟಿಸಬೇಕೆಂಬ ಉದ್ದೇಶವುಳ್ಳವರಾಗಿ) ತಂತಮ್ಮ = ಅವರವರ ಅಧೀನದಲ್ಲಿರತಕ್ಕ. ಚತುರ್ಬಲಂಗಳಂ = ಆನೆ ಕುದುರೆ ರಥ ಕಾಲಾಳುಗಳೆಂಬ ಚತುರಂಗ ಸೈನ್ಯಗಳನ್ನೂ; ಒಂದುಮಾಡಿಕೊಂಡು = ಒಟ್ಟಾಗುವಂತೆ ಸೇರಿಸಿಕೊಂಡು; ಕಾಲಾಗ್ನಿಯಂ = ಪ್ರಳಯಕಾಲದಲ್ಲಿ ಉಂಟಾಗತಕ್ಕ ಬೆಂಕಿಯನ್ನು; ಕಿಡಿ = ಕಣಗಳ ಸಮೂಹವು; ಸುತ್ತುವಂತೆ = ಆವರಿಸಿಕೊಳ್ಳುವ ಹಾಗೆ(ಉಪಮಾಲಂಕಾರವು) ಕರ್ಣನಂ ಸುತ್ತಿ ಮುತ್ತಿಕೊಂಡು = ನಾಲ್ಕು ಕಡೆಗಳಿಂದಲೂ ಕರ್ಣನನ್ನು ಕವಿಯುತ್ತ; ಕಣಯಕಂಪಣ ಮುಸಲಮುಸುಂಡಿ ಭಿಂಡಿವಾಳ ತೋಮರ ಮುದ್ಗರ ಮಹಾ ವಿವಿಧಾಯುಧಂಗಳೊಳ್ = ಕಣಯ = ಈಟಿಯಂತಹ ಆಯುಧ; ಕಂಪಣ = ಚಲನಶೀಲವಾದ ಆಯುಧವಿಶೇಷ; ಮುಸಲ = ಒನಕೆಯ ಆಕೃತಿಯುಳ್ಳ ಆಯುಧವು; ಮುಸುಂಡಿ = ಆಯುಧ ವಿಶೇಷ, ಭಿಂಡಿವಾಳ (ಭಿಂಡಿಪಾಲ) ಕಲ್ಲೊಡೆಯುವ ಮಟ್ಟಿಯಂತಹ ಆಯುಧವು; ತೋಮರ = ಕೊಡತಿಯಂತಿರುವ ಆಯುಧ; ಮುದ್ಗರ = ಡಂಗೆ; ಮಹಾ

ಎನಗಮರಾತಿಸಾಧನಮಿದಿರ್ಚುಗುಮಳ್ಕದಿದಿರ್ಚಿ ಬಾಟ್ಗುಮಿ- ।
ನ್ನೆನೆ ಪೆಱತುಂಟೆ ದೋಷಮೆನಗಂತದೆ ದೋಷಮದಾಗಲಾಗದೆಂ- ॥
ದಿನತನಯಂ ತಗುಟ್ದಿಸೆ ನಿಶಾತಶರಾಳಿಗಳೆಯ್ದಿ ಚಕ್ಕು ಚ- ।
ಕ್ಕನೆ ಕೊಳೆ ಮೊಕ್ಕು ಮೊಕ್ಕನೆ ಶಿರಂಗಳುರುಳ್ದುವು ವೈರಿಭೂಪರಾ ॥ ೬ ॥

ವ ॥ ಆ ಪ್ರಸ್ತಾವದೊಳ್ —

ಮಂತ್ರಪದಪ್ರವೀಣಬಹುಸಾಧನಹೂಂಕರಣಾದಿಮಂತ್ರಮಾ- ।
ಮಂತ್ರಿತಡಾಕಿನೀದಶನಘಟ್ಟನಜಾತವಿಭೀಷಣಂ ಮದೇ- ॥

---

ವಿವಿಧಾಯುಧಂಗಳೊಳ್ — ಇವೇ ಮೊದಲಾದ ದಿವ್ಯಾಯುಧಗಳಿಂದ, ಇಟ್ಟುಂ= ಹೊಡೆದೂ; ಎಚ್ಚುಂ= ಹೊಡಿಯೂ; ಇಱಿದುಂ= ತಿವಿದೂ, ಅಗುರ್ವುಂ= ಭಯಂಕರವೂ, ಅದ್ಭುತಮುಂ= ಆಶ್ಚರ್ಯಕರವೂ, ಆಗೆ ಕಾದುವಾಗಳ್= ಆಗುವಂತೆ ಹೋರಾಡುತ್ತಿರಲು ॥

ಎನಗಂ — ಇಂತೆಂದು ಚಂ ಮಾಲಾವೃತ್ತಂ ॥ ಅರಾತಿಸಾಧನಂ= ಶತ್ರುಸೈನ್ಯವು; ಎನಗಂ= ಮಹಾಸತ್ವಶಾಲಿಯಾದ ನನಗೂ; ಅಳ್ಕದೆ= ಹೆದರದೆ, ಇದಿರ್ಚುಗುಂ= ಇದಿರಿಸುತ್ತಿದೆಯಲ್ಲಾ! (ಇದಿರಿಸುವುದು ಮಾತ್ರವಲ್ಲದೆ) ಇದಿರ್ಚಿ= ಪ್ರತಿಭಟಿಸಿ; ಬಾಟ್ಗುಂ= ಬದುಕುತ್ತಿರುವುದು, ಎನಗೆ ಇನ್ನು ಪೆಱತುದೋಷಂ ಉಂಟೆ ಎನೆ= ಇದಕ್ಕಿಂತ ಹೆಚ್ಚಿನ ದೋಷವು ಬೇರೆ ನನಗಿರುವುದೇ ಎಂದರೆ, ಅಂತದೇ ದೋಷಂ= ನನಗಿರುವ ದೋಷವು ಅದು ಮಾತ್ರವೇ ಸರಿ; ಅದು ಆಗಲಾಗದು= ಆ ದೋಷವು ನನಗೆ ಉಂಟಾಗಲೇಬಾರದು, ಎಂದು= ಹೀಗೆ ಯೋಚಿಸುತ್ತ; ಇನತನಯಂ= ಸೂರ್ಯಸುಕುಮಾರನಾದ ಕರ್ಣನು; ತಗುಟ್ದಿ= ಬೆನ್ನಟ್ಟಿ, ಇಸೆ= ಹೊಡೆಯಲು; ನಿಶಾತಶರಾಳಿಗಳ್= (ಆ ಹೊಡೆಯಲ್ಪಟ್ಟ) ಕೂರಂಬುಗಳು; ಎಯ್ದಿ= ಸರಿಯಾಗಿ ಚುಕ್ಕಚುಕ್ಕನೆ ಕೊಳೆ– ಚುಕ್ಕುಚುಕ್ಕೆಂದು ಶಬ್ದವಾಗುವಂತೆ ಹೋಗಿ ನಾಟಲು (ಸರಿಯಾಗಿ ಗುರಿಮುಟ್ಟಲು) ವೈರಿ ಭೂಪರಾ= ಶತ್ರುರಾಜರ (ಷಷ್ಠಿಗೆ ದೀರ್ಘ) ಶಿರಂಗಳ್= ತಲೆಗಳು; ಮೊಕ್ಕುಮೊಕ್ಕನೆ ಮೊಕ್ಕುಮೊಕ್ಕೆಂಬ ಶಬ್ದದೊಡನೆ= ಇವು ಅನುಕರಣ ಶಬ್ದಗಳು; ಇಲ್ಲಿರುವ ಔಚಿತ್ಯವು ಸ್ವಾಭಾವಿಕವಾಗಿದೆ) ಉರುಳ್ದುವು= ಉರುಳಿಬಿದ್ದುವು ॥ ಈ ಪದ್ಯವು ಕರ್ಣನ ಆ ಸನ್ನಿವೇಶದ ಚಿತ್ರವನ್ನು ಸರಿಯಾಗಿ ಒಡಮೂಡಿಸುತ್ತಿದೆ ) ॥ ೬ ॥

ಆ ಪ್ರಸ್ತಾವದೊಳ್ — ಇಂತೆಂದು ವಚನಂ ॥ ಆ ಪ್ರಸ್ತಾವದೊಳ್= ಆ ಸಂದರ್ಭದಲ್ಲಿ ॥

ಮಂತ್ರಪದ— ಇಂತೆಂದು ಉತ್ಪಲಮಾಲಾವೃತ್ತಂ ॥ (ಮಾಂತ್ರ–ಮಂತ್ರಂ)

ಭ್ರಾಂತ್ರನಿಯಂತ್ರಿತಾಶ್ವಶವಮಾಂಸರಸಾಸವಮತ್ತಯೋಗಿನೀ ।
ತಂತ್ರಮಿದೇನಗುರ್ವನೊಳಕೊಂಡುದೊ ಕರ್ಣನ ಗೆಲ್ದ ಕೊಳ್ಗುಳಂ ॥೭॥

ವ ॥ ಅನ್ನೆಗಮಿತ್ತ ಸಂಸಪ್ತಕನಿಕುರುಂಬದೊಳಗೊರ್ವರುಮಂ ಕಿಱಿವೀಱಿಲೀಯದೆ ರಸಮಂ ಕೊಲ್ವಂತೆಂತಾನುಂ ಕೊಂದು ಕರ್ಣನೊಳ್ ಪೊಣರಲ್ ಬರ್ಪ ವಿಕ್ರಾಂತತುಂಗಂ ನಿಜಪತಾಕಿನಿಯ ನಡುವೆ ಮೆಱೆವ ಪತಾಕಾವಿರಾಜಿತಮಪ್ಪ ತಮ್ಮಣ್ಣನ ರಥಮಂ ಕಾಣದೆ ಕೌರವ ಬಳಜಳನಿಧಿಯೊಳ್ ಬಳ್ವಳ ಬಳಿದೊಗೆದ ಕೇಸುರಿಯಂತೆ ತಟತಟಿಸಿ

---

ಮಂತ್ರಪದ= ಮಂತ್ರಪದಗಳನ್ನು ಉಚ್ಚರಿಸುವುದರಲ್ಲಿ, ಪ್ರವೀಣ= ನಿಪುಣರಾದ, ಬಹು ಸಾಧನ= ಅನೇಕಾನೇಕ ಸೈನ್ಯದ; ಹೂಂಕರಣಾದಿ= ಹೂಂಕಾರವೇ ಮೊದಲಾದ, ಮಂತ್ರಂ= ಮಂತ್ರಗಳುಳ್ಳ, (ಆಮಂತ್ರಿತ— ವಿಭೀಷಣಂ) ಆಮಂತ್ರಿತ= ಬರಮಾಡಲ್ಪಟ್ಟ; ಡಾಕಿನೀ= ಡಾಕಿನಿಯರೆಂಬ ಪಿಶಾಚಗಣಗಳ; ದಶನ= ಹಲ್ಲುಗಳ, ಘಟ್ಟನ= ಹೊಡೆತಗಳಿಂದ; ಜಾತ= ಉಂಟಾದ; ವಿಭೀಷಣಂ= ಹೆಚ್ಚಾದ ಭೀಕರ ಶಬ್ದಗಳುಳ್ಳ, (ಮದೇಭಾಂತ್ರ—ತಂತ್ರಂ) ಮದೇಭ= ಮದಗಜಗಳ; ಅಂತ್ರ= ಕರುಳುಗಳಿಂದ, ನಿಯಂತ್ರಿತ= ಸುತ್ತಲ್ಪಟ್ಟ (ಬಂಧಿಸಲ್ಪಟ್ಟ) ಅಶ್ವ= ಕುದುರೆಗಳ, ಶವ= ಹೆಣಗಳ, ಮಾಂಸ= ಮಾಂಸಗಳಿಂದ ಸಿದ್ಧವಾದ; ರಸ= ರುಚಿಕರವಾದ, ಆಸವ= (ಸಾರ) ಮದ್ಯದ ದೆಸೆಯಿಂದ; ಮತ್ತ= ಮದಿಸಿದ, ಯೋಗಿನೀ= ಹೆಣ್ಣು ಪಿಶಾಚಿಗಳ, ತಂತ್ರಂ= ಕುಣಿಯುಕೆ ಹಾಡುವಿಕೆಯೇ ಮೊದಲಾದ ಕೃತ್ಯಗಳುಳ್ಳ; ಗೆಲ್ದ= ಜಯಗೊಂಡ; ಕರ್ಣನ= ಅಂಗಾಧಿಪನ; ಅಥವಾ ಕರ್ಣನ ಗೆಲ್ದಕೊಳ್ಗುಳಂ= ಎಂದು ಪ್ರಥಮಾರ್ಥದಲ್ಲಿ ಷಷ್ಠಿಯಾಗಿಯೂ ಹೇಳಬಹುದು ಕೊಳ್ಗುಳಂ= ರಣರಂಗವು, ಏಂ ಅಗುರ್ವಂ= ಎಂತಹ ಭೀಕರತೆಯನ್ನು, ಒಳಕೊಂಡುದೋ= ಪಡೆದಿದ್ದಿತೋ? (ಹೇಳಲು ಸಾಧ್ಯವಾಗದು) ಇಲ್ಲಿ ರಣರಂಗವನ್ನು ವರ್ಣಿಸಲು ಹೊರಟ ಪಂಪನು ರಸಕ್ಕೆ ಅನುಗುಣವಾಗಿ ಸಂಸ್ಕೃತ ಪದಗಳನ್ನು ಹೊರಹೊಮ್ಮಿದ ರೀತಿಯು ಬಲು ಚೆನ್ನಾಗಿದೆ— ರಣರಂಗದಲ್ಲಿ ರುದ್ರನಾಟ್ಯವಾಡುವ ಪಿಶಾಚಿಗಳ ತಂಡಗಳು ಗುಡುಗುಡಿಸುವ ಹಾಗೆ ಗೌಡೀರೀತಿಯಿಂದ ಶಬ್ದಗಳು ಹೊರಹೊರಟು ಬಡಬಡಿಸುತ್ತಿರುವುದು ವಾಚಕರನ್ನು ನೇರಾಗಿ ರಣರಂಗಕ್ಕೆ ಕೊಂಡೊಯ್ದು ಅಲ್ಲಿಯ ಸನ್ನಿವೇಶವನ್ನೆಲ್ಲಾ ತೋರಿಸಿಕೊಡುವಂತಿದೆ. ಇಲ್ಲಿ ರೂಪಕಪರಿಕರಾಲಂಕಾರಗಳು ॥ ೭ ॥

ಅನ್ನೆಗಂ—ಇಂತೆಂದು ವಚನಂ ॥ ಅನ್ನೆಗಂ= ಆ ವೇಳೆಗೆ, ಇತ್ತ= ಈ ಕಡೆಯಲ್ಲಿ; ಸಂಸಪ್ತಕನಿಕುರುಂಬದೊಳಗೆ= ಸಂಸಪ್ತಕರ ಪಡೆಯಲ್ಲಿ; ಒರ್ವರುಮಂ=

ಮಿಳಿರ್ವಪವನತನೂಜನ ಕೇಸರಿಕೇತನಮಪ್ಪ ಪಟಯಿಗೆಯಂ ಕಂಡು ಮುಟ್ಟಿವರ್ಪನ್ನೆಗಮರಸನಂ ಬೀಡಿಂಗೆ ಕಳಿಪಿ ಮಗುಟ್ದು ಬಂದ ನಕುಳಸಹದೇವರಿಂದರವಿಂದಬಾಂಧವತನೂಜನ ಮಹಾ ಪ್ರಹರಣ ಹತಿಯೊಳ್ ಯಮನಂದನನ ನೋವುಮನಾತ್ಮೀಯ ಬಲದ ನಾಯಕರ ಸಾವುಮನಱಿದು—

---

ಒಬ್ಬರನ್ನಾದರೂ, ಕಿಱುವೀಟಿಲ್ = (ಕಿಱಿದು—ಅಗುವಂತೆ ಜೀಟಿಲ್) ಕಡಿಮೆಯಾಗಲು, ಜಾರಿ ಬೀಳಲು (ತಪ್ಪಿಸಿಕೊಳ್ಳಲು) ಈಯದೆ = ಎಡೆಕೊಡದೆ, ರಸಮಂ = ಪಾದರಸವನ್ನು, ಕೊಲ್ವಂತೆ = ಕೊಂದು ಹಾಕುವಂತೆ (ರಸಶುದ್ಧಿ ಮಾಡುವವನು ಅದು ಜಾರಿ ಬೀಳದಂತೆ ಜಾಗ್ರತೆ ವಹಿಸಿ ಎಲ್ಲವನ್ನೂ ಒಂದಾಗಿ ಕೊಂದು ಬಿಡುವಂತೆಯೇ) ಎಂತಾನುಂ = ಹೇಗಾದರೂ, ಕೊಂದು = ನಾಶಗೊಳಿಸಿ, ಕರ್ಣನೊಳ್ = ಅಂಗಾಧಿಪನ ಕೂಡೆ, ಕಾದಲ್ = ಹೋರಾಡಬೇಕೆಂದು, ಬರ್ಪ = ಬರುವ, ವಿಕ್ರಾಂತತುಂಗಂ = ವಿಕ್ರಮಿಗಳಲ್ಲಿ ಶ್ರೇಷ್ಠನೆನಿಸಿದ ಅರ್ಜುನನು (ಇದು ಅರಿಕೇಸರಿಯ ಬಿರುದು) ನಿಜಪತಾಕಿನಿಯ ನಡುವೆ = ತನ್ನ ಸೈನ್ಯದ ಮಧ್ಯಭಾಗದಲ್ಲಿ, ಮೆಱೆವ = ಎತ್ತರವಾಗಿ ಶೋಭಿಸುತ್ತಿರುವ; ಪತಾಕಾವಿರಾಜಿತಂಅಪ್ಪ = ಪತಾಕೆಯಿಂದ ಶೋಭಾಯಮಾನವಾದ, ತಮ್ಮ ಅಣ್ಣನ ರಥಮಂ ಕಾಣದೆ = ತಮ್ಮ ಅಣ್ಣನಾದ ಧರ್ಮಜನ ತೇರನ್ನು ಕಾಣದೆ, ಕೌರವಬಳಜಳನಿಧಿಯೊಳ್ = ಕೌರವರ ಸೇನೆಯೆಂಬ ಸಮುದ್ರದಲ್ಲಿ, ಬಳ್ವಳಬಳೆದು ಒಗೆದ = ಅತ್ಯಧಿಕವಾಗಿ ಉಂಟಾದ; ಕೇಸುರಿಯಂತೆ (ಕೆಚ್ಚನೆ+ಉರಿ = ಕೇಸುರಿ = ಕ. ಸ) ಕೆಂಪಾಗಿ ಪ್ರಜ್ವಲಿಸುವ ಬೆಂಕಿಯ ಹಾಗೆ; ತಟತಟಿಸಿ = ಚೆನ್ನಾಗಿ ಹೊಳೆಯುತ್ತ, ಮಿಳಿರ್ವ = ಚಲಿಸುವ; ಪವನತನೂಜನ = ವಾಯುಪುತ್ರನಾದ ಭೀಮನ; ಕೇಸರಿಕೇತನಂ ಅಪ್ಪ = ಸಿಂಹವೇ ಧ್ವಜವಾಗಿರುವ; ಪಟಯಿಗೆಯಂ = ಪತಾಕೆಯನ್ನು; ಕಂಡು = ನೋಡಿ; ಮುಟ್ಟಿವರ್ಪ ಅನ್ನೆಗಂ = (ವೈರಿಯು) ಸಮೀಪಕ್ಕೆ ಬರುತ್ತಿದ್ದ ವೇಳೆಗೆ ಸರಿಯಾಗಿ, ಅರಸನಂ = ರಾಜನಾದ ಯುಧಿಷ್ಠಿರನನ್ನು, ಬೀಡಿಂಗೆ = ವಸತಿಗೆ; ಕಳಿಪಿ = ಕಳುಹಿಬಿಟ್ಟು, ಮಗುಟ್ದು ಬಂದ = ಮರಳಿ (ಯುದ್ಧರಂಗಕ್ಕೆ) ಬಂದ, ನಕುಳ ಸಹದೇವರಿಂದೆ = ತಮ್ಮಂದಿರಾದ ನಕುಲಸಹದೇವರ ಮೂಲಕ; ಅರವಿಂದ ಬಾಂಧವತನೂಜನ = ಕಮಲಬಂಧುವಾದ ಸೂರ್ಯನ ಸುಕುಮಾರನಾದ ಕರ್ಣನ; ಮಹಾಪ್ರಹರಣ ಹತಿಯೊಳ್ = ಪ್ರಬಲವಾದ ಹೊಡೆತದಿಂದ ಉಂಟಾದ, ಯಮನಂದನನ ನೋವುಮಂ = ಧರ್ಮಜನ ಬೇನೆಯನ್ನೂ; ಆತ್ಮೀಯ ಬಲದ ನಾಯಕರ = ತಮ್ಮ ಸೈನ್ಯದ ಮುಖಂಡರ; ಸಾವುಮಂ = ಮರಣವನ್ನೂ, ಅಱಿದು = ತಿಳಿದುಕೊಂಡು — ॥

ಪವನಸುತಂಗೆ ಪಾಸಟಿಗಳೊರ್ವರುಮಿಲ್ಲದಱಿಂದಮಾಂತ ಕೌ- ।
ರವ ಬಲದುರ್ಕನೊಂದಿನಿಸು ಮಾಣಿಸಿ ಪೋಪಮಿಳೇಶನಲ್ಲಿಗೆಂ- ॥
ದವನತವೈರಿ ವೈರಿಬಲವಾರಿಧಿಯಂ ವಿಶಿಖೌರ್ವವಹ್ನಿಯಿಂ ।
ತವಿಸಿ ಮರುತ್ತನೂಭವನನಲ್ಲಿಗೆ ಪೇೞ್ದಿರದೆಯ್ದಿ ಭೂಪನಂ ॥ ೮ ॥

ತಾನುಂ ಹರಿಯುಂ ಭೂಪತಿ- ।
ಗಾನತರಾಗಲೊಡಮೊಸೆದು ಪತಿ ಪರಸಿ ಯಮ- ॥
ಸ್ಥಾನಮನೆಂತೆಯ್ದಿಸಿದಿರೊ ।
ಕಾನೀನನ ದೊರೆಯ ಕಲಿಯನುಗ್ರಾಹವದೊಳ್ ॥ ೯ ॥

---

ಪವನಸುತಂಗೆ— ಇಂತೆಂದು ಚಂ. ಮಾಲಾವೃತ್ತಂ ॥ ಪವನಸುತಂಗೆ= ವಾಯುಪುತ್ರನಾದ ಭೀಮಸೇನನಿಗೆ, ಪಾಸಟಿಗಳ್ = (ಸಹಾಯಮಾಡತಕ್ಕ) ಜೊತೆಗಾರರು; ಒರ್ವರುಂ ಇಲ್ಲ= ಒಬ್ಬರಾದರೂ ಇರುವುದಿಲ್ಲ; (ವೈರಿಗಳ ನಡುವೆ ಒಬ್ಬನೇ ಹೋರಾಡುತ್ತಿರುವನು ಬೆಂಬಲಕ್ಕೆ ಯಾರೂ ಇರುವುದಿಲ್ಲ) ಅದಱಿಂದಂ= ಆದ್ದರಿಂದ; ಆಂತಕೌರವಬಲದ ಉರ್ಕಂ= ಪ್ರತಿಭಟಿಸಿದ ಕೌರವ ಸೈನ್ಯದ ಉಬ್ಬರ (ಗರ್ವ)ವನ್ನು, ಒಂದು ಇನಿಸುಮಾಣಿಸಿ= ಒಂದಿಷ್ಟು ಹೋಗಲಾಡಿಸಿ (ಕಡಿಮೆಯಾಗುವಂತೆ ಮಾಡಿ) ಇಳೇಶನಲ್ಲಿಗೆ= ಅರಸನಾದ ಯುಧಿಷ್ಠಿರನಲ್ಲಿಗೆ, ಪೋಪಂ= ಹೋಗುವ (ಹೋಗೋಣ) ಎಂದು= ಹೀಗೆನ್ನುತ್ತ, ಅವನತವೈರಿ= ನಮಸ್ಕರಿಸುವಂತೆ ಮಾಡಲ್ಪಟ್ಟ ವೈರಿಗಳುಳ್ಳವನಾದ ಅರ್ಜುನನು, ವೈರಿಬಲವಾರಿಧಿಯಂ= ಸಾಗರದಂತೆ ಅಪಾರವಾಗಿರುವ ವೈರಿಗಳ ಬಲವನ್ನು; ವಿಶಿಖೌರ್ವವಹ್ನಿಯಿಂ= ವಿಶಿಖ= ಬಾಣರೂಪವಾದ; ಔರ್ವವಹ್ನಿಯಿಂ= ವಡವಾಗ್ನಿಯಿಂದ; ತವಿಸಿ= ನಾಶಪಡಿಸಿ [ತವು (ಧಾತು) ಕ್ಷಯೇ] ಮರುತ್ತನೂಭವನಂ= ವಾಯುಸುಕುಮಾರನಾದ ಭೀಮಸೇನನನ್ನು, (ಭೀಮನ ಕೂಡೆ) ಪೇೞ್ದು= (ಸಂಗತಿಗಳೆಲ್ಲವನ್ನೂ) ಹೇಳಿ, ಭೂಪನಂ= ಧರ್ಮಜನನ್ನು (ನೋಡಬೇಕೆಂದು) ಇರದೆ= ಕೂಡಲೇ, ಅಲ್ಲಿಗೆಎಯ್ದಿ= ಅಲ್ಲಿಗೆ ಹೋಗಿ ॥ ಭೂಪನಾ ಎಂಬ ಪಾಠಾಂತರವೂ ಇದೆ-ಹಾಗದನ್ನು ಇಟ್ಟುಕೊಳ್ಳುವುದಾದರೆ= ಭೂಪನಾ ಅಲ್ಲಗೆ ಇರದೆ ಎಯ್ದಿ ಎಂದು ಅನ್ವಯವಾಗುವುದು ॥ ವೈರಿಭಲವಾರಿಧಿ, ವಿಶಿಖೌರ್ವವಹ್ನಿ — ಈ ಕಡೆಗಳಲ್ಲಿರುವ ರೂಪಕದ ಔಚಿತ್ಯವನ್ನು ಯೋಚಿಸಿಕೊಳ್ಳಬೇಕು ॥ ೮ ॥

ತಾನುಂ — ಇಂತೆಂದು ಕಂದಂ ॥ ತಾನುಂ ಹರಿಯುಂ= ಅರ್ಜುನನೂ ಕೃಷ್ಣನೂ, ಭೂಪತಿಗೆ= ಅರಸನಾದ ಧರ್ಮಜನಿಗೆ, ಆನತರಾಗಲೊಡಂ= ನಮಸ್ಕಾರ ಮಾಡಲು; ಪತಿ= ಭೂಪಾಲಕನಾದ ಯುಧಿಷ್ಠಿರನು, ಒಸೆದು= ಮನಸ್ಸಂತೋಷವುಳ್ಳವನಾಗಿ [ಒಸೆ(ಧಾತು)ಪ್ರಸನ್ನೇ] ಪರಸಿ= ಆಶೀರ್ವದಿಸಿ; ಉಗ್ರಾಹವದೊಳ್=

ನರನಾರಾಯಣರೆಂಬಿ- ।
ರ್ವರು ಮೊಡಗೂಡಿದೊಡೆ ಗೆಲ್ವರಾರುರ್ವರೆಯೊಳ್ ॥
ನಿರುತಮೆನೆ ನೆಗಟ್ದ್ತ* ನಿಮ್ಮಿ- ।
ರ್ವರ ದೊರೆಗಂ ಬಗೆವೊಡಗ್ಗಳರ್ ನರರೊಳರೇ ॥ ೧೦ ॥
ಎಂತೆನೆ ಮುಯ್ಯೇಟ್ ಸೂಟಿಳೆ- ।
ಯಂ ತಳದೊಳೆ ಪಿಟಿದನಾತನೆಂಬುದನಾಂ ಮು- ।
ನ್ನೆಂತುಂ ನಂಬೆನೆ ನಂಬಿದೆ- ।
ನಿಂತಿಂದಿನ ಗಂಡವಾತಿನೊಳ್ ಸೂತಜನಂ ॥ ೧೧ ॥

---

(ಉಗ್ರ+ಆಹವ) ಭೀಕರನಾದ ಯುದ್ಧದಲ್ಲಿ, ಕಾನೀನನ=ಕನ್ಯೆಯಲ್ಲಿ ಹುಟ್ಟಿದವನಾದ ಕರ್ಣನ(ಕುಂತಿಯು ಕನ್ನಿಕೆಯಾಗಿದ್ದಾಗಲೇದೂರ್ವಾಸನ ಮಂತ್ರದ ಪ್ರಭಾವವನ್ನು ನೋಡೋಣವೆಂದು ಪರೀಕ್ಷಿಸಹೊರಡಲು ಸೂರ್ಯನು ಪ್ರಸನ್ನನಾಗಿ ಬಂದು ಪುತ್ರನನ್ನು ದಯಪಾಲಿಸಿದ ಕಥೆಯನ್ನು ಅನ್ವಯಿಸಿಕೊಳ್ಳಬೇಕು) ದೊರೆಯ=ಸರಿಸಮನಾದ (ಕರ್ಣನಂತಹ ಪ್ರಭಾವಶಾಲಿಯಾದ) ಕಲಿಯಂ=ವೀರನನ್ನು; ಯಮಸ್ಥಾನಮಂ=ಯಮಲೋಕವನ್ನು (ಶೈಮಿನಿಯನ್ನು) ಎಂತು-ಹೇಗೆತಾನೇ, ಎಯ್ದಿಸಿದಿರೊ=ಹೊಂದಿಸಿದಿರೋ "ಅತುಲ ವಿಕ್ರಮಿಯಾದ ಕರ್ಣನನ್ನು ನೀವಿಂದು ಹೇಗೆ ನಾಶಪಡಿಸಿದಿರೋ ವಿವರಿಸಿರಿ. ಅವನು ಯಾರಿಂದಲೂ ಸೋಲದಂತಹ ಪ್ರಭಾವಶಾಲಿ"ಯೆಂದು ಧರ್ಮಜನ ಅಭಿಪ್ರಾಯವು. ॥ ೯ ॥

ನರನಾರಾಯಣರ್ — ಇಂತೆಂದು ಕಂದಂ ॥ ನರನಾರಾಯಣರೆಂಬ=(ಬದರಿಕೆಯಲ್ಲಿ ತಪಸ್ಸುಮಾಡುತ್ತಿದ್ದ ನರನಾರಾಯಣರೆಂಬ ಋಷಿಗಳು ಅರ್ಜುನ ಕೃಷ್ಣರಾಗಿ ಅವತರಿಸಿದರೆಂದು ಪೌರಾಣಿಕ ಕಥೆಯು) ನರನಾರಾಯಣರೆಂದು ಪ್ರಸಿದ್ಧರಾದ, ಇರ್ವರುಂ=ನೀವಿಬ್ಬರೂ ಒಡಗೂಡಿದೊಡೆ=ಒಂದಾಗಲು (ನಿಮ್ಮನ್ನು) ಉರ್ವರೆಯೊಳ್=ಭೂಮಿಯಲ್ಲಿ; ಗೆಲ್ವರ್ ಆರ್=ಜಯಿಸುವವರು ಯಾರಿರುವರು? (ಯಾರೂ ಇಲ್ಲವೆಂದು ಭಾವವು) ಬಗೆವೊಡೆ=ಯೋಚಿಸಿ ನೋಡಲು; ನಿರುತಂ=ಯಾವಾಗಲೂ ಒಂದಾಗಿಯೇ ಇರುವವರೆಂಬಹಾಗೆ, ನೆಗಟ್ದ=ಪ್ರಸಿದ್ಧಿಪಡೆದವರಾದ; ನಿಮ್ಮ ಇರ್ವರದೊರೆಗಂ=ನಿಮ್ಮಿಬ್ಬರ ಸರಿಸಮಾನತೆಗೂ; ಅಗ್ಗಳರ್=ಶ್ರೇಷ್ಠರಾದ, ನರರ್=ಮನುಷ್ಯರು ಒಳರೇ=ಇರುವರೇ [ಪುರುಷತ್ರಯದೊಳ್ ಉಳ್ ಧಾತುವಿನ ಮೊದಲುಕಾರಕ್ಕೆ ಹಸ್ವೋತ್ವಮಕ್ಕಂ ಉಳ್=ಒಳ್; ಉಳ್ ಧಾತು ಪೂರ್ವದೊಳ್ ನೆಗಟ್ಗಂ ಹಸ್ವೋತ್ವಂ ಪುರುಷತ್ರಯದೊಳ್ ॥ ಶ. ಮ. ದ. ಸೂತ್ರ ॥ ೨೪೪ ॥] ॥ ೧೦ ॥

ಎಂತೆನೆ— ಇಂತೆಂದು ಕಂದಂ ॥ ಎಂತೆನೆ=ಹೇಗೆಂದರೆ; ಅತಂ=ಅ

ಇನ್ನುಂ ಕರ್ಣನ ರೂಪೆ ದ- ।
ಲೆನ್ನೆರ್ದೆಯೊಳಮೆನ್ನ ಕಣ್ಣೊಳಂ ಸುಟಿದಪುದಾಂ- ।
ತೆನ್ನಚ್ಚ ಶರಮುಮಂ ಗೆ- ।
ಲ್ದೆನ್ನುಮನಂಜಿಸಿದನೆಂದೊಡಿನ್ನೇನೆಂಬೆಂ ॥ ೧೨ ॥

---

ಕರ್ಣನು; ಮುಯ್ಯೇಟ್ ಸೂಟ್=ಇಪ್ಪತ್ತೊಂದು ಸಾರಿ, ["ಮೂಱು" ಎಂಬುದಕ್ಕೆ ಮುಯ್ ಎಂಬ ಆದೇಶವು—ಚರಮಕ್ಕದರ್ಶನಂ ಮೂ । ಱಿರ— ಪಿರಿದುಂ ಹಸ್ವಂ ಮೊದಲೊಳ್ । ಸ್ವರಮಿದಿರೆ ಮೂಱಱಲ್ಲಿ ಮುಯ್ಯಾದೇಶಂ ॥ ಶ. ಮ ದ ಸೂತ್ರ ॥ ೧೮೮ ॥ ]ಎಳೆಯುಂ=ಭೂಮಿಯುನ್ನು;ತಳದೊಳ್=ಕೈಯಲ್ಲೇ, ಪಿಟಿದಂ= ಹಿಂಡಿದನು [ಪಿಟಿ (ಧಾತು) ನಿರ್ದ್ರವಕರಣೇ; (ಹಿಳಿ) ಪಿಳಿ=ಸೀಳು,] ಎಂಬುದಂ= ಹೀಗೆ ಜನರು ಹೇಳಿಕೊಳ್ಳುವ ಸಂಗತಿಯನ್ನು, ಮುನ್ನೆ=ಮೊದಲೆಂದೂ, ಆಂ= ನಾನು, ನಂಬೆನೆ=ನಿಶ್ಚಯವಾಗಿಯೂ ನಂಬದಿದ್ದೆನು; ಇಂದಿನ+ಈ ದಿನದ, ಗಂಡವಾತಿನೊಳ್=ಪೌರುಷೋಕ್ತಿಯಲ್ಲಿ (ವೀರಾಲಾಪದಲ್ಲಿ), ಗಂಡುಸುತನವುಳ್ಳ ಮಾತಿನಲ್ಲಿ; (ಅಥವಾ ಇಂದಿನ ಯುದ್ಧದ ಪರಿಣಾಮವಾಗಿ ಎಲ್ಲೆಲ್ಲಿಯೂ ಆತನ ಪರಾಕ್ರಮವನ್ನು ವೀರಾಧಿವೀರರೇ ಹೊಗಳುತ್ತಿದ್ದಾರೆ. ಅದರಿಂದ ಎಂಬ ಅರ್ಥವನ್ನು ಮಾಡಿದರೂ ಕರ್ಣನ ಯೋಗ್ಯತೆಗೆ ಮಿರುಗುಕೊಟ್ಟಂತಾಗುವುದು) ಸೂತಜನ=ಸೂತಸುತನಾದ ಕರ್ಣನನ್ನು; ಇಂತು=ಅಸಮಾನ ವಿಕ್ರಮಿಯೆಂಬುದಾಗಿ, ನಂಬಿದೆಂ= ವಿಶ್ವಾಸವುಳ್ಳವನಾದೆನು. ॥ ೧೧ ॥

ಇನ್ನುಂ—ಇಂತೆಂದು ಕಂದಂ ॥ ಇನ್ನುಂ=ಇಷ್ಟು ಸಮಯವು ಕಳೆದರೂ, ಇನ್ನೂ; ಎನ್ನ ಎರ್ದೆಯೊಳಂ=[ಎರ್ದೆ (ಸಂ)=ಹೃದಯ] ನನ್ನ ಮನಸ್ಸಿನಲ್ಲೂ, ಎನ್ನ ಕಣ್ಣೊಳಂ=ನನ್ನ ದೃಷ್ಟಿಗಳಲ್ಲೂ; ಕರ್ಣನ ರೂಪೆ=ಆ ಇನಜನ ಆಕೃತಿಯೇ, ಸುಟಿದಪುದುದಲ್=ನಿಜಕ್ಕೂ ಸುತ್ತುತ್ತಲೇ ಇರುವುದು (ಕಣ್ಮನಸ್ಸುಗಳ ಮುಂದೆ ಆತನ ಆಕೃತಿಯೇ ಗೋಚರಿಸುತ್ತಿರುವುದು) ಸುಳಿ-(ನಾ) ಜಲಾವರ್ತೇ, ಸುಟಿ= (ಧಾ) ಪರಿಭ್ರಮಣೇ] ಅಂತು=ಪ್ರತಿಭಟಿಸಿ; ಎನ್ನ ಎಚ್ಚ ಶರಮುಮಂ=ನಾನು ಹೂಡಿದ ಬಾಣವನ್ನೂ (ಇಲ್ಲಿ ಆಂ ಎಚ್ಚ ಎಂಬ ಪ್ರಥಮಾರ್ಥದಲ್ಲಿ ಎನ್ನ ಎಂಬ ಷಷ್ಠಿಯಿದೆ. ಅಥವಾ 'ಎಚ್ಚ ಎನ್ನ ಬಾಣಮಂ। ಎಂದೂ ಹೇಳಿಕೊಳ್ಳಬಹುದು)ಗೆಲ್ದು= ಜಯಿಸಿ; ಎನ್ನುಮಂ=ಯುಧಿಷ್ಠಿರನೆಂದು ಪ್ರಸಿದ್ಧನಾದ ನನ್ನನ್ನು ಕೂಡ, ಅಂಜಿಸಿದಂ ಎಂದೊಡೆ=ಹೆದರಿಸಿದನೆಂದರೆ, ಇನ್ನು+ಏನೆಂಬೆಂ=ಆತನ ವಿಕ್ರಮಾತಿಶಯವನ್ನು ನಾನು ಏನೆಂದು ಹೇಳಲಿ? (ಅಪ್ರತಿಹತವಾದ ತನ್ನ ಬಾಣವನ್ನು ಜಯಿಸಿ

ಅಂತಪ್ಪದಟನನಾಜಿಯೊ- ।
ಳೆಂತೆಂತಿದಿರಾಂತು ಗೆಲ್ದಿರೆನೆ ನೃಪನಂ ಕಂ- ॥
ಸಾಂತಕನೆಂದಂ ಕರ್ಣನು- ।
ಮಾಂತಿರೆ ನೀವಿಂದು ನೊಂದುದಂ ಕೇಳ್ದೀಗಳ್ ॥ ೧೩ ॥
ಆರಯ್ಯಲೆಂದು ಬಂದೆವ- ।
ಪಾರಗುಣಾ ಕೊಂದೆವಿಲ್ಲವಿನ್ನುಂ ಬಳವ- ॥
ತ್ಕ್ರೂರಾರಾತಿಯನುಪಸಂ- ।
ಹಾರಿಪೆವೇವಿರಿಯನಾದನೆಂಬುದುಮಾಗಳ್ ॥ ೧೪ ॥

---

ತನ್ನನ್ನೂ ಅಂಜಿಸಿದುದರಿಂದ ಆ ಕರ್ಣನು ವೀರಾಗ್ರಣಿಯೆಂಬುದರಲ್ಲಿ ಸಂಶಯ ವಿಲ್ಲವೆಂದು ಧರ್ಮಜನ ಮಾತಿನ ಸಾರವು) ॥ ೧೨ ॥

ಅಂತಪ್ಪ — ಇಂತೆಂದು ಕಂದಂ ॥ ಅಂತಪ್ಪ = ಹಾಗಿರುವ, ಅದಟನಂ = ಸಾಮರ್ಥ್ಯಶಾಲಿಯನ್ನು, ಆಜಿಯೊಳ್ = ಯುದ್ಧದಲ್ಲಿ, ಎಂತು ಎಂತು = ಹೇಗೆ ಹೇಗೆ, ಇದಿರಾಂತು = ಪ್ರತಿಭಟಿಸಿ, ಗೆಲ್ದಿರ್ = ಜಯಿಸಿಕೊಂಡಿರಿ; ಎನೆ = ಹೀಗೆ ಕೇಳಲು, ಕಂಸಾಂತಕಂ = ಕಂಸಮರ್ದನನಾದ ಶ್ರೀಕೃಷ್ಣನು; ನೃಪನಂ = ಅರಸನಾದ ಯುಧಿಷ್ಠಿರನನ್ನು ಕುರಿತು; ಎಂದಂ = ಹೀಗೆ ಹೇಳಿದನು — ಕರ್ಣನುಂ = ಇನತನಯನಾದ ಆ ಕರ್ಣನು, ಆಂತಿರೆ = ಪ್ರತಿಭಟಿಸಿ ನಿಂತಿರಲು, ಇಂದು = ಈ ದಿನ; ನೀಂನೊಂದುದಂ = ನೀವು ವ್ಯಸನಕ್ಕೆ ಗುರಿಯಾದುದನ್ನು, ಈಗಳ್ = ಈಗ ತಾನೇ; ಕೇಳ್ದು = ಕೇಳಿ ತಿಳಿದುಕೊಂಡು ॥ ೧೩ ॥

ಆರಯ್ಯಲ್ — ಇಂತೆಂದು ಕಂದಂ ॥ ಅಪಾರಗುಣಾ = ಅತಿಶಯ ಗುಣಗಳಿಂದ ಮೆರೆಯುತ್ತ ಅಜಾತಶತ್ರುವೆಂದು ಪ್ರಸಿದ್ಧನಾದ ಮಹಾರಾಜನೇ; ಆರಯ್ಯಲ್ ಎಂದು = ವಿಚಾರ ತೆಗೆದುಕೊಳ್ಳೋಣವೆಂದು; ಬಂದೆವು = (ಇಲ್ಲಿಗೆ) ಬಂದಿರುವೆವು. ಇನ್ನುಂ = ಇನ್ನೂ. ಬಲವತ್ಕ್ರೂರಾರಾತಿಯಂ = ಬಲಶಾಲಿಯೂ ಕಠಿಣ ಸ್ವಭಾವದವನೂ ಆಗಿರುವ ಆ ವೈರಿಯನ್ನು, ಕೊಂದೆವಿಲ್ಲ = ನಾಶಪಡಿಸಿಲ್ಲ; ಉಪಸಂಹಾರಿಪೆವು = ಈಗತಾನೇ ನಾಶಗೊಳಿಸುವೆವು, [ಉಪಸರ್ಗದ ಬಲದಿಂದ ಧಾತು ಮೂಲಾರ್ಥವನ್ನು ಬಿಟ್ಟು ಬೇರೊಂದನ್ನು ಹೊಂದಿಕೊಳ್ಳುತ್ತದೆ = "ಉಪಸರ್ಗ ಬಲಾದ್ಧಾತುಃ ಬಲಾದನ್ಯತ್ರನೀಯತೇ । ಪ್ರಹಾರಾಹಾರಸಂಹಾರವಿಹಾರ ಪರಿಹಾರ ಇವುಗಳ ಹಾಗೆ] (ಏಂ + ಪಿರಿಯಂ + ಆದಂ) ಏವಿರಿಯನಾದಂ = ಅವನು ಅಂತಹ ಅಸಾಧ್ಯನಾದನೇನು? ಎಂಬುದುಂ = ಎಂದು ಹೇಳುತ್ತಿರಲು, ಆಗಳ್ = ಅಷ್ಟರಲ್ಲೇ; (ಅವನೇನೂ ಅಂತಹ ಅಸಾಧ್ಯನಲ್ಲವೆಂದು ಭಾವವು) ॥ ೧೪ ॥

ನರಕಾಂತಕನಂ ನುಡಿದಂ ।
ನರೇಂದ್ರನಾನರಸುಗೆಯ್ವ ಪಟುವಗೆಯನದಂ ॥
ಪರಿಹರಿಸಿದೆನಾತನ ನೀ ।
ಕಿರೀಟಿ ಗೆಲ್ದೆನಗೆ ಪಟ್ಟಮುಂ ಮಾಡುವನೇ ॥ ೧೫ ॥
ಏಮ್ಮೊಗ್ಗೆ ಕರ್ಣನಿಂತೀ ।
ನಿಮ್ಮಂದಿಗರಿಱಿಯೆ ಸಾವನೇ ಸುಖಮಿರಿಮಿ- ॥
ನ್ನಮ್ಮ ಸುಯೋಧನನೊಳ್ ಪಗೆ- ।
ಯಮ್ಮಱಿದಾನುಂ ತಪೋನಿಯೋಗದೊಳಿರ್ಪೆಂ ॥ ೧೬ ॥

---

ನರಕಾಂತಕನಂ — ಇಂತೆಂದು ಕಂದಂ ॥ ನರೇಂದ್ರಂ = ಅರಸನಾದ ಯುಧಿಷ್ಠಿರನು; ನರಕಾಂತಕನಂ = ನರಕಾಸುರನನ್ನು ಸಂಹರಿಸಿದವನಾದ ಕೃಷ್ಣನನ್ನು ಕುರಿತು; [ನರಕಾಸುರನೆಂದರ ವರಾಹಾವತಾರವನ್ನು ತಳೆದಿದ್ದ ವಿಷ್ಣುವಿನ ದೇಹದಿಂದ ಸ್ವೇದ ಬಿಂದು ಭೂಮಿಯ ಮೇಲೆ ಬೀಳಲು ಭೂಮಿಯಿಂದ ಉಂಟಾದವನು. ಆದ್ದರಿಂದ ಅವನಿಗೆ ಭೌಮಾಸುರನೆಂಬ ಹೆಸರೂ ಉಂಟು ಈ ಮಗನಿಗೆ ಭೂಮಿಯು ವೈಷ್ಣವಾಸ್ತ್ರವನ್ನು ಸಂಪಾದಿಸಿಕೊಟ್ಟಳು. ಅದರ ಬಲದಿಂದ ಆತನು ದುರ್ಜಯನಾಗಿಪ್ರಾಗ್ಜ್ಯೋತಿಷನಗರದಲ್ಲಿ ನೆಲಸಿ ಇಂದ್ರನ ಶ್ವೇತಚ್ಛತ್ರವನ್ನೂ ಅದಿತಿಯ ಕರ್ಣಕುಂಡಲಗಳನ್ನೂ ಇಂದ್ರವಿಹಾರಕ್ಕಾಗಿದ್ದ ಮಣಿಶಿಖರವನ್ನೂ ಸ್ವಾಧೀನಪಡಿಸಿದನು. ಕೃಷ್ಣನು ಅವನನ್ನು ಸಂಹರಿಸಿ ದೇವತೆಗಳಿಗೆ ಸುಖವನ್ನು ಕಲ್ಪಿಸಿದನು.] ನುಡಿದಂ = ಹೀಗೆಂದನು, ಆಂ = ನಾನು, ಅರಸುಗೆಯ್ವ = ರಾಜ್ಯಭಾರ ಮಾಡಬೇಕೆಂಬ, ಪಟುವಗೆಯಂ ಅದಂ = (ಪಟು + ಬಗೆ = ಕಾಡು ಅಭಿಪ್ರಾಯ) ಗಹನವಾದ ಆ ಭಾವನೆಯನ್ನು; ಪರಿಹರಿಸಿದೆಂ = ನಿವಾರಿಸಿಕೊಂಡೆನು; ಈ ಕಿರೀಟಿ ಆತನಂಗೆಲ್ದು = ಈ ಅರ್ಜುನನು ಆ ಕರ್ಣನನ್ನು ಜಯಿಸಿ [ಕಿರೀಟಿ = ಅರ್ಜುನನು ಪಾಶುಪತಾಸ್ತ್ರವನ್ನು ಪಡೆದು ಸ್ವರ್ಗಲೋಕಕ್ಕೆ ಹೋಗಿ ನಿವಾತಕವಚರ ಗುಂಪನ್ನು ನಾಶಪಡಿಸಿದನೆಂಬ ಸಂತೋಷದಿಂದ ಇಂದ್ರನು ಅರ್ಜುನನನ್ನು ತನ್ನ ಅರ್ಧಾಸನದಲ್ಲಿ ಕುಳ್ಳಿರಿಸಿ ಆತನ ತಲೆಯ ಮೇಲೆ ಕಿರೀಟವನ್ನಿಟ್ಟು ಗೌರವಿಸಿದನು. ಅಂದಿನಿಂದ ಅವನಿಗೆ ಕಿರೀಟಿಯೆಂಬ ಹೆಸರು ಬಂತು] ಎನಗೆ — ನನಗೆ; ಪಟ್ಟಮುಂ = ಹಸ್ತಿನಾವತಿಯ ಪಟ್ಟಾಭಿಷೇಕವನ್ನು; ಮಾಡುವನೇ = ಲಭಿಸುವಂತೆ ಮಾಡುವನೇ ? (ಅದು ಆತನಿಂದ ಸಾಧ್ಯವಾಗದೆಂಬುದರಿಂದಲೇ ಆ ಬಗೆಯ ಪಟುವಗೆಯು; ಅದನ್ನು ನಾನು ಸಂಪೂರ್ಣವಾಗಿ ಬಿಟ್ಟುಬಿಟ್ಟಿರುವೆನು ಎಂದು ತಾತ್ಪರ್ಯವು ॥ ೧೫ ॥

ಏಮ್ಮೊಗ್ಗೆ — ಇಂತೆಂದು ಕಂದಂ ॥ ಏಂಮೊಗ್ಗೆ = ಅದು ಸಾಧ್ಯವಾಗುವುದೇ

ವ ॥ ಎಂದು ತನ್ನ ನೋಯೆ ನುಡಿದ ನಿಜಾಗ್ರಜನ ನುಡಿಗೆ ಮನದೊಳೇ ವ್ಯೆಸಿಯುಮೇವ್ಯೆಸದೆ ವಿನಯಮನೆ ಮುಂದಿಟ್ಟು ವಿನಯಭೂಷಣ ನಿಂತೆಂದಂ –

ಮುಳಿದಿಂತು ಬೆಸಸೆ ನಿಮ್ಮಡಿ ।
ಯೊಳೆ ಮಾರ್ಕೊಂಡೆಂತು ನುಡಿವೆನುಸಿರೆಂ ನಿಮ್ಮಂ ॥
ಮುಳಿಯಿಸಿದ ಸುರಾಸುರರುಮ- ।
ನೊಳರೆನಿಸೆಂ ಕರ್ಣನೆಂಬನೆನಗೇವಿರಿಯಂ ॥ ೧೭ ॥

---

ನು? ಇಂತು ಈ ನಿಮ್ಮಂದಿಗರ್ ಇಱಿೞಯೆ = ಹೀಗೆ ಈ ನಿಮ್ಮ ಹಾಗಿರುವವರು ಹೋರಾಡಲು; ಕರ್ಣಂಸಾವನೇ ? = ಕರ್ಣನು ಮೃತಿಹೊಂದುವನೇ ? ಇಂ = ಇನ್ನುಮೇಲೆ; ನಮ್ಮ ಸುಯೋಧನನೊಳ್ = ನಮ್ಮ ದೊಡ್ಡ ತಂದೆಯ ಮಗನಾದ ಸುಯೋಧನನಲ್ಲಿ; ಪಗೆಯಂ = ವೈರವನು ; ಮಱೆದು = ಮರೆತುಬಿಟ್ಟು; ಸುಖಂ ಇರಿಂ = ಸುಖವಾಗಿ ಇದ್ದುಕೊಳ್ಳಿರಿ; ಆನುಂ = (ಈ ರೀತಿಯ ವೈರದಿಂದ ಇಷ್ಟೆಲ್ಲಾ ಅನರ್ಥಕ್ಕೂ ಹೇತುವಾದ) ನಾನಾದರೂ, ತಪೋನಿಯೋಗದೊಳ್ = (ತಪಸ್+ನಿಯೋಗ = ಸಂ. ಉತ್ವಸಂಧಿ) ತಪಸ್ಸಿನ ಕಾರ್ಯದಲ್ಲಿ; ಇರ್ಪೆಂ = ಇರುವೆನು ॥ ಇದುವರೆಗೆ ನನ್ನಲ್ಲಿದ್ದ ಭಾವನೆಯೆಲ್ಲವೂ ಗಾಳಿಯ ಗೋಪುರವಾಯಿತು; ಅದು ಸಾಧ್ಯವಿಲ್ಲದ ದೇ ನಿಶ್ಚಯವಾದ್ದರಿಂದ ನೀವಾದರೂ ಆ ಸಹೋದರರೊಂದಿಗೆ ಒಳ್ಳೆಯ ರೀತಿಯಿಂದಿದ್ದುಕೊಂಡು ಸುಖವಾಗಿ ಬಾಳಿರಿ ನಾನು ಅರಣ್ಯದಲ್ಲಿ ತಪಸ್ಸುಮಾಡುತ್ತಿರುವೆನು ಎಂಬುದು ಧರ್ಮಜನ ಮಾತಿನ ಸಾರಾಂಶವು ॥ ೧೬ ॥

ಎಂದು — ಇಂತೆಂದು ವಚನಂ ॥ ಎಂದು = ಈ ಬಗೆಯಿಂದ; ತನ್ನ = ತನ್ನನ್ನು, (ದ್ವಿತೀಯೆಗೆ ಷಷ್ಠೀ) ನೋಯೆ = ವ್ಯಸನಪಡುವ ಹಾಗೆ, ನುಡಿದ = ಹೇಳಿದ; ನಿಜಾಗ್ರಜನ = (ನಿಜ+ಅಗ್ರಜ) ತನ್ನ ಅಣ್ಣನ; ನುಡಿಗೆ ಮನದೊಳ್ = ಮಾತಿಗೆ ಮನಸ್ಸಿನಲ್ಲಿ, ಏವೈಸಿಯುಂ = ವ್ಯಸನ ಹೊಂದಿಯೂ, ಏವೈಸದೆ = ಆ ದುಃಖವನ್ನು ಪ್ರಕಟಿಸಿಕೊಳ್ಳದೆ (ಅಸೂಯೆಯನ್ನು ಹೊರಗೆಡಹದೆ); ವಿನಯಭೂಷಣಂ = ವಿನಯವೇ ಆಭರಣವಾಗಿರತಕ್ಕ ಅರ್ಜುನನು; ವಿನಯಮನೆ = ಮುಂದಿಟ್ಟು = ವಿನಯವನ್ನೇ ಮುಂದೆ ಮಾಡಿ (ವಿನೀತನಾಗಿ) ಇಂತೆಂದಂ – ಹೀಗೆ ಹೇಳಿಕೊಂಡನು ॥ (ಅಣ್ಣನು ಅವಮಾನವಾಗುವ ಹಾಗೆ ಮರ್ಮಿಕವಾಗಿ ನುಡಿದರೂ ತಮ್ಮನು ವಿನಯದಿಂದಲೇ ಹೇಳಿದನು.)

ಮುಳಿದು — ಇಂತೆಂದು ಕಂದಂ ॥ ಮುಳಿದು = ಸಿಟ್ಟುಗೊಂಡು (ನೀವು) ಇಂತು ಬೆಸಸೆ = ಹೀಗೆ ಆಜ್ಞಾಪಿಸಿದರೂ; (ಸಿಟ್ಟುಗೊಂಡ ನಿಮ್ಮಿಂದ ಇಂತಹ ಅಪ್ಪಣೆಯಾ

ಇಂದರಸ ನೇಸಱಿಂದೊಳ- ।
ಗಾಂ ದಿನಕರಸುತನನಿಕ್ಕಿ ಬಂದಲ್ಲದೆ ಕಾ- ॥
ಣೆಂ ದಲ್ ಭವತ್ಪದಾಬ್ಜಮ- ।
ನೆಂದೆಟ್ದಿನುದಶ್ರುಜಳಲವಾರ್ದ್ರಕಪೋಲಂ ॥ ೧೮ ॥

ವ ॥ ಅಂತು ಭೂನಾಥಂ ತನ್ನಳವನಱಿದುಮಱಿಯದೆ ಕಿಡನುಡಿದು ತಪೋವನದೊಳಲ್ಲದೆ ನೀಗೆನೆಂದೆಟ್ದುನಿಂದಿರ್ದ ನನಸುರಾಂತಕನುಂ ತಾನುಮೆಂತಾನುಂ ಪ್ರಾರ್ಥಿಸಿದೊಡೊಡಂಬಟ್ಟಜಾತಶತ್ರುಗೆ ಪೊಡೆವಟ್ಟು ರಥಮನೇಱಿ ಕೌರವಧ್ವಜಿನಿಗೆ ಭಯಜ್ವರಂ ಬರ್ಪಂತೆ ಬಂದು ಪವನ

---

ದರೂ) ನಿಮ್ಮ+ಅಡಿಯೊಳೆ= ತಮ್ಮ ಮುಂದೆಯೇ, ಮಾರ್ಕೊಂಡು = ಎದುರಾಗಿ; (ಪ್ರತಿಯಾಗಿ) ಎಂತುನುಡಿವೆಂ= ಹೇಗೆ ಹೇಳಿಕೊಳ್ಳುವೆನು (ತಮ್ಮ ಮುಂದೆ ನಾನೆಂದಿಗೂ ಪ್ರತಿ ಮಾತನ್ನು ಆಡಿಕೊಳ್ಳಲಾರೆನು) ಉಸಿರೆಂ= (ಖಂಡಿತವಾಗಿಯೂ) ಹೇಳಲಾರೆನು; ನಿಮ್ಮಂ= ನಿಮ್ಮನ್ನು; ಮುಳಿಯಿಸಿದ= ಕೋಪಗೊಳಿಸಿದ, ಸುರಾಸುರರುಮಂ= (ಸುರ+ಅಸುರ) ದೇವತೆಗಳಾಗಲಿ ದಾನವರಾಗಲಿ ಯಾರನ್ನಾದರೂ ಸರಿಯೆ, ಒಳರ್ ಎನಿಸೆಂ= ಇರಗೊಡಿಸೆನು; ಕರ್ಣನೆಂಬಂ= ಆ ಕರ್ಣನೆಂಬವನು, ಎನಗೆ ಪಿರಿಯಂ ನನಗೆ ಅಸಾಧ್ಯವಾದ ಬಲಶಾಲಿಯೇನು? (ನನಗೆ ಎಷ್ಟರವನು?) ॥ (ನಾನು ಹಿರಿಯರಲ್ಲಿ ವಿನಯವನ್ನು ಬಿಟ್ಟು ಮಾತಾಡಲಾರೆನು, ಗುರುವಚನವಲಂಘ್ಯವೆಂಬುದು ನನ್ನ ಧ್ಯೇಯವು, ತಮ್ಮನ್ನು ಕೆಣಕಿದವರು ಯಾರಾದರೂ ಜೀವಿಸಲಾರರು' ಆ ಕರ್ಣನೇನೂ ನನಗೆ ಬಲದಲ್ಲಿ ಹಿರಿಯನಲ್ಲ. ಅವನ ಲಕ್ಷ್ಯವು ನನಗಿಲ್ಲವೆಂದು ಸಾರವು) ॥ ೧೭ ॥

ಇಂದರಸ— ಇಂತೆಂದು ಕಂದಂ ॥ ಅರಸ= ದೊರೆಯೇ; ಆಂ= ನಾನು; ಇಂದು ನೇಸಱಿಂದೊಳಗೆ= ಈದಿನ ಸೂರ್ಯನು ಅಸ್ತಮಾನ ಹೊಂದುವುದರ ಮೊದಲಾಗಿ; ದಿನಕರಸುತನಂ= ಸೂರ್ಯಸುತನಾದ ಕರ್ಣನನ್ನು; ಇಕ್ಕಿಬಂದಲ್ಲದೆ= ಕೆಡಹಾಕಿಬಾರದೇನೇ; ಭವತ್ಪದಾಬ್ಜಮಂ= ತಮ್ಮ ಪಾದಕಮಲಗಳನ್ನು (ಜಾತ್ಯೇಕವಚನ) ಕಾಣೆಂದಲ್ = ಖಂಡಿತವಾಗಿಯೂ ನೋಡಲಾರೆನು; ಎಂದು= ಹೀಗೆನ್ನುತ್ತ; ಉದಶ್ರುಜಳಲವಾರ್ದ್ರಕಪೋಲಂ= ಉಂಟಾದ ಕಣ್ಣೀರ ಹನಿಗಳಿಂದ ತೊಯ್ದ ಕೆನ್ನೆಗಳುಳ್ಳವನಾಗಿ; ಎಟ್ದಿಂ= ನಿಂತುಕೊಂಡನು (ಹೊರಡಲನುವಾದನು) (ಆಹಗೆಯನ್ನು ಕೊಂದೇ ತಮ್ಮನ್ನು ನೋಡುವೆನು ಎಂದು ಪ್ರತಿಜ್ಞಾಬದ್ಧನಾಗಿ ಹೊರಡತೊಡಗಿದನು) ॥ ೧೮ ॥

ಅಂತು— ಇಂತೆಂದು ವಚನಂ ॥ ಅಂತು= ಹಾಗೆಯೇ; ಭೂನಾಥಂ= ಅರಸನಾದ ಯುಧಿಷ್ಠಿರನು; ತನ್ನ= ಅರ್ಜುನನ; ಅಳವಂ= ಸಾಮರ್ಥ್ಯವನ್ನು; ಅಱಿದುಂ=

ಜನನೊಡಗೊಂಡು ಪವನಜವದಿಂ ಕರ್ಣನ ರಥಮೆಲ್ಲಿತ್ತೆತ್ತ ಪೋದುದೆ ನುತುಂ ಬರ್ಪತಿರಥಮಥನನ ರಥದ ಬರವಂ ಕಂಡು ಕೌರವಬಲ ಮೆಲ್ಲಮೊಲ್ಲನುಲಿದೋಡಿ ವೈಕರ್ತನನ ಮಱೆಯಂ ಪುಗುವುದುಂ ಮದೀಯಮನೋರಥಮಿಂದು ದೊರೆಕೊಂಡುದೆಂದು ದಿನಕರತನೂಜ ನೆರಡುಂ ಮುಯ್ಯುಮಂ ನೋಡಿ ಸಮರಾನಂದಂ ಬೆರಸು ಶಲ್ಯನಂ ರಥಮನೆಸಗಲ್ವೇೞ್ದು ದಿವ್ಯಾಸ್ತ್ರಂಗಳ ದೊಣೆಗಳನೆರಡುಂ ದೆಸೆಯೊಳಂ ಬಿಗಿದು ಕಾಳವಟ್ಟದ ಬಿಲ್ಲಂ ಕೆಂದಳದೊಳಮರೆ ನೀವಿ ಜೇವೊಡೆದು ಯುಗಾಂತವಾತಾಹತಕುಲಗಿರಿಯೆ ನೆಲೆಯಿಂ ತಳರ್ವಂತೆ ತಳರ್ದು ಧ್ವಾಂಕ್ಷಧ್ವಜಮಂಬರತಳದೊಳ್ ಮಿಳಿರೆ ತನಗಿದಿರಂ ಬರ್ಪ ಕರ್ಣನ ರಥಕ್ಕೆ ತನ್ನ ರಥಮನಾಸನ್ನಮಾಗೆ ಪರಿಯಿಸಿ ವಿಂಧ್ಯಮಳಯಮಹೀ ಧರಂಗಳೊಂದೊಂದಱೊಳ್ ತಾಗುವಂತೆ ತಾಗಿ ದೇವವತ್ತಶಂಖ ಮಂ ಪೂರಿಸಿ ಗಾಂಡೀವಮನೇಱಿಸಿ ನೀವಿ ಜೇವೊಡೆದಂ ॥

---

ತಿಳಿದೂ, ಅಱಿಯದೆ = ತಿಳಿಯದೆ, ಕಿಡೆನುಡಿದು = ನಿಂದಿಸಿಮಾತಾಡಿ; ತಪೋವನದೊಳಲ್ಲದೆ = ತಪೋವನದಲ್ಲಲ್ಲದೆ; ನೀಗೆಂ = ಜೀವನವನ್ನು (ಬೇರೆ ವಿಧವಾಗಿ) ಕಳೆಯಲಾರೆನು; ಎಂದು ಎೞ್ದುನಿಂದಿರ್ದನಂ = ಎಂದು ಎದ್ದುನಿಂತವನಾದ ಧರ್ಮಜನನ್ನು, ಅಸುರಾಂತಕನುಂ ತಾನುಂ = ಕೃಷ್ಣಾರ್ಜುನರಿಬ್ಬರೂ, ಎಂತಾನುಂ = ಹೇಗಾದರೂ ಅನೇಕಾನೇಕರೀತಿಗಳಿಂದ, ಪ್ರಾರ್ಥಿಸಿದೊಡೆ ಬೇಡಿಕೊಳ್ಳಲು, ಒಡಂಬಟ್ಟ = ಒಪ್ಪಿಕೊಂಡ, ಅಜಾತಶತ್ರುಗೆ = ಯುಧಿಷ್ಠಿರನಿಗೆ, ಪೊಡೆವಟ್ಟು = ನಮಸ್ಕರಿಸಿ, ರಥಮಂಏಱೆ = ತೇರನ್ನೇರಿಕೊಂಡು, ಕೌರವಧ್ವಜಿನಿಗೆ = ಕೌರವಸೈನ್ಯಕ್ಕೆ, ಭಯಜ್ವರಂ ಬರ್ಪಂತೆ ಬಂದು = ಭಯಜ್ವರವು ಬರುವ ಹಾಗೆ ಬಂದು, ಪವನಜನಂ = ವಾಯುಸುತನಾದ ಭೀಮಸೇನನನ್ನು, ಒಡಗೊಂಡು = ಕೂಡಿಕೊಂಡು; ಪವನಜವದಿಂ = ವಾಯುವೇಗದಿಂದ, ಕರ್ಣನರಥಂ ಲ್ಲಿತ್ತು ಎತ್ತ ಪೋದುದು ಎನುತಂ = ಕರ್ಣನ ರಥವೆಲ್ಲಿದ್ದಿತು? ಯಾವ ಕಡೆಗಾಗಿ ಸಾಗಿತು ಎಂದು ಕೇಳುತ್ತ, ಬರ್ಪ ಅತಿರಥಮಥನನ = ಬರುವ ಅರ್ಜುನನ (ಅತಿರಥರನ್ನೂ ಮರ್ದಿಸುವವನು) ರಥದಬರವಂ ಕಂಡು = ತೇರಿನ ಬರುವಿಕೆಯನ್ನು ನೋಡಿ; ಕೌರವಬಲಮೆಲ್ಲಂ = ಕೌರವ ಸೇನೆಯೆಲ್ಲವೂ, ಒಲ್ಲನೆ = ಕೂಡಲೆ; ಉಲಿದು = (ಶಬ್ದಿಸುತ್ತಾ) ಹೆದರಿಕೆಯಿಂದ ಬೊಬ್ಬಿಡುತ್ತ; ಓಡಿ = ಧಾವಿಸಿ; ವೈಕರ್ತನನ = ಸೂರ್ಯಸುತನಾದ ಕರ್ಣನ; ಮಱೆಯಂಪುಗುವುದುಂ = ಆಶ್ರಯ ಹೊಂದುತ್ತಿರಲು; ಮದೀಯ ಮನೋರಥಂ = ನನ್ನ ಅಭೀಷ್ಟವು; ಇಂದು ದೊರೆಕೊಂಡುದು ಎಂದು = ಈದಿನ ನೆರವೇರಿತು ಎಂಬುದಾಗಿ, ದಿನಕರತನೂಜಂ = ಇನಜಾತನು; ಎರಡುಂ ಮುಯ್ಯು

ವುಂ ನೋಡಿ= ಎರಡೂ ಭುಜಾಗ್ರಗಳನ್ನು ನೋಡಿಕೊಂಡು; ಸಮರಾನಂದಂ ಬೆರಸು = ಸಂಗರವೊದಗಿತಲ್ಲಾ ಎಂಬ ಸಂತೋಷದೊಡನೆ; ಶಲ್ಯನಂ ರಥಮಂ ಎಸಗ ಲ್ವೇಳ್ದು= ಮದ್ರಾಧಿಪನನ್ನು ರಥವನ್ನು ಓಡಿಸುವ ಹಾಗೆ ಹೇಳಿಕೊಂಡು; ದಿವ್ಯಾ ಸ್ತ್ರಂಗಳ= ಉತ್ತಮ ತರದ ಬಾಣಗಳನ್ನು ತುಂಬಿರುವ; ದೊಣೆಗಳಂ= ಬತ್ತಳಿಕೆ ಗಳನ್ನು; ಎರಡುಂದೆಸೆಯೊಳಂಬಿಗಿದು= ಬೆನ್ನಿನ ಎರಡು ಭಾಗಗಳಲ್ಲೂ ಬಂಧಿಸಿಕೊಂಡು; ಕಾಳವಟ್ಟದ ಬಿಲ್ಲಂ= ಕಾಳವಟ್ಟವೆಂದು ಹೆಸರುಳ್ಳ ತನ್ನ ಧನುಸ್ಸನ್ನು; ("ಕರ್ಣಸ್ಯ ಕಾಲ ಪೃಷ್ಠಂ ಶರಾಸನಂ" ಎಂದು ಅಮರವು) ಕೆಂದಳದೊಳ್= ಕೆಂಪಾಗಿರುವ ತನ್ನ ಕೈಯಲ್ಲಿ; ಅಮರೆ= ಘಟ್ಟಿಯಾಗಿದೆಯೋ ಎಂದು ನೋಡಲು; ನೀವಿ= ತಡವಿ, ಜೇವೊ ಡೆದು= ಬಿಲ್ಲಿನ ಹಗ್ಗವನ್ನು ಮಿಡಿದು; ಯುಗಾಂತವಾತಾಹತಕುಲಗಿರಿಯೆ= ಪ್ರಲಯ ಕಾಲದ ಗಾಳಿಯು ಹೊಡೆತದಿಂದ ಕುಲಪರ್ವತವೇ, ನೆಲೆಯಿಂ= ತನ್ನ ಸ್ಥಾನದಿಂದ; ತಳರ್ವಂತೆ= ಚಲಿಸುವ ಹಾಗೆ; ತಳರ್ದು= ಮುಂದೆ ಹೋಗಿ; ಧ್ವಾಂಕ್ಷಧ್ವಜಂ= ಕಾಗೆಯ ಗುರುತುಳ್ಳ ಧ್ವಜವು; ಅಂಬರತಳದೊಳ್= ಆಕಾಶದಲ್ಲಿ; ಮಿಳಿರೆ= ಚಲಿಸು ತ್ತಿರಲು; ತನಗೆ ಇದಿರಂಬರ್ಪ ಕರ್ಣನ ರಥಕ್ಕೆ ತನ್ನರಥಮಂ ಆಸನ್ನಮಾಗೆಪರಿಯಿಸಿ= ತನಗೆ ಇದಿರಾಗಿ ಬರುವ ಕರ್ಣನ ತೇರಿಗೆ ತನ್ನ ತೇರನ್ನು ಸಮೀಪಿಸುವಂತೆ ಓಡಿಸಿ; ವಿಂಧ್ಯ ಮಳಯ ಮಹೀಧರಂಗಳ್= ವಿಂಧ್ಯ ಮಲಯ ಗಿರಿಗಳು; ಒಂದು ಒಂದರ್ಶಿೊಳ್ ತಾಗುವಂತೆ= ಒಂದು ಇನ್ನೊಂದರೊಡನೆ ತಾಗುವ ಹಾಗೆ, ತಾಗಿ= ಸಂಘಟಿಸಿ; ದೇವದತ್ತಶಂಖಮಂ= ದೇವದತ್ತವೆಂದು ಹೆಸರುಳ್ಳ ತನ್ನ ಶಂಖವನ್ನು; ಪೂರಿಸಿ= ಶಬ್ದಿಸುವಂತೆ ಊದಿ, ಗಾಂಡೀವಮಂಪಣಿಿಸಿ= ಗಾಂಡೀವಕ್ಕೆ ಹಗ್ಗವನ್ನು ಸೆಳೆದು ಕಟ್ಟಿ (ಅದನ್ನು); ನೀವಿ= ಕೈಯಿಂದ ತಡವಿ, ಜೇವೊಡೆದಂ= ಶಬ್ದವಾಗುವಂತೆ ಹಗ್ಗವನ್ನು ಹೊಡೆದನು; ಧನುಷ್ಟಂಕಾರಗೆಯ್ದನು ॥

ಎಂಬಲ್ಲಿಗೆ ಕರ್ಣರಸಾಯನದಲ್ಲಿ
ಅಷ್ಟಮಗ್ರಾಸವು ಮುಗಿದುದು.



## ನವಮ ಗ್ರಾಸಂ

ಮಗನಟಿಲೊಂದು ಭೂಪತಿಯ ತಮ್ಮನೊಳಾದಟಿಲೊಂದು ನೊಂದು ಬಿ– ।
ನ್ನಗೆ ಮೊಗದಿಂದೆ ಕುಂದಿ ಫಣಿಕೇತನನಿರ್ದಟಿಲೊಂದು ತನ್ನನಾ– ॥
ವಗೆಯುರಿಯಟ್ಟಿವೋಲಳುರೆ ತನ್ನ ನೆಗಟ್ತೆಗೆ ಮುಯ್ವನಾಂತು ಮುಂ ।
ಪೊಗಟಿಸಿ ಬಟ್ಟುದಂ ನೆನೆದು ಕರ್ಣನಸುಂಗೊಳೆ ಬಂದು ತಾಗಿದಂ ॥ ೧ ॥

---

ಅವತರಣಿಕೆ ॥ ಅಷ್ಟರಲ್ಲೇ ಮೇರೆಮೀರಿದ ಭೀಮಸೇನನ ಕ್ರೋಧಾನಲವು, ಅಂದು ತುಂಬಿದ ರಾಜಸಭೆಯಲ್ಲಿ ನಡೆದುಹೋಗಿದ್ದ ಅನ್ಯಾಯವನ್ನು ನೆನೆನೆನೆದು, ಅವಮಾನದ ಹೊಗೆಯಿಂದ ನೆಗೆದು, ಭುಗ್ಗೆಂದು ದಳ್ಳಿಸಿ ದುಶ್ಯಾಸನನನ್ನು ರಕ್ತ ಮಾಂಸಗಳೊಡನೆ ಆಹುತಿಗೊಂಡಿತು ನೀವಿ ಜೀವೊಡೆದು ಸನ್ನದ್ಧನಾಗಿದ್ದ ವಿಕ್ರಾಂತ ತುಂಗನನ್ನಿದಿರಿಸಿ. ಕರ್ಣಸುಕುಮಾರನಾದ ವೃಷಸೇನನು ಮುಂಡದಿಂದ ರುಂಡ ವನ್ನು ಬೇರ್ಪಡಿಸಿಕೊಳ್ಳುವುದರೊಂದಿಗೆ ಐಹಿಕದಿಂದ ಬಿಡುಗಡೆಹೊಂದಿದನು. ಆಗ ಕರ್ಣನು ತನಗೊದಗಿದ ಅಪಾರವಾದ ಪುತ್ರಶೋಕದಿಂದಲೂ, ಸೋದರವ್ಯಸನದಿಂದ ಕಂದಿದ ಮುಖವುಳ್ಳವನಾಗಿ ನಿರ್ವಿಣ್ಣನಾಗಿದ್ದ ಕೌರವೇಶ್ವರನ ದುಃಸ್ಥಿತಿಯಿಂದಲೂ ಸಹಿಸಲಾರದವನಾಗಿ ತನ್ನ ಕರ್ತವ್ಯವೇನೆಂಬುದನ್ನು ನಿರ್ಧರಿಸಿಕೊಂಡು, ಮೂರು ಲೋಕದ ಗಂಡನೆನಿಸಿ ಮೆರೆಯುತ್ತಿದ್ದ ಪಾರ್ಥನನ್ನು ವೀರಾಲಾಪದಿಂದ ಮೂದಲಿಸು ವನು ಆ ಕೆಚ್ಚೆದೆಯ ವೀರರಿಬ್ಬರೂ ಮಾತಿಗೆ ಮಾತು ಮಸೆದು ಹೋರಾಡತೊಡಗು ವರು ಬರಬರುತ್ತ ಸಂಗರವು ಭರದಿಂದ ಸಾಗುತ್ತಿದ್ದರೂ ಪ್ರಯೋಜನವೇನೂ ಬರುವ ಸಂಭವವಿಲ್ಲವೆಂದು ತಿಳಿದುಕೊಂಡ ಶಲ್ಯನು "ಅಂಗಾಧಿಪನೇ ಇಂತಹ ಬಾಣ ಗಳಿಂದ ಪ್ರಯೋಜನವಿಲ್ಲ, ದಿವ್ಯಾಸ್ತ್ರಗಳನ್ನು ತುಡು' ಎಂದು ಹೇಳಿದನು. ಅದು ನಿಜವಾದ ಮಾತಾಗಿದ್ದರೂ ಕರ್ಣನು ತಾಯಿಗೆ ಕೊಟ್ಟಿದ್ದ ಮಾತನ್ನು ನೆನೆದು ಕೊಂಡು, ಅವನೆಂದಂತೆ ಮಾಡದೆ ಹುರಿಗಣೆಗೆ ಕೈನೀಡಲು, ಭೀಕರವಾದ ಉರಗಾ ಸ್ತ್ರವು ದೊರಕುವುದು. ಅದನ್ನು ತೆಗೆದು ಗುರಿಹಿಡಿವಾಗಲೂ ಶಲ್ಯನ ಸೂಚನೆಯು ಉರಃಸ್ಥಳಕ್ಕೇ ಆಗಬೇಕೆಂದಿದ್ದಿತು. ಕರ್ಣನು ಗುರಿಯಿಂದ ಕದಲಲಾರದವನಾದು ದರಿಂದ ಅದನ್ನೂ ಮನ್ನಿಸದಾದನು ಆದರೇನು! ಗುರಿಮಾತ್ರ ಗತಿಗೆಟ್ಟು ಬರಿ ದಾಯಿತು. ತನ್ನ ಮಾತು ಬರಿದಾಗಿ ಮಾನಹಾನಿಯಾದುದರಿಂದ ಶಲ್ಯನು ನೊಂದು ವಾಘೆಯನ್ನು ಬಿಸುಟು ರಥದಿಂದ ದುಮ್ಮಿಕ್ಕಿ ಹೊರಟುಹೋದನು. ಆದರೂ ವೀರ ನವನು ಎದೆಗೆಡದೆ ಹೋರಾಡಿದರೆ, ದುರದೃಷ್ಟದ ಕಾಟವು ಅಲ್ಲಿಯೂ ನಿಲ್ಲದೆ ರಥ ಚಕ್ರವನ್ನು ಭೂಮಿಯೇ ಕಬಳಿಸಿಬಿಡಬೇಕೆ? ಸ್ವಾಮಿಭಕ್ತಿಗೆ ಮೀಸಲಾಗಿದ್ದ ಕರ್ಣನ

ಆತ್ಮವು ಸಮರ್ಪಿತವಾಗಿ ಕೊನೆಗಾಣುವ ಕೊನೆಯ ಸಂದರ್ಭವದು, ರಸಗಳೆಲ್ಲವೂ ಒಂದಾಗಿಬೆರೆತ ಅಸ್ವಾದ್ಯಶವಾದ ಲೋಕಕ್ಕೆ ವಾಚಕರನ್ನು ಕೊಂಡೊಯ್ದು ಮನಸ್ಸನ್ನು ಅದುಮುತ್ತ ಬಿಡದೆ— "ನೆನೆವೊಡೆ ಕರ್ಣನಂ ನೆನೆಯ" ಎಂಬ ಪಲ್ಲವಿಯನ್ನು ಉದ್ಗಾರಗೊಳಿಸುತ್ತಿರುವುದು.

ಮಗನಟಿಲ್ — ಇಂತೆಂದು ಚಂ ಮಾಲಾವೃತ್ತಂ ॥ ಮಗನ ಅಟಿಲ್ ಒಂದು = ಮಗನಾದ ವೃಷಸೇನನು ಕಾದಾಡಿ ಮಡಿದು ಹೋದುದರಿಂದ ಉಂಟಾದ ಪುತ್ರಶೋಕವೊಂದು ಕಡೆ, (ಪುತ್ರಶೋಕಂ ನಿರಂತರಂ ಎಂಬ ನೀತಿಗನುಸಾರವಾಗಿ ಆ ದುಃಖವು ಅಪಾರವಾದುದು) ಭೂಪತಿಯ ತಮ್ಮನೊಳ್ ಆದ= ಅರಸನಾದ ದುರ್ಯೋಧನನ ತಮ್ಮನಾದ ದುಶ್ಶಾಸನನು ಭೀಮಸೇನನ ಕ್ರೋಧಾಗ್ನಿಗೆ ತುತ್ತಾದುದರಿಂದಉಂಟಾದ; ಅಟಿಲ್ ಒಂದು= ದುಃಖವು ಇನ್ನೊಂದು ಕಡೆ; ನೊಂದು= ಭ್ರಾತೃವ್ಯಸನದಿಂದ ಕಂಗೆಟ್ಟು, ಬಿಸ್ನಗೆ–ಸುಮ್ಮಗೆ; ಮೊಗದಿಂದೆ ಕುಂದಿ= ಕಳಾಹೀನವಾದ ಮುಖವುಳ್ಳವನಾಗಿ; ಫಣಿಕೇತನಂ= ಸರ್ಪಧ್ವಜನಾದ ದುರ್ಯೋಧನನು; ಇರ್ದ ಅಟಿಲ್ ಒಂದು = ಇದ್ದಂತಹ ದುಃಖವು ಬೇರೊಂದು ಕಡೆ; ಆ ಬಗೆಯ ಉರಿ= ಆ ಮೂರು ಬಗೆಯ ವ್ಯಸನವೆಂಬ ಅದಮ್ಯವಾದ ದುಃಖಾಗ್ನಿಯು (ಆವಗೆಯುರಿ ಎಂದರೆ ಹೆಂಚು, ಮಣ್ಣಿನ ಮಡಿಕೆ ಮೊದಲಾದುವನ್ನು ಬೇಯಿಸುವ ಆವುಗೆಯ ಬೆಂಕಿ ಎಂಬ ಅರ್ಥ ಮಾಡಿಕೊಳ್ಳುವುದರಲ್ಲಿ ತುಂಬ ಔಚಿತ್ಯವಿದೆ. ಆದರೆ ಅದಕ್ಕೆ ಆವಿಗೆ ಅಥವಾ ಆವುಗೆ ಎಂಬುದೇ ರೂಢಿಯಲ್ಲಿರುವುದು) ಅಥವಾ–ಆ+ಪಗೆಯ ಉರಿ= ಆ ವೈರಾಗ್ನಿಯು ಎಂದೂ ಹೊಂದಿಸಿಕೊಳ್ಳಬಹುದು. ಇಲ್ಲವೆ, ಆ ಬಗೆಯ ಉರಿ = ಆ ರೀತಿಯ ದುಃಖಾಗ್ನಿಯು (ಆ+ಪಗೆ, ಇಲ್ಲವೆ ಆ+ಬಗೆ= ಎಂಬಲ್ಲಿ ವಕಾರವು ಬರುವುದು) ತನ್ನಂ= ತನ್ನನ್ನು (ಕರ್ಣನನ್ನು) ಅಟ್ಟಿವೋಲ್ = ದಹಿಸಿಬಿಡುವುದೋ ಎಂಬ ಹಾಗೆ, ಅಳುರೆ = ವ್ಯಾಪಿಸಿಕೊಳ್ಳಲು; ತನ್ನ ನೆಗಟ್ಟೆಗೆ = ತನ್ನ ಘನತೆಗೆ (ಪ್ರಖ್ಯಾತಿಗೆ) ಮುಯ್ವಂಆಂತು= ಹೆಗಲೊಡ್ಡಿ; (ವಿಶೇಷವಾಗಿ ಹೆಮ್ಮೆಪಟ್ಟು) ಮುಂ= ಮೊದಲು; ಪೊಗಟಿಸಿ = ಹೊಗಳಿಸಿಕೊಂಡು (ಕೌರವನೇ ಮೊದಲಾದ ಸಮಸ್ತರಿಂದಲೂ) ಬಟ್ಟಿದಂ= ಅಭಿವೃದ್ಧಿಗೊಂಡುದನ್ನು; (ಬೆಳೆಯೆಂಬ ಧಾತು ಸಸ್ಯಾ। ವಳಿಯೊಳ್ ಬಳೆಯೆಂಬ ಧಾತು ಮಿಕ್ಕೆಡೆಯೊಳ್ಸಂ। ಗಳಿಕುಂ ತಿಳಿಯಲ್ಬರ್ಪುದು। ಬೆಳೆ ಬಳವಿಗಳೆಂಬ ಭಾವವಚನದ್ವಯದೊಳ್ ॥ ಶ. ಮ. ದ. ಸೂತ್ರ ॥ ೨೧೭ ॥) ನೆನೆದು = ಸ್ಮರಿಸಿಕೊಂಡು; ಕರ್ಣಂ= ಕರ್ಣನು; ಅಸುಂಗೊಳೆ =(ವೈರಿಯ) ಪ್ರಾಣಾಪಹರಣಕ್ಕಾಗಿ [ವಿದಿತಂ ಕ್ರಿಯಾಸಮಾಸಂ। ಮೊದಲೊಳ್ ಕಾರಕಮುಂ ಮಗ್ರದೊಳ್ ಕ್ರಿಯೆಯುಂ ಸಂ । ನಿದ ಮಾಗೆ ಬಂದು ಸಕ್ಕದ। ದದಂತದೊಳ್ ಕನ್ನಡಕ್ಕೆ ಮೇಣುತ್ವದೊಳಂ। (ಮೊದಲೊಳ್ ಕಾರಕಮುಂ ಪರದೊಳ್ ಕ್ರಿಯೆ

ವ ॥ ಅಂತಿರ್ವರುಮೊರ್ವರೊರ್ವರಂ ಮುಟ್ಟಿವಂದಲ್ಲಿ ವಿಕ್ರಾಂತತುಂಗ ನಂಗಾಧಿರಾಜನನಿಂತೆಂದಂ—

॥ ಹರಿಣೀಪ್ಲುತಂ ॥

ಪಿರಿದು ಪೊರೆದಂ ನಿನ್ನಂ ದುರ್ಯೋಧನಂ ನಿನಗೆನ್ನೊಳಂ ।
ಪಿರಿದು ಕಲುಷಂ ಕರ್ಣಂಗೊಡ್ಡಿತ್ತು ಭಾರತವೇಂ ಬೆಸಂ ॥
ಪಿರಿದು ನನಗಂ ರಾಗಂ ಮಿಕ್ಕಿರ್ದಗುರ್ವಿನ ಸೂನು ನಿ- ।
ರ್ನೆರಮುಱಿಯೆಯುಂ ನೋಡುತ್ತಿಂತಿರ್ದೆಯಿಪ್ಪುದು ಪಾಱಿಯೇ ॥ ೨ ॥

---

ಯುಂ ಅರ್ಥವ್ಯಕ್ತಿಯುಂ ಕೊಡೆ ಕ್ರಿಯಾಸಮಾಸಂ. ಅಲ್ಲಿ ಸಂಸ್ಕೃತದ ಅಕಾರಾಂತಕ್ಕೆ ಬಿಂದು ನಿತ್ಯಂ. ಕನ್ನಡದ ಅದಂತಕ್ಕಂ ಉದಂತಕ್ಕಂ ಬಿಂದು ವಿಕಲ್ಪಂ) ಶ. ಮ. ದ. ಸೂತ್ರ ॥ ೧೬೭ ॥] ಬಂದು = ಪಾರ್ಥನ ಇದಿರಾಗಿ ಬಂದು, ತಾಗಿದಂ = ಸಂಧಿಸಿದನು, ಉತ್ಪ್ರೇಕ್ಷಾಲಂಕಾರವು ॥ ೧ ॥

ಅಂತಿರ್ವರುಂ—ಇಂತೆಂದು ವಚನಂ ॥ ಅಂತು ಇರ್ವರುಂ = ಹಾಗೆಯೇ ಇಬ್ಬರೂ, ಒರ್ವರ್ ಒರ್ವರಂ = ಒಬ್ಬರು ಮತ್ತೊಬ್ಬರನ್ನು (ಅಹಮಹಮಿಕೆಯಿಂದ) ಮುಟ್ಟಿವಂದಲ್ಲಿ = ಸಮೀಪಿಸಿದಾಗ; ವಿಕ್ರಾಂತತುಂಗಂ = ಪೌರುಷಾತಿಶಯದಿಂದ ಮೆರೆಯುವವನಾದ ಅರ್ಜುನನು, ಅಂಗಾಧಿರಾಜನಂ = ಕರ್ಣನನ್ನು ಕುರಿತು, ಇಂತು ಎಂದಂ = ಹೀಗೆ ಹೇಳಿದನು.

ಪಿರಿದು—ಇಂತೆಂದು ಹರಿಣೀಪ್ಲುತ ವೃತ್ತಂ ॥ "ಹರಿಣಿಯೆನಿಪಾವೃತ್ತಂ ತೋರಲ್‌ನಸಂಮರಸಂಲಗಂ" ಎಂದು ವೃತ್ತದ ಲಕ್ಷಣವು ॥ ನಿನ್ನಂ =(ಕರ್ಣನೇ) ನಿನ್ನನ್ನು; ದುರ್ಯೋಧನಂ = ಆ ಕುರುರಾಜನು; ಪಿರಿದು = ಹೆಚ್ಚಿನ ಮಮಕಾರದಿಂದ, ಪೊರೆದಂ = ಸಲಹಿದನು [ಪೊರೆ (ಧಾತು) ಪೋಷಣೇ] ನಿನಗೆ ಎನ್ನೊಳಂ - ನಿನಗೆ ನನ್ನ ಮೇಲಾದರೂ; ಕಲುಷಂ = ಕಿನಿಸು, ಪಿರಿದು = ಹೆಚ್ಚಿನದು, ಕರ್ಣಂಗೆ = ದುರ್ಯೋಧನನ ಕೇವಲ ವಿಶ್ವಾಸಕ್ಕೆ ಪಾತ್ರನಾದವನೂ ನನ್ನನ್ನು ವಿಶೇಷವಾಗಿ ದ್ವೇಷಿಸುವವನೂ ಆದ ನಿನಗೆ: ಭಾರತಂ = ಭರತವಂಶದವರೊಳಗೆ ಏರ್ಪಟ್ಟ ಮಹಾಯುದ್ಧವು; ಒಡ್ಡಿತ್ತು = ಸನ್ನಿಹಿತವಾಯಿತು (ಬಂದೊದಗಿತು) ಬೆಸಂ ಏಂ = ಈಗ ನೀನು ಮಾಡತಕ್ಕ ಕರ್ತವ್ಯವಾದರೂ ಏನು ? ನಿನಗಂ = ನಿನಗಾದರೂ (ಇಂತಹ ಶೌರ್ಯ ಪ್ರಕಟನಾವಸರದಲ್ಲಿ) ರಾಗಂ = ಇಷ್ಟವು; ಪಿರಿದು = ಹೆಚ್ಚಿನದು; ಮಿಕ್ಕಿರ್ದ = ಹೆಚ್ಚಾಗಿದ್ದ; ಅಗುರ್ವಿನ = ಭೀಕರತೆಯ; ಸೂನು = ಮಗನು; ನಿರ್ನೆರಂ = ನಿಷ್ಕಾರಣವಾಗಿ (ಅನ್ಯಾಯವಾಗಿ) ಅಱಿಯೆಯುಂ = ಸತ್ತುಹೋದರೂ; ಇಂತು = ಹೀಗೆ ಸುಮ್ಮನೆ; ನೋಡುತ್ತ = ನಿರೀಕ್ಷಿಸುತ್ತ; ಇರ್ದೆ = ಇದ್ದೀಯಲ್ಲಾ (ವರ್ತಮಾನಾರ್ಥದಲ್ಲಿ ಭೂತಪ್ರಯೋಗವು) ಇಪ್ಪುದು =

ಎನ್ನ ಪೆಸರ್ಗೇಳ್ದು ಸೈರಿಸ- ।
ದನ್ನಯದಿಂತೀಗಳೆನ್ನ ರೂಪಂ ಕಂಡುಂ ॥
ನಿನ್ನರಸನಣುಗದಮ್ಮನ ।
ನಿನ್ನ ತನೂಭವನ ಸಾವುಗಂಡುಂ ಮಾಣ್ಬಾ ? ॥ ೩ ॥

ಭಯಮೇಕಕ್ಕುಮದೆಂತುಟೆಂದದಟುಮಂ ಪೆರ್ಮಾತುಮಂ ಭೂತಧಾ- ।
ತ್ರಿಯೊಳೋರಂತೆ ನೆಗಟ್ಚಿ ಮುನ್ನೆ ಬಟಿಯಂ ಕಾನೀನ ನೀನೀ ಮಹಾ- ॥
ಜಿಯೊಳಿಂತೇನೆನಗಂಜಿ ಮಾಣ್ದೆ ಪೆಱತೇಂ ಪೋ ಮಾತು ಲೇಸಣ್ಣ ಸೆ- ।
ಟ್ಟೆಯ ಬಳ್ಳಂ ಕಿಱಿದೆಂಬುದೊಂದು ನುಡಿಯಂ ನೀಂ ನಿಕ್ಕುವಂಮಾಡಿದೈ॥ ೪ ॥

---

ಹೀಗೆ ಇರುವುದು; ಪಾಟಿಯೋ? = ನ್ಯಾಯವೆ? ನೀನೀಗ ಹೀಗೆ ಸುಮ್ಮನಿರುವುದು ನಿನ್ನ ಯೋಗ್ಯತೆಗೆಸರಿಯಲ್ಲವೆಂದು ಮರ್ಮಕ್ಕೆ ನಾಟುವಂತೆ ಹಂಗಿಸುವ ಮಾತಾಗಿದೆ. ॥ ೨ ॥

ಎನ್ನ— ಇಂತೆಂದು ಕಂದಂ ॥ ಎನ್ನ ಪೆಸರ್ಗೇಟ್ದು = ನನ್ನ ಹೆಸರುಕೇಳಿದರೂ; ಸೈರಿಸದ = ಸಹಿಸಿಕೊಳ್ಳಲಾರದ ನೀನು; ಅನ್ನೆಯದೆ = ಅನ್ಯಾಯವಾದ ರೀತಿಯಿಂದ, ಇಂತೀಗಳ್ = ಈ ಸಮಯದಲ್ಲಿ ಹೀಗೆ; ಎನ್ನ ರೂಪಂ ಕಂಡುಂ = ನನ್ನನ್ನೇ ಸಾಕ್ಷಾತ್ತಾಗಿ ನೋಡಿಯೂ; ನಿನ್ನ ಅರಸನ ಅಣುಗದಮ್ಮನ = ನಿನ್ನ ಸ್ವಾಮಿಯಾದ ದುರ್ಯೋಧನನ ಪ್ರೀತಿಯ ತಮ್ಮನಾದ ದುಶ್ಶಾಸನನ, (ಹಾಗೆಯೇ) ನಿನ್ನ ತನೂಭವನ= ನಿನ್ನ ಔರಸಪುತ್ರನಾದ ವೃಷಸೇನನ; ಸಾವು ಗಂಡುಂ = ಮರಣವನ್ನು ಪ್ರತ್ಯಕ್ಷ ನೋಡಿಯೂ, ಮಾಣ್ಬಾ= (ವೈರವನ್ನು ಸಾಧಿಸಬೇಕೆಂಬ ಇಚ್ಛೆಯಿಲ್ಲದವನಾಗಿ) ಸಮ್ಮನಿರುವೆಯಾ ? (ಪೆಸರ್ಗೇಟ್ದು — ಇಲ್ಲಿ ಶಿಥಿಲದ್ವಿತ್ವವು ) ॥ ೩ ॥

ಭಯಂ — ಇಂತೆಂದು ಮತ್ತೇಭ. ವಿ ವೃತ್ತಂ ॥ ಕಾನೀನ ನೀಂ= ಕನ್ಯಕಾಸಂಭೂತನಾದ ಕರ್ಣನೇ ನೀನು; ಮುನ್ನೆ= ಮೊದಲು, ಭಯಂ = ಹೆದರಿಕೆಯು; ಏಕೆ ಅಕ್ಕುಂ = ಯಾತಕ್ಕೋಸ್ಕರ ಆಗುವುದು (ಏತಕ್ಕೆ ಭಯವಾಗಬೇಕು; ಸರ್ವಥಾ ಆಗಲಾರದು) ಅದು ಎಂತುಟು = ಆ ಭಯವೆಂದರೆ ಹೇಗಿರುವಂಥಾದ್ದು; ಎಂದು= ಈ ಪ್ರಕಾರವಾಗಿ; ಅದಟುವಂ = ಸಾಮರ್ಥ್ಯವನ್ನೂ; ಪೆರ್ಮಾತುಮಂ = ದೊಡ್ಡಸ್ತಿಕೆಯ ಮಾತುಗಳನ್ನೂ (ಪಿರಿದು+ಮಾತು= ಪೆರ್ಮಾತು ಕ. ಸ ) ಭೂತಧಾತ್ರಿಯೊಳ್ = ಲೋಕದಲ್ಲಿ; ಓರಂತೆ= ಇಷ್ಟಾನುಸಾರವಾಗಿ (ಬೇಕಾದಂತೆ) ನೆಗಟ್ಚಿ= ಪ್ರಸಿದ್ಧಪಡಿಸಿ; ಬಟಿಯಂ= ಆ ಮೇಲೆ (ಈಗ); ಈ ಮಹಾಜಿಯೊಳ್ = ಈ ಘೋರ ಸಂಗ್ರಾಮದಲ್ಲಿ (ಮಹಾ+ಆಜಿ) ಎನಗೆ= ನನಗೆ (ಅರ್ಜುನನೆನಿಸಿದ ಈ ನನಗೆ) ಅಂಜಿ = ಹೆದರಿ; ಇಂತು = ಹೀಗೆ; ಮಾಣ್ದೆ = ಬೇಕಾಗಿಲ್ಲವೆಂಬ ಭಾವನೆಯಿಂದ ಹಿಂಜರಿದಿರುವೆ;

ಪೆಸರೆಸೆಯೆ ಬೀರಮಂ ಪಾ- ।
ಡಿಸಿಯುಂ ಪೊಗೞಿಸಿಯುಮುರ್ಕಿ ಬಿೞ್ದಾಹವದೊಳ್ ॥
ಕುಸಿದು ಪೆಱಪಿಂಗಿ ಪೇೞಿ್ ಮಾ- ।
ನಸರೇನಿನ್ನೂಱು ವರ್ಷಮಂ ಬೞ್ದುವರೇ ॥ ೫ ॥

---

ಪೆಱತು = ಬೇರೆ; ಮಾತು ಏಂ = (ಹೇಳತಕ್ಕ) ಮಾತೇನಿದೆ; ಪೋ = ಹೋಗು; ಅಣ್ಣ = (ನಿಂದಾರ್ಥದಲ್ಲಿ ಮಾಡಿಕೊಳ್ಳುವ ಸಂಬೋಧನೆಯಿದು) (ದಡ್ಡನೇ) ಎಲಾ ತಿಳಿಗೇಡಿಯೇ; ಸೆಟ್ಟಿಯ = ವ್ಯಾಪಾರಿಯ [ಶ್ರೇಷ್ಠಿ (ದ್ಭ) ಸೆಟ್ಟಿ] ಬಳ್ಳಂ = ಅಳತೆಯ ಮಾನವು (ಎಂಟು ಕುಡುತೆಯಷ್ಟು ಹಿಡಿಯುವ ಅಳತೆಯ ಮಾನಕ್ಕೆ ಬಳ್ಳವೆಂದು ಹೇಳುವುದು ರೂಢಿ, ಕೆಲವು ಕಡೆ ಒಂದು ಒಳ್ಳ ನಾಲ್ಕು ಮಾನವೆಂಬ ಅಳತೆಯಿದೆ) ಕಿಱಿದು = ಸಣ್ಣದು, ಎಂಬುದು ಒಂದು ನುಡಿಯಂ = ಎಂದು ಪ್ರಸಿದ್ಧವಾಗಿರುವ ಗಾದೆಯನ್ನು; ನೀಂ = ನೀನು, ನಿಕ್ಕುವಂ = ನಿಜವಾಗಿಯೂ [ನಿಶ್ಚಯ (ದ್ಭ) ನಿಕ್ಕುವ] ಲೇಸು = ಸರಿಯಾಗುವ ಹಾಗೆ, ಮಾಡಿದೈ = ಮಾಡಿದೆಯಲ್ಲಾ "ಹಿಂದಕ್ಕೆ ಬಾಯಿಗೆ ಬಂದಂತೆ ಹೆಗ್ಗಳಿಕೆಯನ್ನು ಕೊಚ್ಚಿಕೊಳ್ಳುತ್ತಿದ್ದ ನೀನೀಗ ಸಂದರ್ಭಬಂದಾಗ ನನಗೆ ಹೆದರಿ ಹಿಂಜರಿಯುತ್ತಿರುವೆ; ಇದು ಸರ್ವಥಾ ಸರಿಯಲ್ಲ, ಲೋಕದಲ್ಲಿ ನಿನ್ನನ್ನು ಯಾರಾದರೂ ನಗದಿರಲಾರರು, ಹಿಂದೆ ನಿನ್ನ ಬಡಬಡಿಕೆಯನ್ನು ಕೇಳಿದ್ದ ನಮಗೆ ನೀ ನಿಂದು ಹಿಂಜರಿಯುತ್ತಿರುವುದನ್ನು ನೋಡಿದರೆ ಸೆಟ್ಟಿಯ ನೆನಪಾಗುವುದು— ಸಂತೆಯಲ್ಲಿ ಮಾರಾಟಕ್ಕೆ ಅನೇಕರು ಸೇರಿದ್ದಾಗ ಮಾತಿನಲ್ಲಿ ಚಪಲನಾದವನು ಎಲ್ಲರಿಗಿಂತಲೂ ನಾನು ಕಡಿಮೆ ದರದಲ್ಲಿ ಕೊಡುವೆನೆಂದು ಬಡಬಡಿಸಿಕೊಳ್ಳುತ್ತಿದ್ದನು ಪರೀಕ್ಷಿಸಿ ನೋಡಿದರೆ ಆತನ ಅಳತೆಯ ಮಾನವು ಕಿರಿದಾಗಿದ್ದಿತು ಅಂದಿನಿಂದ ಈ ಮಾತು ರೂಢಿಗೆಬಂತು ಹಾಗೆಯೇ ಕರ್ಣನು ಬೇಕಾದಂತೆ ಕೊಚ್ಚಿಕೊಳ್ಳುತ್ತಿದ್ದನು ಆತನ ಎದೆಮಾತ್ರ ಅಂಜು ಬುರುಕುತನವುಳ್ಳದ್ದಾಗಿದೆಯೆಂದು ಈಗ ಖಚಿತವಾಗುವುದೆಂಬ ಭಾವವು ಲೋಕೋಕ್ತ್ಯಲಂಕಾರವು ॥ ೮ ॥

ಪೆಸಱಿ್ — ಇಂತೆಂದು ಕಂದಂ ॥ ಉರ್ಕಿ = ಸೊಕ್ಕಿ; ಬಿೞ್ದು = ಬಿದ್ದು; [ಉರ್ಕು (ಧಾತು) ಔದ್ಧತ್ಯೆ. ನಾ. ಲೋಹಭೇದೇಚ] ಪೆಸರ್ಎಸೆಯೆ = (ದೊಡ್ಡವರೆಂದು ಹೆಸರುಬರುವುದಕ್ಕಾಗಿ, ಬೀರವಂ = ಪೌರುಷವನ್ನು; ಪಾಡಿಸಿಯುಂ ಪೊಗೞಿಸಿಯುಂ = ಹಾಡಿಸಿಯೂ ಹೊಗಳಿಸಿಯೂ, ಆಹವದೊಳ್ = ಯುದ್ಧದ ಸಂದರ್ಭದಲ್ಲಿ; ಕುಸಿದು = ಸಂಕೋಚಗೊಂಡು [ಕುಸಿ (ಧಾ) ಕ್ಷೀಣತ್ವೇ] ಪೆಱಪಿಂಗಿ = ಹಿಂಜರಿದುಹೋಗಿ; ಮಾನಸರ್ = ಮನುಷ್ಯರು [ಮಾನುಷರ್ (ದ್ಭ) ಮಾನಸರ್] ಇನ್ನೂ

ವ ॥ ಎಂದ ವಿಕ್ರಮಾರ್ಜುನನ ಪಾಟಿಯ ಪಸುಗೆಯ ನುಡಿಗೆ ಪರಮಾರ್ತ
ನಾಗಿ ತನ್ನನುದ್ಘಾಟಿಸಿ ನುಡಿದೊಡುಮ್ಮಚ್ಚದೊಳ್ ಮೆಚ್ಚದೆ ದರಹಸಿ-
ತವದನಾರವಿಂದನಾಗಿ ದಶಶತಕರತನೂಜನಿಂತೆಂದಂ—

ಎಳೆಯುಂ ಕೋಳ್ಪಟ್ಟುಂ ಮುಂ ।
ಬಳೆದೊಟ್ಟುಂ ಮುಟ್ಟುಗೆಟ್ಟುಮಿರ್ದೀಗಳ್ ಬ- ॥
ಳ್ವಳನೆ ನುಡಿದಪುದೆ ನುಡಿವಂ- ।
ತಳವುಂ ಪೆಮಾ೯ತುಮಾಯುಮುಂ ನಿನಗಾಯ್ತೇ ॥ ೬ ॥

---

ಋವರ್ಷಮುಂ= ಇನ್ನೂರು ವರುಷಪರ್ಯಂತ ('ಶತಾಯುಃ ಪುರುಷಃ' ಎಂಬುದು ರೂಢಿ) ಬಟ್ಟಿಪರೇಪಂ ಪೇಟಿ೯ = ಬದುಕುವರೇನು ಹೇಳು ॥ ಸುಖಕಾಲಗಳಲ್ಲಿ ಸಂಪನ್ನರು ತಮಗೆ ಹೆಸರುಬರುವುದಕ್ಕಾಗಿ ಹಣದ ಮಹಿಮೆಯಿಂದ ತಮ್ಮನ್ನು ದೊಡ್ಡವರನ್ನಾಗಿ ಮಾಡಿಸಿಕೊಳ್ಳುವರು; ನಿಜವಾಗಿಯೂ ಒರೆಹಚ್ಚುವ ಸಂದರ್ಭವೊದಗಿದರೆ ಅವರು ಕಾಲಿಗೆ ಬುದ್ಧಿಹೇಳುವರು. ಹೇಗೆಮಾಡಿದರೂ ಮನುಷ್ಯನಿಗೆ ನೂರೇ ವರುಷಗಳ ಆಯುಸ್ಸೆಂಬ ಗ್ರಹಿಕೆಯು ಬೇಡವೇ ? ವೀರನಾಗಿ ಕ್ಷಣಕಾಲಬಾಳಿದರೂ ಸಾಕು, ಹೇಡಿಯಾಗಿ ಬಾಳಬಾರದು ಎಂಬುದು ಸಾರಾಂಶವು. ॥ ೫ ॥

ಎಂದ—ಇಂತೆಂದು ವಚನಂ ॥ ಎಂದ= ಹೀಗೆ ಹೇಳಿದ, ವಿಕ್ರಮಾರ್ಜುನನ= ಪಾರ್ಥನ, ಪಾಟಿಯ= ನ್ಯಾಯಬದ್ಧವಾದ, ಪಸುಗೆಯ= ಹಂಚಿಕೆಯ, ನುಡಿಗೆ= ಮಾತಿಗೆ; ಪರಮ+ಆರ್ತಂ ಆಗಿ= ಬಹಳ ಪ್ರೀತಿಗೊಂಡವನಾಗಿ, ತನ್ನಂ= ತನ್ನನ್ನು; (ಕರ್ಣನನ್ನು) ಉದ್ಘಾಟಿಸಿ= ಮರ್ಮಕ್ಕೆ ನಾಟುವ ಹಾಗೆ (ಚುಚ್ಚುವಂತೆ) ನುಡಿದೊಡೆ= ಮಾತಾಡಿದುದಕ್ಕೆ ಮಾತ್ರ, ಉಮ್ಮಚ್ಚದೊಳ್= ಉಂಟಾದ ಮನೋವ್ಯಥೆಯೊಂದಿಗೆ, ಮೆಚ್ಚದೆ= ಇಷ್ಟಪಡದೆ ಹೋದರೂ, ದರಹಸಿತವದನಾರವಿಂದಂ ಆಗಿ= ಅರಿವಿರಿದ ತಾವರೆಯಂತೆ ಮಂದಹಾಸದಿಂದ ಗೆಲವುಗೊಂಡ ಮುಖವುಳ್ಳವನಾಗಿ; ದಶಶತಕರತನೂಜಂ= ಸಹಸ್ರಕಿರಣನ ಮಗನಾದ ಕರ್ಣನು, ಇಂತೆಂದಂ= ಹೀಗೆ ಹೇಳಿದನು ॥

ಎಳೆಯುಂ—ಇಂತೆಂದು ಕಂದಂ ॥ ಮುಂ= ಮೊದಲು; ಎಳೆಯುಂ= ಭೂಮಿಯನ್ನು [ಇಳಾ (ದ್ಭ)ಎಳೆ]ಕೋಳ್ಪಟ್ಟುಂ= ಸೂರೆಗೊಳಿಸಿಯೂ (ಕಳೆಕೊಂಡೂ)(ಮಾತ್ರವಲ್ಲ;) ಬಳೆದೊಟ್ಟುಂ= ಬೃಹನ್ನಳೆಯಾಗಿದ್ದಾಗ (ಸ್ತ್ರೀರೂಪದಲ್ಲಿದ್ದಾಗ) ಕೈಗೆ ಬಳೆಗಳನ್ನು ಧರಿಸಿಕೊಂಡೂ; ಮುಟ್ಟುಗೆಟ್ಟುಂ= ಸಲಕರಣೆಗಳನ್ನೆಲ್ಲಾ ಕಳೆಕೊಂಡೂ (ನಿರ್ಗತಿಕರಾಗಿ) ಇರ್ದು= ಇದ್ದು; (ಭೂಮಿಯನ್ನು ಸಂಪೂರ್ಣ ಕಳೆಕೊಂಡುದು ಮಾತ್ರವಲ್ಲದೆ ಪುರುಷನಾಗಿ ಜೀವಿಸಲು ಎಡೆಯಿಲ್ಲದೆ ಹೆಂಗುಸಿನ ವೇಷಧರಿಸಿಯೂ ಉಪಜೀವಿ

ಏಟ್ಕಿಟ್ಟಿನೆಟೞ್ದು ನಿಮ್ಮಂ ।
ನಾಟ್ಕಿಡಿಗಳಿದೊಡೆ ಮದೀಯನಾಥಂ ಬೇರಂ ॥
ಬಿಟ್ಕೆಯನೆ ತಿಂದ ದೆವಸದೊ- ।
ಳಟ್ಕಾಡಿದ ಬೀರವಿಾಗಳೇಂ ಪೊಸತಾಯ್ತೇ ॥ ೭ ॥

---

ಸಲು ಬೇಕಾ ಸಾಮಗ್ರಿಗಳಾವುವೂ ಇಲ್ಲದೆ ಗತಿಗೆಟ್ಟ ದರಿದ್ರನಾಗಿದ್ದೂ) ಈಗಳ್ = ಈ ಸಮಯದಲ್ಲಿ, ಬಳ್ವಳನೆ = (ಬಳಬಳನೆ ಅನುಕರಣ, ಬಾಯಿಗೆ ಬಂದಂತೆ ಸಿಕ್ಕಾಬಟ್ಟೆಯಾಗಿ, ಅರ್ಥವಿಲ್ಲದೆ) ಹೆಚ್ಚಾಗಿ; ನುಡಿದಪುದೆ = ಹೇಳುತ್ತಿರುವುದೆ? ನುಡಿವಂತೆ = ಈ ರೀತಿ ಮಾತಾಡುವ ಹಾಗೆ, ಅಳವುಂ = ಶಕ್ತಿಯೂ (ಸಾಮರ್ಥ್ಯವೂ) ಪೆರ್ಮಾತುಂ = ದೊಡ್ಡಸ್ತಿಕೆಯನ್ನು ಸೂಚಿಸುವ ಮಾತೂ, ಆಯಮುಂ = ತಕ್ಕ ಸನ್ನಿವೇಶವೂ, ನಿನಗೆ ಆಯ್ತೇ = ನಿನಗೆ ಉಂಟಾಯಿತೇ ? ಅರ್ಜುನಾ ನಿನ್ನ ಯೋಗ್ಯತೆಯೇನೆಂಬುದನ್ನು ನಾನು ಅರಿಯದವನಲ್ಲ, ನಿರ್ಗತಿಕನಾಗಿ ಪಾಡುಪಡುತ್ತಿದ್ದ ನೀನಿಂದು ಬಾಯಿಗೆ ಬಂದಂತೆ ಹರಟುವೆಯೆಂದರೆ ನಿನ್ನಲ್ಲೇನೋ ಹೆಚ್ಚುಕಡಿಮೆಯುಂಟಾಗಿರಬೇಕೆಂದು ನಾನು ತಿಳಿಯುತ್ತೇನೆ ಎಂದು ಬಾವಾರ್ಥವು ॥ ೬ ॥

ಏಟ್ಕಿಟ್ಟಿಂ — ಇಂತೆಂದು ಕಂದಂ ॥ ಮದೀಯನಾಥಂ = ನಮ್ಮ ಸ್ವಾಮಿಯಾದ ದುರ್ಯೋಧನನು, ನಿಮ್ಮಂ = ಪಾಂಡವರೆನಿಸಿದ ನಿಮ್ಮೆಲ್ಲರನ್ನೂ ಏಟ್ಕಿಟ್ಟಿಂ = ಎದ್ದು ಹೋಗುವಂತಹ (ದೇಶಬಿಟ್ಟೋಡುವಂತಹ) ನಿರ್ಬಂಧದಿಂದ; ಎಳೆದು = ಆಕರ್ಷಿಸಿ ಸೆಳೆದು) (ನಿರ್ಬಂಧವೆಂಬ ಸೂತ್ರದಿಂದ ನಿಮ್ಮನ್ನು ಕಟ್ಟಿ ಎಳೆದು) ನಾಟ್ಕಿಡಿಗಳಿದೊಡೆ = (ನಾಡ + ಗಡಿ ಕಳಿದೊಡೆ) ದೇಶದ ಎಲ್ಲೆಯನ್ನು ಬಿಟ್ಟುಹೋಗುವಂತೆ ಮಾಡಲು, ಬೇರಂ = ಗಿಡಬಳ್ಳಿಗಳ ಮೂಲವನ್ನು (ಗೆಡ್ಡೆಗೆಣಸು ಮುಂತಾದ್ದನ್ನೂ) ಬಿಟ್ಕೆಯನೆ— ಒಂದು ಜಾತಿಯ ಮರದ ಕಾಯಿಯನ್ನೇ, (ಭಿಕ್ಷೆ (ದ್ಭ) ಬಿಕ್ಕೆ) ತಿಂದ= ತಿಂದು ಬದುಕಿದ; ದೆವಸದೊಳ್ = ಆ ದಿನಗಳಲ್ಲಿ (ದಿವಸ–ದೆವಸ) ಅಟ್ಕಾಡಿದ = ಸಂಪೂರ್ಣ ನಷ್ಟವಾಗಿ ಹೋಗಿದ್ದ [ಅಟ್ಕು + ಅಡು (ಧಾತು) ನಿರವಶೇಷೇ, ನಿರಶೇಷವೆಂದಿಲ್ಲವಾದುದು] ಬೀರಂ = ಪರಾಕ್ರಮವು; ಈಗಳ್ = ಈಗ, ಪೊಸತಾಯ್ತೇ ಏಂ = ಏನು ಹೊಸತಾಗಿ ಬಂತೆ? (ಒಪ್ಪಂದವೆಂಬ ನಿರ್ಬಂಧದ ಮೂಲಕ ನಮ್ಮೊಡೆಯನು ನಿಮ್ಮನ್ನು ಸ್ವಾತಂತ್ರ್ಯಹೀನರನ್ನಾಗಿ ಮಾಡಿ ದೇಶದ ಗಡಿಯಿಂದಲೂ ಹೊರಗೆ ಓಡಿಸಲು ಎಲ್ಲೋ ಅರಣ್ಯದಲ್ಲಿ ಸುತ್ತಾಡುತ್ತ ಹಣ್ಣು ಕಾಯಿ ಗೆಡ್ಡೆಗೆಣಸುಗಳೆನ್ನದೆ ಸಿಕ್ಕಿದುದನ್ನು ತಿಂದು ಸತ್ವಹೀನರಾಗಿ ಜೀವನ್ಮೃತರಂತೆ ಬಾಳಿದವರಲ್ಲವೆ ನೀವು ಅಂದಿಲ್ಲದಿದ್ದ ಪೌರುಷವು ಇಂದೇನು ಹೊಸತಾಗಿ ಬಂತೆ? ನೀವು ಸತ್ವವಿಲ್ಲದವರೆಂಬುದನ್ನು ನಾನು ತೀರಾ ಬಲ್ಲೆನೆಂದು ತಾತ್ಪರ್ಯವು; [ಏಟ್ಕಿಟ್ಟು, ನಾಟ್ಕಿಡಿ = ಇಲ್ಲಿ ಕಕಾರಕ್ಕೆ ಗಕಾ

ಮತ್ತನಯನರಸನನುಜನ ।
ಸತ್ತಟಿಲಂ ನಿನ್ನೊಳಱಸಲೆಂದಿರ್ದೆಂ ಬೆ- ॥
ಳ್ಕುತ್ತಿರ್ದೆನಪ್ಪೊಡೇತೊದ- ।
ಳಿತ್ತಣ ದಿನನಾಥನಿತ್ತ ಮೂಡುಗುಮಲ್ತೇ ॥ ೮ ॥
ಕಸವರದ ಸವಿಯುಮಂ ಭಯ- ।
ರಸಕದ ಸವಿಯುಮನದೆಂತುಮಾನಱಿಯದುದಂ ॥
ವಸುಮತಿಯಱಿವುದು ನೀಂ ಪುರು- ।
ಡಿಸಿ ನುಡಿದೊಡೆ ನಿನ್ನ ನುಡಿದ ಮಾತೇಱುಗುಮೇ ॥ ೯ ॥

---

ರಾದೇಶವಿಲ್ಲ-ಇರಿವರ್ಗ ಪ್ರಥಮಂಗಳ,ಪರದೊಳ್ ಚಟವರ್ಗಮುಳಿಯೆ ತಮ್ಮ ತೃತೀಯಾ । ಕ್ಷರಮುಕ್ಕುಂ ಪದವಿಧಿಯೊಳ್ ಪರಿಹರಿಸಲ್ಬಾರದಲ್ಲಿ ಬಹುಳ ಸ್ಥಿತಿಯಂ ॥ ಬಹುಳವೆಂಬುದಱಿಂದ ತೃತೀಯತ್ವವಿಲ್ಲದುದಕ್ಕೆ ಉದಾಹರಣವಿದು ॥ ಶ. ಮ. ದ. ಸೂತ್ರ ॥ ೬೫ ॥ ]

ಮತ್ತನಯನ — ಇಂತೆಂದು ಕಂದಂ ॥ ಮತ್+ತನಯನ=ನನ್ನ ಮಗನಾದ ವೃಷಸೇನನ, ಅರಸನ ಅನುಜನ=ಸ್ವಾಮಿಯ ಸಹೋದರನಾದ ದುಶ್ಶಾಸನನ; ಸತ್ತ ಅಟಿಲಂ=ಸತ್ತುಹೋದುದರಿಂದ ಉಂಟಾದ ಆ ದುಃಖವನ್ನು, ನಿನ್ನೊಳ್=ನಿನ್ನಲ್ಲಿ, ಅಱಸಲೆಂದು=ಹುಡುಕೋಣವೆಂದು, ಇರ್ದೆಂ=ಯೋಚಿಸುತ್ತಿದ್ದೆನು, ಬೆಳ್ಕುತ್ತ ಇರ್ದೆಂ ಅಪ್ಪೊಡೆ=ಹೆದರುತ್ತ ಇದ್ದೆನಾದರೆ, ಏತೊದಳ್=ಸುಳ್ಳೇನು (ನಿಜವಾಗಿಯೂ) ಇತ್ತಣ=ಈ ದೆಸೆಯಲ್ಲಿ (ಮೂಡುದಿಕ್ಕಿನಲ್ಲಿ) ಉದಯಿಸುವ ಸೂರ್ಯನು, ಇತ್ತ=ಇತ್ತ ಇನ್ನೊಂದು ದೆಸೆಯಲ್ಲಿ (ಪಡುಗಡೆಯಲ್ಲಿ) ಮೂಡುಗುಂಅಲ್ತೇ=(ಉದಯಿಸಿಯೇ ತೀರುವನು) ನಿಜವಾಗಿಯೂ ಉದಯಿಸುವನು ॥ ನನ್ನ ಮಗನ ವಿಷಯಕವಾದ ವ್ಯಸನ ಹಾಗೂ ಸ್ವಾಮಿಸೋದರನ ಕುರಿತ ವ್ಯಸನ ಇವೆರಡನ್ನೂ ನಿನ್ನಲ್ಲಿ ಹುಡುಕಿ ನೋಡುವ ಎಂದು ಯೋಚಿಸುತ್ತಾ ಇದ್ದೆನಲ್ಲದೆ ಹೆದರಿ ಸುಮ್ಮನಿರುವೆನೆಂದು ತಿಳಿಯುವೆಯೇನು? ನಾನು ಹೆದರಿಕೊಂಡರೆ ಮೂಡಲು ಉದಯಿಸತಕ್ಕ ದಿನಪನು ಪಶ್ಚಿಮದಲ್ಲಿ ಉದಯಿಸುವುದು ಖಂಡಿತವೆಂಬುದಾಗಿ ಭಾವಿಸಿಕೊ ॥ ೮ ॥

ಕಸವರದ — ಇಂತೆಂದು ಕಂದಂ ॥ ಆಂ=ಕರ್ಣನೆಂದುಪ್ರಸಿದ್ಧನಾದ ನಾನು; ಕಸವರದ=ಐಶ್ವರ್ಯದ; ಸವಿಯುಮಂ=ಸವಿಯನ್ನೂ; ಭಯರಸಕದ=ಭಯಾನಕ ರಸದ (ಹೇಡಿತನದ) ರಸಕವೆಂದು ಸ್ವಾರ್ಥದಲ್ಲಿ ಕಪ್ರತ್ಯಯವು; ಸವಿಯುಮಂ=ಸವಿಯನ್ನೂ; ಅಱಿಯದುದಂ=ತಿಳಿಯದಿರುವುದನ್ನು; ವಸುಮತಿ=ಭೂಮಿಯು

ಒಡಲುಂ ಪ್ರಾಣಮುಮೆಂಬಿವು ।
ಕಿಡಲಾದುವು ಜಸಮದೊಂದೆ ಕಿಡದದನಾಂ ಬ- ।
ಲ್ವಿಡಿವಿಡಿದು ನೆಗೞ್ದೆನುೞಿದಱ- ।
ವಡೆಮಾತಂ ಮಾಡಿ ನೀನೆ ಕೆಮ್ಮನೆ ನುಡಿವೈ । ॥ ೧೦ ॥

ಬಿದಿವಸದಿಂದೆ ಪುಟ್ಟುವುದು ಪುಟ್ಟಿಸುವಂ ಬಿದಿ ಪುಟ್ಟಿದಂದಿವಂ- ।
ಗಿದು ಬಿಯಮೊಳ್ಪಿವಂಗಿದು ವಿನೋದಮಿವಂಗಿದು ಸಾವ ಪಾಂಗಿವಂ- ।
ಗಿದು ಪಡೆಮಾತಿವಂಗಿದು ಪರಾಕ್ರಮಮೆಂಬುದನೆಲ್ಲ ಮಾಟ್ಕೆಯಿಂ ।
ಬಿದಿ ಸಮಕಟ್ಟಿ ಕೊಟ್ಟೊಡೆಡೆಯೊಳ್ ಕಿಡಿಸಲ್ ಕುಡಿಸಲ್
ಸಮರ್ಥರಾರ್ ॥ ೧೧ ॥

---

(ನಿಧಿಗಳನ್ನು ಒಳಗೊಂಡಿರುವ ಭೂಮಿಯು.) (ಇಲ್ಲಿ ಲೋಕವು ಎಂಬುದು ಅರ್ಥ) ಅದೆಂತು= ಅದು ಹೇಗೆ ತಾನೇ, ಅಱಿವುದು= ತಿಳಿಯುವುದು? ನೀಂ= ನೀನು(ಅರ್ಜುನನು) ಪುರುಡಿಸಿ= ಮತ್ಸರಗೊಂಡು, ನುಡಿದೊಡೆ= ಹೇಳಿದರೆ; ನಿನ್ನ ನುಡಿದ, ಮಾತು= ನೀನು ಹೇಳಿದ ಮಾತು; (ನಿನ್ನ ಹೇಳಿಕೆಯು) ಏೞ್ಗುಗುಮೇ= ಲೋಕದಲ್ಲೆಲ್ಲಾ ಗ್ರಾಹ್ಯವಾಗುವುದೇ? ಲೋಕಮಾನ್ಯವೆನಿಸುವುದೇ? ॥ ೯ ॥

ಒಡಲುಂ — ಇಂತೆಂದು ಕಂದ ॥ ಒಡಲುಂ= ದೇಹವೂ, ಪ್ರಾಣಮುಂ= ಜೀವವೂ, ಎಂಬ ಇವು= ಎನ್ನುವ ಇವೆರಡೂ, ಕಿಡಲಾದುವು= ನಷ್ಟವಾಗಲಿರುವುವು; (ನಶ್ವರಗಳು) ಅದೊಂದೆಜಸಂ= ಯಶಸ್ಸು ಮಾತ್ರವೇ; ಕಿಡದು= ಕೆಟ್ಟು ಹೋಗದ್ದು; (ನಾಶರಹಿತವಾಗಿರುವುದು) ಆಂಅದಂ ಬಲ್ವಿಡಿವಿಡಿದು= ನಾನದನ್ನು ಬಲವಾಗಿ ಅವಲಂಬಿಸಿಕೊಂಡೇ; ನೆಗೞ್ದೆಂ= ಕಾರ್ಯಾಚರಣೆಯುಳ್ಳವನಾಗಿ ಬಾಳಿದೆನು; ಉೞಿದ= ಮಿಕ್ಕ (ಇತರ) ಅಱವಡೆಮಾತಂ= ಕೆಟ್ಟ (ಸುಳ್ಳು ಸುಳ್ಳಾದ) ವಾರ್ತೆಯನ್ನು, ನೀನೆ ಮಾಡಿ= ನೀನೇ ಕಲ್ಪಿಸಿಕೊಂಡು; ಕೆಮ್ಮನೆ= ಸುಮ್ಮನೆ, (ಪ್ರಯೋಜನವೇನೂ ಇಲ್ಲದೇನೇ) ನುಡಿವೈ= ಹೇಳುತ್ತಿರುವೆಯಷ್ಟೆ! (ದೇಹ ಪ್ರಾಣಗಳು ನಶ್ವರಗಳೆಂಬ ಭಾವನೆಯಿಂದ ಸ್ಥಿರವಾದ ಕೀರ್ತಿಯ ಮೇಲೆ ದೃಷ್ಟಿಯುಳ್ಳವನಾಗಿಯೇ ನಾನು ಕಾರ್ಯಗಳನ್ನು ಆಚರಿಸುತ್ತಾ ಬರುತ್ತಿರುವೆನು. "ಅಳಿವುದೇ ಕಾಯ; ಉಳಿವುದೇ ಕೀರ್ತಿ"ಯೆಂಬುದು ನನ್ನ ಮಂತ್ರವು ಹೀಗಿರುವಾಗ ನೀನು ಬೇಕು ಬೇಕೆಂದೇ ಅಪವಾದವನ್ನು ಹೇಳಿದರೆ ಅದರಿಂದ ನನಗೇನೂ ನಷ್ಟವಿಲ್ಲ; ನಿನಗಾದರೂ ಅದರಿಂದ ಬರತಕ್ಕ ಲಾಭವೂ ಅಷ್ಟರಲ್ಲೇ ಇದೆ) ಎಂಬುದು ಸಾರಾಂಶವು ॥ ೧೦ ॥

ಬಿದಿವಸದಿಂದೆ — ಇಂತೆಂದು ಚಂ ಮಾಲಾವೃತ್ತಂ ॥ ಬಿದಿವಸದಿಂದೆ=

ಎಂದೀ ಬಾಯ್ಮಾತಿನೊಳೇ- ।
ವಂದಪುದಣ್ಮಣ್ಮಿ ಕಾದುಕೊಳ್ಳೆನುತುಂ ಭೋ- ॥
ರೆಂದಿಸೆ ಪೊಸಮಸೆಯಂಬಿನ ।
ತಂದಲ ಬೆಳ್ಸರಿಗಳಿರದೆ ಕವಿದುವು ನರನಂ ॥ ೧೨ ॥

---

ದೈವಾಧೀನವಾಗಿಯೇ; ಹುಟ್ಟುವುದು=ಜನ್ಮಕ್ಕೆ ಬರುವುದು, ಪುಟ್ಟಸುವಂ=ಜನ್ಮ ಹೊಂದಿಸುವಾತನು; ಬಿದಿ=ವಿಧಿಯು (ದೈವವು) ಪುಟ್ಟದಂದು=ಜನ್ಮಕ್ಕೆ ಬಂದಾಗಲೇ; ಇವಂಗೆ ಇದು ಬಿಯಂ=ಈತನಿಗೆ ಇದು ವ್ಯಯವು; ಇವಂಗೆಇದು ಒಳ್ಪು=ಇವನಿಗೆ ಇದು ಒಳ್ಳೆಯದು, ಇವಂಗೆ ಇದು ವಿನೋದಂ=ಇವನಿಗೆ ಇದು ಸಂತೋಷವು; ಇವಂಗೆ ಇದು ಸಾವಪಾಂಗು=ಇವನಿಗೆ ಇದು ಮರಣ ಹೊಂದುವ ರೀತಿಯು ಇವಂಗೆ ಇದು ಪಡೆಮಾತು=ಇವನಿಗೆ ಇದು ಸುದ್ದಿಯು (ವೃತ್ತಾಂತವು) ಇವಂಗೆ ಇದು ಪರಾಕ್ರಮಂ=ಇವನಿಗಿದು ಪೌರುಷವು, ಎಂಬುದ=ಹೀಗೆ ಇವೆಲ್ಲವನ್ನೂ; ಬಿದಿ=ದೈವವು, ಎಲ್ಲ ಮಾಟ್ಕೆಯಿಂ=ಬೇರೆಬೇರೆ ರೀತಿಗಳಿಂದ, ಸಮಕಟ್ಟಿ ಕೊಟ್ಟೊಡೆ=ಸಿದ್ಧಪಡಿಸಿ ಕೊಟ್ಟಿರುವಾಗ; ಎಡೆಯೊಳ್=ಮಧ್ಯದಲ್ಲಿ; ಕಿಡಿಸಲ್=ಹಾಳುಮಾಡುವುದಕ್ಕಾಗಲಿ; ಕುಡಿಸಲ್=ಅನುಭವಿಸುವಂತೆ ಮಾಡುವುದಕ್ಕಾಗಲಿ; ಸಮರ್ಥರ್ ಆರ್=ಯಾರಿಗೆ ತಾನೇ ಶಕ್ತಿಯಿರುವುದು ॥ (ಕೇವಲ ವಿರಕ್ತನ ಹೃದಯದಿಂದ ಹೊರಟು ಬರತಕ್ಕ ತಾತ್ವಿಕಭಾವನೆಯಿದು ಯುದ್ಧರಂಗದಲ್ಲಿ ವಿಕ್ರಮಾರ್ಜುನನನ್ನು ಪ್ರತಿಭಟಿಸಲು ನಿಂತಿದ್ದ ಲೋಕೈಕವೀರನ ಹೃದಯದಿಂದ ಹೊರಡುತ್ತಿರುವುದು. ಅದಕ್ಕೆ ಕಾರಣವೇನಿರಬಹುದೆಂದು ನಾವುಭಾವಿಸಿಕೊಳ್ಳಬಹುದು. ಕರ್ಣನ ಬಗೆಯು ಲೌಕಿಕ ಪಾರಮಾರ್ಥಿಕ ವಿಚಾರಗಳ ಹೊಯ್ದಾಟದಿಂದ ಜರ್ಝರಿತವಾಗುತ್ತಿದೆ. ಅತ್ತ ಆಶ್ರಯವಿತ್ತ ಸ್ವಾಮಿಯ ವಿಷಯಕವಾದ ವಿಶ್ವಾಸವಾದರೆ, ಇತ್ತ ಜನ್ಮವಿತ್ತ ತಾಯಿಯೂ ಕಷ್ಟಕ್ಕೀಡಾದ ಸೋದರರೂ; ತಾನು ಅವರನ್ನು ಹೊಡೆಯಲು ಸಿದ್ಧನಾಗಿರಬೇಕು. ಅರ್ಜುನನಿಗೆ ಇದೊಂದರ ಅರಿವೂ ಇಲ್ಲದೆ ಹೋದರೂ ಪಾರ್ಥಸಾರಥಿಯಿರುವನಲ್ಲ, ಅವನಿಗೆ ಕರ್ಣನ ಒಳತೋಟಿಯು ತಿಳಿದಿರಬಹುದಾದರೂ ಅವನು ಎಲ್ಲವನ್ನೂ ಸುಮ್ಮನೆ ನೋಡುತ್ತಿರುವನಲ್ಲದೆ ಏನೂ ಹೇಳುವಂತಿಲ್ಲ ಕರ್ಣನು ತನ್ನ ಭವಿತವ್ಯತೆಯನ್ನು ಆಗಲೇ ನಿರ್ಧರಿಸಿ ಇಂತಹ ಪಾರಮಾರ್ಥಿಕ ವಿಚಾರವನ್ನು ಹೊರಗೆಡಹುತ್ತಿರುವುದನ್ನು ಮಾತ್ರ ಕೇಳುವನು. ಆ ಸಂದರ್ಭದ ಅರಿವಿಲ್ಲದವರಿಗೆ ಇದೇಕೆ ನಡುವೆ ವೇದಾಂತವೆಂದು ತೋರುತ್ತಿರಬಹುದು. ನಾಟಕ ಸೂತ್ರಧಾರನಂತೆ ವಿಧಿಯು ಎಲ್ಲವನ್ನೂ ಸಿದ್ಧಪಡಿಸಿರುವಾಗ ದೈವಿಕವನ್ನು ಪೌರುಷದಿಂದ ಉಲ್ಲಂಘಿಸುವೆನೆಂದು ಹಾರಾಡಿದರೆ ಅದು ಸಾಗದ ವಿಚಾರವೆಂಬುದು ಸಾರವು.) ಏಕಾವಳ್ಯಲಂಕಾರವು. ॥ ೧೧ ॥

ಎಂದು — ಇಂತೆಂದು ಕಂದಂ ॥ ಎಂದು=ಹೀಗೆ ಹೇಳಿ (ಕರ್ಣನು) ಈ

ಪಾತಂ ಲಕ್ಷ್ಯಂ ಶೀಘ್ರಂ ।
ಘಾತಂ ಬಹುವೇಗಮೆಂದಿವಯ್ದೇಸಿನೊಳಂ– ॥
ಶೀತನ ದೊರೆಯಿಲ್ಲೆನಿಸಿದು– ।
ದಾತನ ಬಿಲ್ಬಲ್ಮೆ ಸುರರಿನಂಬರತಲದೊಳ್ ॥ ೧೩ ॥
ಮೊನೆಯಂಬಿನ ತಂದಲೊಳ– ।
ರ್ಜುನನಂ ಕರ್ಣನುಮನಿನಿಸು ಕಾಣದಣಂ ಮೆ– ॥
ಲ್ಲನೆ ಬಗಿದು ನೋಡಿ ಕುಡುಮಿಂ– ।
ಚಿನಂತೆ ಮೇಗೊಗೆದು ನಾರದಂ ನರ್ತಿಸಿದಂ ॥ ೧೪ ॥

---

ಬಾಯ್ವಾತಿನೊಳ್ = ಆಡಿಕೊಂಡ ಇಂತಹ ಮಾತುಗಳಿಂದ; ಏವಂದಪುದು (ಏಂ+ ಬಂದಪುದು = ಏವಂದಪುದು) ಯಾವ ಪ್ರಯೋಜನವುಂಟಾಗುವುದು? ಅಣ್ಮು ಅಣ್ಮು– [ಅಣ್ಮು (ಧಾತು) ಪೌರುಷೇ] ಪೌರುಷವನ್ನು ತೋರಿಸು' ತೋರಿಸು; [ಚಪಲತೆಗೆ ದ್ವಿರುಕ್ತಿಯು; ಚಾಪಳಾದಿಗೆ ಸಾರಂಬುಧರಿಂಪದಕ್ಕೆ ಯುಗಳೋಚ್ಚರಣಂ ॥ ಶ. ಮು. ದ ಸೂತ್ರ ॥ ೧೯೫ ॥] ಕಾದು = ಹೋರಾಡು, ಕೊಳ್ = (ಬರುವ ಬಾಣಗಳನ್ನು) ತಡೆದುಕೊ? ಎನುತುಂ = ಎಂದು ಹೇಳುತ್ತ; ಭೋರೆಂದು = (ಇದು ಅನುಕರಣ ಶಬ್ದವು) ಭೋರನೆ; (ಜೋರಾಗಿ) ಇಸೆ = ಬಾಣಗಳನ್ನು ಹೂಡಲು, ಪೊಸಮಸೆಯ = ಆಗತಾನೇ ಮಸೆದು ಹರಿತವಾಗುವಂತೆ ಮಾಡಿದ, ಅಂಬಿನ = ಬಾಣದ, ತಂದಲ = ಮಳೆಯ; ಬೆಳ್ಸರಿಗಳ್ = ಬಿಳುಪಾಗಿ ತೋರುವ ಸುರಿತಗಳು, ಇರದೆ = ಕೂಡಲೆ (ಸಮಯವಿಳಂಬವಿಲ್ಲದೆ) ನರನಂ = ಅರ್ಜುನನನ್ನು, ಕವಿದುವು = ಆವರಿಸಿದುವು॥ ಪೊಸಮಸೆಯ ಬಾಣಗಳಾದುದರಿಂದ ಬೆಳ್ಳಗೆ ತೋರುತ್ತ ಸುರಿವ ಮಳೆಯ ಧಾರೆಗಳೆಂದು ರೂಪಿಸಿರುವುದರಿಂದ ರೂಪಕಾಲಂಕಾರವು ॥ ೧೨ ॥

ಪಾತಂ– ಇಂತೆಂದು ಕಂದಂ ॥ ಅಂಬರತಲದೊಳ್ - ಆಕಾಶದಲ್ಲಿ, ಸುರರಿಂ = ದೇವತೆಗಳಿಂದ, ಆತನ = ಆ ಕರ್ಣನ, ಬಿಲ್ಬಲ್ಮೆ = (ಬಿಲ್ಲ + ಬಲ್ಮೆ) ಚಾಪಶಕ್ತಿಯು; ಪಾತಂ = ಎರಗುವುದು, ಲಕ್ಷ್ಯಂ = ಗುರಿ ಮುಟ್ಟುವುದು; ಶೀಘ್ರಂ = ವೇಗವುಳ್ಳುದು; ಘಾತಂ = ನಾಶಪಡಿಸುವುದು; ಬಹುವೇಗಂ = ಅತಿಚಲನೆಯುಳ್ಳುದು; ಎಂಬ = ಎನ್ನುವ, ಇವುಐದು = ಈ ಐದು ಗುಣವುಳ್ಳ, ಏಸಿನೊಳ್ = ಬಾಣಪ್ರಯೋಗದಲ್ಲಿ; ಅಂತು ಈತನ ದೊರೆ ಇಲ್ಲ ಎನಿಸಿದುದು = ಹಾಗೆಯೇ ಹೊಡೆಯುವುದರಲ್ಲಿ ಇವನಿಗೆ ಸಮಾನರಾದವರು ಇಲ್ಲವೇ ಇಲ್ಲ ಎಂದು ಹೇಳಿಸಿತು ॥ ೧೩ ॥

ಮೊನೆಯಂಬಿನ — ಇಂತೆಂದು ಕಂದಂ ॥ ಮೊನೆಯ = ಹರಿತಗಳಾದ;- ಅಂಬಿನ = ಬಾಣಗಳ (ಜಾತ್ಯೇಕವಚನ) ತಂದಲೊಳ್ = ಮಳೆಯಲ್ಲಿ; ಅರ್ಜುನನಂ ಕರ್ಣ

ವ ॥ ಆಗಳ್ ಮದ್ರರಾಜನಂಗಾಧಿರಾಜನನಿಂತೆಂದನೀಯಂಬುಗಳೊಳೇಂ
ತೀರ್ದಪುದು. ದಿವ್ಯಾಸ್ತ್ರಂಗಳಿಂದೆಚ್ಚು ಪಗೆಯಂ ಸಾಧ್ಯಂಮಾಡೆಂಬು-
ದುಂ ಕೊಂತಿಗೆ ತನ್ನ ನುಡಿದ ನುಡಿವಳಿಯಂ ನೆನೆದು ಪುರಿಗಣೆಯ
ದೊಣೆಗೆ ಕೆಯ್ಯಂ ನೀಡದೆ ರೌದ್ರಶರದ ದೊಣೆಗೆ ಕೆಯ್ಯಂ ನೀಡಿದಾಗಳ್-

ಮುಳಿಸಂ ನೆಱಪಲ್ಕರ್ಧಾ- ।
ವಳೀಕಶರರೂಪದಿಂದಸುಂಗೊಳೆ ದೊಣೆಯಿಂ ॥
ಪೊಳೆದು ಬರೆ ಕೆಯ್ಗೆ ತಾಂ ವಿ- ।
ಸ್ಫುಳಿಂಗಪಿಂಗಳಿತಭುವನಭವನಾಭೋಗಂ ॥ ೧೫ ॥

---

ನುಮಂ = ಅರ್ಜುನನನ್ನೂ ಕರ್ಣನನ್ನೂ, ಇನಿಸು ಅಣಂಕಾಣದೆ = ಒಂದಿಷ್ಟಾದರೂ (ಸ್ವಲ್ಪವಾದರೂ) ಕಾಣದೆ; ಮೆಲ್ಲನೆ ಬಗಿದುನೋಡಿ = ವಿಭಾಗ ಮಾಡಿ (ಪ್ರತ್ಯೇಕ ಅತ್ತ ಇತ್ತ ಸರಿಯುವಂತೆ ಮಾಡಿ) ನೋಡಿ [ಬಗಿ (ಧಾತು) ವಿಶ್ಲೇಷೇ, ವಿಶ್ಲೇಷವೆಂದು ಭಾಗಂ] ಕುಡುಮಿಂಚಿನಂತೆ = ಡೊಂಕಾದ ಮಿಂಚಿನ ಹಾಗೆ (ಬಳ್ಳಿಮಿಂಚಿನಂತೆ) [ಕೊಂಕು ಎಂಬುದಕ್ಕೆ ಕುಡು ಎಂಬುದಾದೇಶವು] ಮೇಗೆ-ಮೇಲ್ಭಾಗದಲ್ಲಿ; ಒಗೆದು = ತೋರಿಕೊಂಡು [ಒಗೆ (ಧಾತು) ಜನನ ವಸ್ತ್ರಪ್ರಕ್ಷಾಲನಯೋಃ] ನಾರದಂ = ಜ್ಞಾನದಾಯಕನಾದ ನಾರದಮಹರ್ಷಿಯು; ನರ್ತಿಸಿದಂ = ಸಂತೋಷದಿಂದ ಕುಣಿದಾಡಿದನು ॥ ರೂಪಕೋಪಮಾಲಂಕಾರ ॥ ೧೪ ॥

ಆಗಳ್ — ಇಂತೆಂದುವಚನಂ ॥ ಆಗಳ್ = ಆಗ; ಮದ್ರರಾಜಂ = ಶಲ್ಯನು, ಅಂಗಾಧಿರಾಜನಂ = (ಅಂಗ+ಅಧಿರಾಜ) = ಕರ್ಣನನ್ನು ಕುರಿತು; ಇಂತೆಂದಂ — (ಇಂತು+ಎಂದಂ) ಹೀಗೆಂದನು, ಈ ಯಂಬುಗಳೊಳ್ = ಇಂತಹ ಬಾಣಗಳಿಂದ, ಏಂತೀರ್ದಪುದು = (ವಿರೋಧಿಯನ್ನು ಜಯಿಸುವ ಕಾರ್ಯವು (ಬಗೆಹರಿಯುವುದೇನು? ದಿವ್ಯಾಸ್ತ್ರಂಗಳಿಂದ = ಅಮೋಘಗಳಾದ ಶರಗಳಿಂದ; ಎಚ್ಚು = ಹೊಡೆದು, ಪಗೆಯಂ = ವೈರಿಯನ್ನು; ಸಾಧ್ಯಂಮಾಡು (ಸಾಧ್ಯಮಂ+ಮಾಡು = ಕ್ರಿ. ಸ) ಅಧೀನವಾಗುವಂತೆ ಮಾಡು (ಜಯಿಸಿಕೊ) ಎಂಬುದುಂ = ಹೀಗೆನ್ನಲು, ಕೊಂತಿಗೆ = ಕುಂತಿದೇವಿಗೆ; ತನ್ನ ನುಡಿದ = (ತಾಂ ನುಡಿದ; ಅಥವಾ ನುಡಿದ ತನ್ನ) ನುಡಿವಳಿಯಂ = (ಮಾತಿನ ರೀತಿಯನ್ನು) ವಾಗ್ದಾನವನ್ನು; ನೆನೆದು = ಸ್ಮರಿಸಿಕೊಂಡು; ಪುರಿಗಣೆಯ = ಹುರಿಗಣೆಗಳಿಂದಲೇ ತುಂಬಿದ (ಒಂದು ಬಗೆಯ ಅಸ್ತ್ರ) ದೊಣೆಗೆ = ಬತ್ತಳಿಕೆಗೆ; ಕೆಯ್ಯಂ ನೀಡದೆ = ತೋಳನ್ನು ಚಾಚದೆ; ರೌದ್ರಶರದ = ಭೀಕರಾಸ್ತ್ರದ; ದೊಣೆಗೆ = ಬಾಣಧಿಯ ಕಡೆಗಾಗಿ; ಕೆಯ್ಯಂನೀಡಿದ ಆಗಳ್ = ಕೈಚಾಚಿದ ವೇಳೆಗೆ — ॥

ಮುಳಿಸಂ — ಇಂತೆಂದು ಕಂದಂ ॥ ಮುಳಿಸಂ = ಕ್ರೋಧವನ್ನು; ನೆಱಪಲ್ಕೆ = ನೆರವೇರಿಸಬೇಕೆಂದು; ಅಸುಂಗೊಳೆ = (ವೈರಿಯಾದ ಅರ್ಜುನನನ್ನು) ನಾಶಪಡಿಸಬೇ

ತುಡೆ ಕರ್ಣನದಂ ನಡನಡ ।
ನಡುಗಿ ಸುಯೋಧನನ ಸಕಲರಾಜ್ಯಶ್ರೀಯುಂ ॥
ಸಡಿಲಿಸಿದ ತೋಳನಾಗಳ್ ।
ಸಡಿಲಿಸಲಣ್ಮಳೆ ದಲದಱಗುರ್ವೇಂ ಪಿರಿದೋ ॥ ೧೬ ॥

---

ಕೆಂದು, ವಿಸ್ಫುಲಿಂಗಪಿಂಗಳಿತಭುವನಭವನಾಭೋಗಂ = ವಿಸ್ಫುಲಿಂಗ = ಪ್ರಕಾಶದ ಕಿಡಿಗಳಿಂದ; ಪಿಂಗಳಿತ = ಹೊಂಬಣ್ಣವುಳ್ಳದ್ದಾಗಿ ಮಾಡಲ್ಪಟ್ಟ, ಭುವನ ಭವನ = ಬ್ರಹ್ಮಾಂಡವೆಂಬ ಮನೆಯು, ಆಭೋಗಂ = ವಿಶಾಲವಾದ ಪ್ರದೇಶವುಳ್ಳ, ತಾಂ = ಅಶ್ವಸೇನನೆಂಬ ಸರ್ಪವು; ಅರ್ಧಾವಳೀಕಶರರೂಪದಿಂದ = ಅರ್ಧಾವಳೀಕವೆಂಬ ಬಾಣವಾಗಿ, ಪೊಳೆದು = ಕೋಪದಿಂದ ಪ್ರಜ್ವಲಿಸುತ್ತ; ದೊಣೆಯಿಂ = ಬತ್ತಳಿಕೆಯಿಂದ, ಕೈಗೆಬರೆ = ಕೈಗೆಬರಲು ॥ (ಅಶ್ವಸೇನ – ಸರ್ಪರಾಜನಾದ ತಕ್ಷಕನ ಮಗನು ಖಾಂಡವವನ ದಹನಕಾಲದಲ್ಲಿ ಹೇಗೋ ಹೊರಗೆ ಓಡಿಹೋಗಿ ಬದುಕಿಕೊಂಡು ಅರ್ಜುನನ ಮೇಲೆ ಹಗೆಯನ್ನು ತೀರಿಸಬೇಕೆಂದು ಹೊಂಚು ಹಾಕುತ್ತಿದ್ದು, ಈಗ ಕರ್ಣನ ಬತ್ತಳಿಕೆಯಿಂದ ಸರ್ಪಾಸ್ತ್ರವಾಗಿ ಕರ್ಣನ ಕೈಗೆ ಬಂದನು ) ॥ ೧೫ ॥

ತುಡೆ — ಇಂತೆಂದು ಕಂದಂ ॥ ಕರ್ಣಂ = ಅಂಗಾಧಿಪತಿಯು, ಅದಂ = ಆ ಸರ್ಪಬಾಣವನು , ತುಡೆ = ಚಾಪದೊಡನೆ ಸಂಧಿಸಲು, [ತುಡು (ಧಾತು) ಶರಸಂಧಾನೇ; ಭೂಷಣಾವರಣೇಚ] ನಡನಡನಡುಗಿ = ವಿಶೇಷವಾಗಿ ಗಡಗಡನೆ ನಡುಗಿ [ದೂರಾಭೀಕ್ಷ್ಣ ಎಂಬ ಸೂತ್ರದಂತೆ ಕೆಲವು ಕಡೆ ತ್ರಿಪ್ರಯೋಗವೂ ಬರುವುದು ಕ್ರಿಯಾಸಮಭಿಹಾರಕ್ಕೆ = ನಡನಡನಡುಗಿ] ಸಕಲರಾಜ್ಯಶ್ರೀಯುಂ = ಎಲ್ಲಾ ದೇಶಗಳ ಸಂಪದಧಿದೇವತೆಯಾದ ಲಕ್ಷ್ಮಿಯಾದರೂ (ಸಾಮ್ರಾಜ್ಯಲಕ್ಷ್ಮಿಯು) ಸುಯೋಧನನ = ದುರ್ಯೋಧನನ, ಸಡಿಲಿಸಿದ = ತೊರೆದು ಹೋಗುವುದಕ್ಕಾಗಿ ಸಡಿಲು ಬಿಟ್ಟಿದ , ತೋಳಂ = ಭುಜದಂಡವನ್ನು; ಆಗಳ್ = ಕರ್ಣನು ಸರ್ಪಾಸ್ತ್ರವನ್ನು ಸಂಧಿಸಿದಾಗ, ಸಡಿಲಿಸಲ್ = ಸಡಿಲು ಬಿಡಲು, ಅಣ್ಮಳೆದಲ್ = ನಿಶ್ಚಯುವಾಗಿಯೂ ಶಕ್ತಳಾಗಲಿಲ್ಲ, ಅದಱ = ಆ ಸರ್ಪಬಾಣದ; ಅಗುರ್ವು = ಶಕ್ತಿಯು; ಏಂಪಿರಿದೋ? = ಎಷ್ಟು ಅಪಾರವಾದುದೋ? ॥ (ಇನ್ನು ಈತನ ಭುಜಮಂದಿರದಲ್ಲಿ ನೆಲಸಿರಲು ಸಾಧ್ಯವಿಲ್ಲವೆಂಬ ಭಾವನೆಯಿಂದ ವೈರಿಗಳ ಕಡೆಗಾಗಿ ಸಾಗಬೇಕೆಂದು ಮೆಲ್ಲಮೆಲ್ಲನೆ ಹೊರಡಲುದ್ಯೋಗಿಸುತ್ತಿದ್ದ ದುರ್ಯೋಧನನ ರಾಜ್ಯಲಕ್ಷ್ಮಿಯು ಕರ್ಣನ ಇದೊಂದು ಪ್ರಯೋಗದ ಮಹಿಮೆಯಿಂದ ಇದ್ದಲ್ಲೇ ನೆಲಸಿರಬಹುದೆಂದು ಯೋಚಿಸಿದಳೆಂದು ತಾತ್ಪರ್ಯವು) ಉತ್ಪ್ರೇಕ್ಷಾಲಂಕಾರವು ॥ ೧೬ ॥

ಆ ಕರ್ಣಾಂತಂ ತೆಗೆನೆಚಿ- ।
ದಾಕರ್ಣನಿಸಲ್ಕೆ ಬಗೆದೊಡುಡುಗುಡುಗಿಸಲೀ ॥
ಭೀಕರಬಾಣಮನಾದವಿ- ।
ವೇಕದಿನುರದೆಡೆಗೆ ತುಡದೆ ತಲೆಗೆಯೆ ತುಡುವಾ ॥ ೧೭ ॥

ಉರದೆಡೆಗೆ ತುಡೆ ಜುಯಶ್ರೀ- ।
ಗಿರಲೆಡೆ ನಿನಗಪ್ಪುದಾ ಸುಯೋಧನನೊಳ್ ಶ್ರೀ- ।
ಗಿರಲೆಡೆಯಪ್ಪುದು ಮೇಣ್ ದಿನ- ।
ಕರಸುತ ತೊದಳುಂಟೆ ಬಗೆಯೆ ಸಂದೆಯಮುಂಟೇ ॥ ೧೮ ॥

---

ಆ ಕರ್ಣಾಂತಂ— ಇಂತೆಂದು ಕಂದಂ ॥ ಆ ಕರ್ಣಂ= ಅಂಗಾಧಿಪತಿಯಾದ ಆ ವೀರಶ್ರೇಷ್ಠನು; ಆ ಕರ್ಣಾಂತಂ= ಕಿವಿಯ ಕೊನೆವರೆಗೂ, ತೆಗೆನೆಚಿದು = ಸರಿಯಾಗಿ ಸೆಳೆದು [ತೆಗೆನೆಚಿ (ಧಾತು) ಆ ಕರ್ಣಾಂತೇ] ಇಸಲ್ಕೆ = ಹೊಡೆಯಬೇಕೆಂದು, [ಇಸು (ಧಾ) ಶರವಿಮೋಚನೇ] ಬಗೆದೊಡೆ= ಯೋಚಿಸಲು, ಆದ= ಉಂಟಾದ, ಅವಿವೇಕದಿಂ= ತಿಳಿಗೇಡಿತನದಿಂದ; ಉಡುಗಿಸಲ್ = ಇಲ್ಲದಾಗಿಸುವುದಕ್ಕಾಗಿ (ಸಂಕೋಚಗೊಳಿಸುವುದಕ್ಕಾಗಿ) ಈ ಭೀಕರ ಬಾಣಮಂ= ಭಯಂಕರವಾದ ಈ ಸರ್ಪಾಸ್ತ್ರವನ್ನು; ಉಡುಗು= ಸಂಕೋಚಗೊಳಿಸು (ಸೆಳೆತದಿಂದ ಹಿಂತೆಗೆ) (ಇದನ್ನು) ಉರದೆಡೆಗೆ= ಉರಃಸ್ಥಳಕ್ಕೆ (ಎದೆಗೆ), ತುಡದೆ= ಸಂಧಿಸದೆ, ತಲೆಗೆಯೆ= ಶಿರಸ್ಸಿಗಾಗಿಯೇ; ತುಡುವಾ? = ಗುರಿಹಿಡಿಯುವೆಯೇನು? (ಕರ್ಣನೇ ನೀನು ಶಿರಸ್ಸಿಗಾಗಿ ಗುರಿಹಿಡಿದುದು ತಪ್ಪಾಯಿತು. ಆ ವೈರಿಯ ಎದೆಗೆ ಸರಿಯಾಗಿ ಗುರಿಹಿಡಿದು ಆ ತಪ್ಪಿನಿಂದ ತಪ್ಪಿಕೋ! ಎಂಬುದು ಸಾರಾಂಶವು) ॥ ೧೭ ॥

ಉರದೆಡೆಗೆ— ಇಂತೆಂದು ಕಂದಂ ॥ ದಿನಕರಸುತ= ಸೂರ್ಯನ ಸುಕುಮಾರನಾದ ಕರ್ಣನೇ; ಉರದೆಡೆಗೆ= ಎದೆಗಾಗಿ; ತುಡೆ= ಗುರಿಹಿಡಿಯಲು, ನಿನಗೆ= ನಿನ್ನಲ್ಲಿ, ಜಯಶ್ರೀಗೆ= ಜಯಾಂಗನೆಗೆ, ಇರಲ್ ಎಡೆ ಅಪ್ಪುದು= ಇರುವುದಕ್ಕೆ ಆಸ್ಪದವಾಗುವುದು: ಮೇಣ್ = ಅಷ್ಟು ಮಾತ್ರವಲ್ಲದೆ; ಸುಯೋಧನನೊಳ್ = ದುರ್ಯೋಧನನಲ್ಲಿ, ಶ್ರೀಗೆ= ಲಕ್ಷ್ಮೀದೇವಿಗೆ (ಸಂಪತ್ತಿಗೆ) ಇರಲ್ ಎಡೆ ಅಪ್ಪುದು= ನೆಲಸಿರುವುದಕ್ಕೆ ಆಸ್ಪದವಾಗುವುದು; · ಬಗೆಯೆ= ಯೋಚಿಸಿನೋಡಲು, ತೊದಳುಂಟೆ= (ಇದರಲ್ಲಿ) ಸುಳ್ಳಿರುವುದೆ? ಸಂದೆಯಂ= ಸಂದೇಹವು; ಉಂಟೇ = ಇರುವುದೆ? (ಎದೆಗೆ ಗುರಿಹಿಡಿದರೆ ನಿನಗೆ ಜಯದ ಲಾಭವು; ದುರ್ಯೋಧನನಿಗೆ ರಾಜ್ಯಲಾಭವು; ಇದರಲ್ಲಿ ಸುಳ್ಳಿಲ್ಲ; ಸಂದೇಹವಿಲ್ಲ ಎಂಬುದು ವಿಮರ್ಶಿಸಿದರೆ ಗೊತ್ತಾಗುವುದು) ॥ ೧೮ ॥

ವ ॥ ಎಂಬುದುಂ ಶಲ್ಯನ ನುಡಿದ ನುಡಿಯನವಧಾರಿಸಿ ತನ್ನ ಮನದೊಳೆ ಕರ್ಣನಿಂತೆಂದಂ—

ಎನಿತುಂ ಶಲ್ಯನ ಪೇೞ್ದ ಪಾಂಗೆ ತೊದಳಿಲ್ಲಿಂತಾದೊಡಾ ಶಕ್ರಪು- ।
ತ್ರನನಾಂ ಕೊಂದೊಡೆ ಧರ್ಮಪುತ್ರನೞಿಗುಂ ತಾಯೆಂದೆ ಮುಂ ಕೊಂತಿ ಬಂ- ॥
ದಿನಿಸಂ ಪ್ರಾರ್ಥಿಸಿ ಪೋದಳೆನ್ನನದನಾಂ ಮಾಣ್ದಿರ್ದೆನಿದಾರ್ಗಳೊ- ।
ಳ್ಪಿನ ಪೆರ್ಮಾತಿನ ನನ್ನಿ ಬನ್ನದೊಳೊಡಂಬಟ್ಟಿರ್ಪುದಂ ಮಾೞ್ಪೆನೇ ॥ ೧೯ ॥

---

ಎಂಬುದುಂ — ಇಂತೆಂದು ವಚನಂ ॥ ಎಂಬುದುಂ=ಹೀಗೆನ್ನಲು, ಶಲ್ಯನು ನುಡಿದ=ಶಲ್ಯನು ಹೇಳಿದ, ನುಡಿಯಂ=ಮಾತನ್ನು, (ಪ್ರಥಮಾರ್ಥದಲ್ಲಿ ಷಷ್ಠಿ= ಅಥವಾ, ನುಡಿದ ಶಲ್ಯನ ನುಡಿಯಂ ಎಂದೂ ಹೇಳಬಹುದು) ಅವಧಾರಿಸಿ= ಮನಸ್ಸಿಗೆ ತಂದು, ಕರ್ಣಂ=ಕರ್ಣನು, ತನ್ನ ಮನದೊಳೇ ಇಂತೆಂದಂ=ತನ್ನ ಮನಸ್ಸಿನಲ್ಲೇ ಹೀಗೆಂದನು ॥

ಎನಿತುಂ — ಇಂತೆಂದು ಮ. ವಿ ವೃತ್ತಂ ॥ ಎನಿತುಂ=ಎಷ್ಟಾದರೂ (ಎಷ್ಟೆಷ್ಟು ಯೋಚಿಸಿದರೂ, ಶಲ್ಯನ ಪೇೞ್ದ=ಮದ್ರಭೂಪಾಲನು ಹೇಳಿದ; ಪಾಂಗೆ= ರೀತಿಯು, ತೊದಳಿಲ್ಲ=ಸುಳ್ಳಾದುದಲ್ಲ, ಇಂತಾದೊಡೆ=ಅವನು ಹೇಳಿದ ರೀತಿಯು ಗುರಿಹಿಡಿದೆನಾದರೆ, ಆಂ=ನಾನು (ಕರ್ಣನು) ಶಕ್ರಪುತ್ರನಂ=ಇಂದ್ರನ ಸುಕುಮಾರನಾದ ಅರ್ಜುನನನ್ನು; ಕೊಂದೊಡೆ=ನಾಶಪಡಿಸಿದೆನಾದರೆ, ಧರ್ಮಪುತ್ರಂ=ಯುಧಿಷ್ಠಿರನು, ಅೞಿಗುಂ=ನಾಶಹೊಂದುವನು, ಮುಂ=ಮೊದಲು, ಕೊಂತಿ=ಕುಂತೀದೇವಿಯು, ಬಂದು=ನನ್ನ ಬಳಿಗೆ ಚಿತ್ತೈಸಿ, ತಾಯೆಂದೆ=ನಿನ್ನನ್ನು ಪಡೆದವಳು ತಾನೆಂದೇ; ಎನ್ನಂ=ನನ್ನನ್ನು ಕುರಿತು (ನನ್ನೊಡನೆ) ಇನಿಸಂ=(ಸೋದರರನ್ನು ಹೊಂದಿಕೊಂಡು ಇರಬೇಕು ಎಂಬ) ಇಷ್ಟು ವಿಚಾರವನ್ನು, ಪ್ರಾರ್ಥಿಸಿ=ಯಾಚಿಸಿಕೊಂಡು, ಪೋದಳ್=ಹೋದಳು, ಆಂ=ನಾನು, ಅದಂ=ಆ ಬೇಡಿಕೆಯನ್ನು; ಮಾಣ್ದಿರ್ದೆಂ=ನಿರಾಕರಿಸಿದ್ದೆನು, ಇದಾರ್ಗಳ್=ಆದರೂ ಈ ಕರ್ಣನು ಜೀವಿಸಿರುವ ತನಕ, ಒಳ್ಪಿನ=ಒಳ್ಳೆಯ ಸ್ವಭಾವದ, ಪೆರ್ಮಾತಿನ=ದೊಡ್ಡಸ್ತಿಕೆಯ ಮಾತಿನ; ನನ್ನಿ=ಸತ್ಯವು; ಬನ್ನದೊಳ್=ಭಂಗದಲ್ಲಿ (ತಪ್ಪಿಹೋಗುವುದರಲ್ಲಿ) ಒಡಂಬಟ್ಟು=ಸಮ್ಮತಿಸಿ (ಬೆರೆತು) ಇರ್ಪುದಂ=ಇರುವುದನ್ನು, ಮಾೞ್ಪೆನೇ=ಮಾಡುವೆನೇ. (ಯೋಚಿಸಿ ನೋಡಿದರೆ ಶಲ್ಯನ ಮಾತು ಯಥಾರ್ಥವಾದುದು, ಅಂತೆಯೇ ಗುರಿಹಿಡಿದೆನಾದರೆ ಅರ್ಜುನನು ನಾಶಹೊಂದುವನು; ಅದು ಸಂಭವಿಸಿದರೆ ಯುಧಿಷ್ಠಿರನು ಜೀವಿಸಿರಲಾರನು, ಕುಂತಿಯು ಬಂದು ನನ್ನ ಜನ್ಮವೃತ್ತಾಂತವನ್ನು ತಿಳಿಸಿ ಸೋದರರೊಂದಿಗೆ ಬಾಳೆಂದಿದ್ದಳು ಅದನ್ನು ಮೀರಿದ್ದೆನಾದರೂ ತಾಯಿಗೆ ವಚನ

ತನಗುಱುವಂತುಟಾಗೆ ಕಡುನನ್ನಿಯ ಪೆಂಪುಮನಾಂತು ಭೂಭುಜರ್– ।
ತನಗಿನಿತೂನಮಾಗೆ ಮೆಱೆದಾ ಭುಜವೀರ್ಯಮನಾಂತು ಮಾಣ್ಬುದೇಂ ॥
ತನಗುಱುವೊಂದು ನನ್ನಿಯನೆ ಪೂಣ್ದು ಕರಂ ಪಿರಿದುಂ ಬಲಸ್ಥನ– ।
ಪ್ಪನನೆ ಕಱುತ್ತು ಕಾದಿ ನೆಗೞ್ದಾತನೆ ನನ್ನಿಯಬೀರದಾಗರಂ ॥ ೨೦ ॥

---

ವನ್ನು ಕೊಟ್ಟಿದ್ದೆನಷ್ಟೆ ! ಸತ್ಯಕ್ಕೆ ಭಂಗವುಂಟಾದರೆ ಘನತೆಯೇನುಳಿಯಿತು, ಅಂತಹ ಸಂದರ್ಭವನ್ನು ತಂದುಕೊಂಡು ನಾನೆಂದಿಗೂ ಬಾಳತಕ್ಕವನಲ್ಲವಲ್ಲಾ ಎಂಬುದು ಸಾರಾಂಶವು) ।' ೧೯ ॥

ತನಗೆ — ಇಂತೆಂದು ೨೦ ಮಾಲಾವೃತ್ತಂ ॥ ಭೂಭುಜರ್=ಕ್ಷತ್ರಿಯರು ಯಾರಾದರೂ ಸರಿಯೆ, ತನಗೆ ಉಱುವ=ತನಗೆ ಹೊಂದಿಕೆಯಾಗುವ, ಅಂತುಟು ಆಗೆ=ಹಾಗಾಗಲು, ಕಡುನನ್ನಿಯ=ಪರಮಾರ್ಥದ, ಪೆಂಪುಮಂ=ಯೋಗ್ಯತೆಯನ್ನು, ಆಂತು=ಹೊಂದಿಕೊಂಡು; ತನಗೆ ಇನಿತು ಊನಮಾಗೆ=ತನಗೆ (ಅನುಕೂಲತೆಯು) ಹೊಂದಿಕೆಯು ಸ್ವಲ್ಪ ಕಡಿಮೆಯಾಗಲು, ಆ ಭುಜವೀರ್ಯಮಂ= ಕ್ಷತ್ರಿಯಜಾತಿಗೆ ಒಪ್ಪುವುದಾದ ಆ ಬಾಹುವಿಕ್ರಮವನ್ನು, ಆಂತು=ಹೊಂದಿಕೊಂಡು, ಮೆಱೆದು=ಪ್ರಸಿದ್ಧಿಗೆ ಬಂದು; ಮಾಣ್ಬುದೇಂ=ಮೊದಲು ಹೊಂದಿದ ಕಡು ನನ್ನಿಯ ಪೆಂಪನ್ನು ಅಲ್ಲಗಳೆಯುವುದೇನು? ತನಗೆ ಉಱುವ ಒಂದು ನನ್ನಿಯನೆ=ತನಗೆ ಹೊಂದಿಕೆಯಾಗುವಂತಹ ಸತ್ಯವನ್ನೇ; (ತನ್ನಿಂದ ಪಾಲಿಸಲು ಸಾಧ್ಯವಾಗುವಂತಹ ಸತ್ಯವನ್ನು ಮಾತ್ರ) ಕರಂ=ಸರಿಯಾಗಿ, ಪೂಣ್ದು=ಪ್ರತಿಜ್ಞೆಮಾಡಿ; ಪಿರಿದುಂ=ಅತಿಯಾಗಿ (ಬಹುಮಟ್ಟಿಗೂ) ಬಲಸ್ಥನಪ್ಪನನೆ=ಬಲಶಾಲಿಯಾಗಿರುವವನನ್ನೇ, ಕಱುತ್ತು=(ಹಟಹಿಡಿದು) ಆವೇಶಗೊಂಡು, ಕಾದಿ=ಹೋರಾಡಿ; ನೆಗೞ್ದಾತನೇ=ಪ್ರಸಿದ್ಧಿಗೆ ಬಂದವನು ಮಾತ್ರವೇ; ನನ್ನಿಯ=ಸತ್ಯದ (ಹಾಗೂ) ಬೀರದ=ಪರಾಕ್ರಮದ, ಆಗರಂ=ಉತ್ಪತ್ತಿಸ್ಥಾನನು [ನೆರವೇರಿಸಲು ಸಾಧ್ಯವಾಗಬಹುದೆಂದು ಕಂಡು ಒಮ್ಮೆ ಹೇಳಿದ ನುಡಿಯನ್ನು (ಸತ್ಯವನ್ನು) ಪಾಲಿಸುವುದು ಕಷ್ಟವೆಂದು ತೋರಲು ಕೈಮಾಡುತ್ತ ಅದನ್ನಲ್ಲೇ ಬಿಡುವುದು ಕ್ಷತ್ರಿಯನಿಗೆ ಒಪ್ಪತಕ್ಕ ವಿಚಾರವಲ್ಲ. ತಾನು ಮಾಡುವೆನೆಂದು ಹೇಳಿದ್ದನ್ನು ಪಾಲಿಸುವುದಕ್ಕಾಗಿ ಎಂತಹ ಕಠಿನಪ್ರಸಂಗವೊದಗಿದರೂ ಎದೆಗುಂದದೆ ಅಧಿಕಬಲಶಾಲಿಗಳೊಡನೆ ಹೋರಾಡಿಯಾದರೂ ತನ್ನ ಮಾತನ್ನು ಹಾಗೂ ಪೌರುಷವನ್ನು ಕಾಪಾಡಿಕೊಳ್ಳುವಾತನೇ ವೀರನೆನಿಸುವನು ಇಲ್ಲಿ ಕರ್ಣನ ಅಂತರಂಗವು ಯೋಚನಾಮಗ್ನವಾಗಿ ನಿದಾನವಾಗಿ ನೆಲೆಮುಟ್ಟುವುದನ್ನು ಕಾಣುವೆವು. ನಾನು ಅಮ್ಮನಿಗೆ ಮಾತು ಕೊ

ಅಱಿಯರ್ ಪಾಂಡವರೆನ್ನನಿನ್ನುಮಱಿಪಲ್ ನೀಮೆಂದದಂ ಚಕ್ರಿಗಾ- ।
ನಱಿಪಿರ್ದೆಂ ಪೃಥೆಯುಂ ಮದೀಯಸುತರೊಳ್ ವೈಕರ್ತನಂ ನನ್ನಿಯಂ ॥
ನಿಱಿಪಲ್ಕಾರ್ಕರ್ಮಮೋಘಮೆಂದು ಮನದೊಳ್ನಂಬಿರ್ದಳಿನ್ನಿಲ್ಲಿ ಪೆಂ- ।
ಪೆಱಕಂಬೆತ್ತಿರೆ ಕಾವೆನೆನ್ನ ನುಡಿಯಂ ಕೆಯ್ಕೊಂಡ ಕಟ್ಟಾಯಮಂ ॥ ೨೧ ॥

---

ಟ್ಟಿನು ಈಗ ಸ್ವಾಮಿಯು ಕಷ್ಟಕಾಲದಲ್ಲಿ ಆತನಿಗೆ ನಾನು ಒದಗಬೇಡವೆ? ಸತ್ಯವನ್ನು ಪಾಲಿಸಿಕೊಂಡು ಹೋರಾಡಿ ಕೀರ್ತಿ ಸಂಪಾದಿಸುವುದೇ ನನ್ನ ಧ್ಯೇಯವು. ಇದೇ ಸತ್ಯಪ್ರತಿಜ್ಞನಾದ ವೀರನ ಕಾರ್ಯವು] ॥ ೨೦ ॥

ಅಱಿಯರ್ — ಇಂತೆಂದು ಮ ವಿ. ವೃತ್ತಂ ॥ ಪಾಂಡವರ್ = ಆ ಯುಧಿಷ್ಠಿರಾದಿಗಳ್, ಎನಂ = ಕುಲಗೋತ್ರವೇ ಮೊದಲಾದ ಯಾವ ವಿಚಾರವಾಗಿಯೂ ನಾನಾರೆಂಬುದನ್ನು; ಇನ್ನುಂ ಅಱಿಯರ್ = ಇನ್ನೂ ತಿಳಿದಿಲ್ಲ, ನೀವ್ = ನೀವು; ಅದಂ = ನನ್ನ ಜನ್ಮ ವಿಚಾರವನ್ನು; ಅಱಿಪಲ್ = ತಿಳಿಸಬಾರದು, [ಅಱಿಪಲ್ = ಇದು ನಿಷೇಧಾರ್ಥದಲ್ಲಿ ಬಂದ ಅಲ್‌ಪ್ರಯೋಗವು = ಸತತಂ ಮಧ್ಯಮಪುರುಷ ಪ್ರತಿಷೇಧದ ವಿಧಿಯೊಳಂ ಪ್ರಯೋಜನವಸ್ವಾಪ್ತ । ಶ್ರಿತಹೇತುಕ್ರಿಯೆಯೊಳಮು । ನ್ವಿತಮಲ್ಕ್ರಿಯೆತಾಂ ಕ್ರಿಯಾರ್ಥಮಪ್ಪೆಡೆಗಳೊಳಂ" ॥ ಶ. ಮ ದ ಸೂತ್ರ ॥ ೨೩೩ ॥ ಪ್ರತಿಷೇಧದೊಳಂ ಕೆಲಬರ । ಮತದಿಂದಲ್ ವರ್ತಿಕುಂ ॥ ಶ. ಸ್ಮೃ ॥ ೯೪ ॥] ಎಂದು = ಎಂಬುದಾಗಿ; ಆಂ = ನಾನು, ಚಕ್ರಿಗೆ = ಚಕ್ರವನ್ನು ಆಯುಧವಾಗಿ ಧರಿಸಿರುವ ಕೃಷ್ಣನೊಂದಿಗೆ, ಅಱಿಪಿರ್ದೆಂ = ತಿಳಿಸಿದ್ದೆನು; ಪೃಥೆಯುಂ = ಕುಂತೀದೇವಿಯಾದರೂ (ಪೃಥೆ = ಯದುವಂಶದ ಶೂರರಾಜನ ಮಗಳು ಆವಳ ಅಂಕಿತ ನಾಮವು ಪೃಥೆಯೆಂದು. ಶೂರರಾಜನ ಸೋದರತ್ತೆಯ ಮಗನಾದ ಕುಂತಿಭೋಜನು ಕುಂತಿ ದೇಶದಲ್ಲಿ ರಾಜ್ಯಭಾರ ಮಾಡುತ್ತಿದ್ದನು. ಇವನಿಗೆ ಮಕ್ಕಳಿಲ್ಲದುದರಿಂದ ಶೂರನ ಮಗಳಾದ ಪೃಥೆಯನ್ನು ಮಗಳಾಗಿ ಸಾಕಿದ್ದರಿಂದ ಆಕೆಗೆ ಕುಂತಿ ಎಂಬ ಅಡ್ಡ ಹೆಸರು ಬಂತು.) ಮಧೀಯ ಸುತರೊಳ್ = ನನ್ನ ಮಕ್ಕಳಲ್ಲಿ; ವೈಕರ್ತನಂ = ಸೂರ್ಯಸುತನಾದ ಕರ್ಣನು, ನನ್ನಿಯಂ = ಸತ್ಯವನ್ನು; ನಿಱಿಪಲ್ಕೆ = ನೆಲೆಗೊಳಿಸುವುದಕ್ಕೆ (ಪರಿಪಾಲಿಸಲು) ಅಮೋಘಂ ಆರ್ಕಂ = ಹೆಚ್ಚಿನ ಯೋಗ್ಯತೆಯುಳ್ಳವನು; ಎಂದು = ಎಂಬುದಾಗಿ; ಮನದೊಳ್ = ಹೃದಯದಲ್ಲಿ; ನಂಬಿರ್ದಳ್ = ವಿಶ್ವಾಸವುಳ್ಳವಳಾಗಿದ್ದಳು; ಇನ್ನು ಇಲ್ಲಿ = ಈ ಸಂದರ್ಭದಲ್ಲಿ ನಾನೀಗ; ಪೆಂಪು = ಗೌರವವು; (ಹೆಚ್ಚಿನ ಯೋಗ್ಯತೆಯು) ಎಱಕಂಬೆತ್ತಿರೆ = ಐಕ್ಯಹೊಂದುವ ಹಾಗೆ; ಎನ್ನ ನುಡಿಯಂ = ನನ್ನ ವಾಗ್ದಾನವನ್ನೂ; ಕೆಯ್ಕೊಂಡ = ಸ್ವೀಕರಿಸಿದ; ಕಟ್ಟಾಯಮಂ = ಹೆಚ್ಚಿನ ಪೌರುಷವನ್ನೂ; ಕಾವೆಂ = ರಕ್ಷಿಸಿಕೊಳ್ಳುವೆನು ॥ ೨೧ ॥

ಎಂಬುದನೆ ಬಗೆದು ಪೆಱತನ- ।
ಣಂ ಬಗೆಯದೆ ಮದ್ರಪತಿಯನೆಂದಂ ಮುಂತೊ- ॥
ಟ್ಟಂಬನದನುಗಿದು ಕುಂದಿಸಿ- ।
ದಂ ಭಯದಿಂ ಕರ್ಣನೆಂದು ಲೋಕಂ ನಗದೇ ॥ ೨೨ ॥
ಉಡುಗುಡುಗುಡುಗೆಂದಿಸೆ ಬಱಿ- ।
ಸಿಡಿಲೆಱಿಪಂತೆಱಿಪ ಸರಲ ಬರವಂ ಕಂಡಾ- ॥
ಗಡೆ ಚಕ್ರಿ ನೆಲನೊಳೆಣ್ಬೆರ- ।
ಲಡಂಗೆ ನರರಥಮನೊತ್ತಿದಂ ನಿಪುಣತೆಯಿಂ ॥ ೨೩ ॥
ಒತ್ತುವುದುಂ ಶರಮಿರದೆ- ।
ಯ್ದುತ್ತೆ ಕಿರೀಟಿಯ ಕಿರೀಟಮಂ ಕೊಱಿದೊಡೆ ಪ- ॥
ರ್ವಿತ್ತು ಭಯಮಿಂದ್ರನಂ ಮು- ।
ತ್ತಿತ್ತಬಲೀಶ್ವರನನಾಗಳಾ ಸಂಕಟದೊಳ್ ॥ ೨೪ ॥

---

ಎಂಬುದನೆ — ಇಂತೆಂದು ಕಂದಂ ॥ ಎಂಬುದನೆ = ಈ ರೀತಿಯನ್ನೇ, ಬಗೆದು = ನಿಶ್ಚೈಸಿ; ಪೆಱತಂ = ಬೇರೆ ವಿಧವನ್ನು; ಅಣಂ = ಸ್ವಲ್ಪವೂ, ಬಗೆಯದೆ = ಯೋಚಿಸದೆ; ಮದ್ರಪತಿಯಂ = ಶಲ್ಯನನ್ನು ಉದ್ದೇಶಿಸಿ; ಕರ್ಣಂ = ಅಂಗಾಧಿಪತಿಯಾದ ಕರ್ಣನು; ಭಯದಿಂ = ಹೆದರಿಕೆಯಿಂದ, ಮುಂ = ಮೊದಲು, ತೊಟ್ಟ = ಸಂಧಿಸಿದ, ಅಂಬಂಅದಂ = ಆ ಬಾಣವನ್ನು; ಉಗಿದು = ಹಿಂದಕ್ಕೆ ಸೆಳೆಕೊಂಡು [ಉಗಿ (ಧಾ) ಆಕರ್ಷಣೇ] ಕುಂದಿಸಿದಂ ಕಡಿಮೆಶಕ್ತಿಯುಳ್ಳದ್ದನ್ನಾಗಿ ಮಾಡಿದನು; ಎಂದು = ಹೀಗೆ ಹೇಳಿಕೊಂಡು; ಲೋಕಂ = ಮಂದಿಯು; ನಗದೇ = ಪರಿಹಾಸವಾದಲಾರದೆ? ॥ ೨೨ ॥

ಉಡುಗು — ಇಂತೆಂದು ಕಂದಂ ॥ ಉಡುಗುಉಡುಗುಉಡುಗು = (ವೈರಿಯ ಬಲವನ್ನು) ಇಲ್ಲದಾಗಿಸು; ಎಂದು ಎಂಬುದಾಗಿ; ಇಸೆ = ಹೊಡಲು, ಬಱಿಸಿಡಿಲ್ = ಭಯಂಕರವಾದ ಸಿಡಿಲು; ಎಱಿಪಂತೆ = ಬೀಳುವಹಾಗೆ, ಎಱಿಪ = ಬಂದು ಬೀಳುವ; ಸರಲ = ಬಾಣದ, ಬರವಂ = ಬರುವಿಕೆಯನ್ನು; ಕಂಡು = ನೋಡಿ; ಆಗಡೆ = ಆಗಳೆ (ಸಮಯ ವಿಳಂಬವಿಲ್ಲದೆ ಕೂಡಲೆ) ಚಕ್ರಿ = ಕೃಷ್ಣನು; ನೆಲನೊಳ್ = ನೆಲದಲ್ಲಿ; ಎಣ್ಬೆರಲ್ = ಎಂಟು ಬೆರಳುಗಳ ಅಗಲದಷ್ಟು; ಅಡಂಗೆ = ಅಡಗುವ ಹಾಗೆ (ಕುಗ್ಗುವಂತೆ) ನಿಪುಣತೆಯಿಂ = ಚಾತುರ್ಯದಿಂದ; ನರರಥಮಂ = ಅರ್ಜುನನ ತೇರನ್ನು; ಒತ್ತಿದಂ = ತಗ್ಗಿಸಿದನು ॥ ಕುತ್ತಿಗೆಗೆ ಹಿಡಿದ ಗುರಿಯು ತಲೆಯ ಮೇಲಿನಿಂದ ಹೋಗಲು ಬೇಕಾದಂತೆ ರಥವನ್ನು ತಗ್ಗಿಸಿದನು ॥ ೨೩ ॥

ಒತ್ತುವುದುಂ — ಇಂತೆಂದು ಕಂದಂ॥ ಒತ್ತುವುದುಂ = ಹಾಗೆ ಕೃಷ್ಣನು ತೇರನ್ನು

ಒಳಗಱಿಯದೆ ಕೌರವಬಳ– ।
ಜಳನಿಧಿ ಬೊಬ್ಬಿಱಿದು ಮೇಲುದಂ ಬೀಸಿದೊಡು– ॥
ಚ್ಚಳಿಸಿದ ಮಕುಟದ ಮಣಿಗಳ ।
ಪೊಳೆಪುಗಳಿಂದುಳ್ಕಮೆಟ್ಟಿದ್ದವೆಂಟುಂ ದೆಸೆಯೊಳ್ ॥ ೨೫ ॥

ವ ॥ ಅಂತು [ಕಿರೀಟಿಯ] ರತ್ನಮಕುಟಮರಾತಿಶಾತಶರದಿನುರುಳ್ವುದು ಮಳಿನೀಳೋಜ್ಜ್ವಳಸಹಸ್ರಕುಂತಳಂಗಳ್ ಪರಕಲಿಸಿ ಬಂದು ಪೊಱ ಮುಯ್ವನಳ್ಳಿಱಿಯೆ ಪಚ್ಚಗಂಟಿಕ್ಕಿ ಗಾಂಡೀವಧನ್ವಂ ಸನ್ನದ್ಧನಾಗಿ ರ್ಪನ್ನೆಗಂ—

---

ನೆಲಕ್ಕೆ ಒತ್ತುವಷ್ಟರಲ್ಲೇ; ಶರಂ = ಬಾಣವು, ಇರದೆ = ಕೂಡಲೆ; ಎಯ್ದುತ್ತೆ = ಮುಂದುವರಿಯುತ್ತ, ಕಿರೀಟಿಯ ಕಿರೀಟಮುಂ = ಅರ್ಜುನನ ಕಿರೀಟವನ್ನು; ಕೊಱೆದೊಡೆ = ತುಂಡಿಸಲು [ಕೊಱೆ (ಧಾ) ಖಂಡನೇ, ಧಾನ್ಯಭೇದೇಚ. (ಕೊರೆ = ನಿದ್ರಾಂಗಧ್ವನೌ) ಆಗಳ್ = ಆ ವೇಳೆಗೆ ಉಂಟಾದ, ಭಯಂ = ಹೆದರಿಕೆಯು, ಇಂದ್ರನಂ = ದೇವೇಂದ್ರನನ್ನು, ಪರ್ವಿತ್ತು = ಹರಡಿಕೊಂಡಿತ್ತು, ಅಟಿಲ್ = ವ್ಯಸನವು, ಈಶ್ವರನಂ = ಶಿವನನ್ನು, ಮುತ್ತಿತ್ತು = ಅವರಿಸಿಕೊಂಡಿತು; ಆ ಸಂಕಟದೊಳ್ = ಬಹುಕಷ್ಟಕರವಾದ ಆ ಸಂದರ್ಭದಲ್ಲಿ ॥ ೨೪ ॥

ಒಳಗಱಿಯದೆ — ಇಂತೆಂದು ಕಂದಂ ॥ ಒಳಗು + ಅಱಿಯದೆ = ಅದೇನಿರಬಹುದೋ ಎಂಬ ಗುಟ್ಟನ್ನರಿಯದೆ, ಕೌರವಬಳಜಳನಿಧಿ = ಕೌರವಸೈನ್ಯವೆಂಬ ಸಮುದ್ರವು, ಬೊಬ್ಬಿಱಿದು = ಮೊರೆಯುತ್ತ, ಮೇಲುದಂ = ಅಂಗವಸ್ತ್ರವನ್ನು (ಮೇಲುಹೊದಿಕೆ) ಬೀಸಿದೊಡೆ = ಬೀಸಿಕೊಳ್ಳಲು, ಉಚ್ಚಳಿಸಿದ = ಮೇಲಕ್ಕೆ ಸಿಡಿದ, ಮಕುಟದ = ಕಿರೀಟದ, ಮಣಿಗಳ = ರತ್ನಗಳ, ಪೊಳೆಪುಗಳಿಂದ = ಕಾಂತಿಗಳ ಮೂಲಕ (ಹೊಳಪುಗಳಿಂದ) ಎಂಟುಂದೆಸೆಯೊಳ್ = ಅಷ್ಟದಿಕ್ಕುಗಳಲ್ಲೂ (ಎಂದರೆ ಎಲ್ಲೆಲ್ಲಿಯೂ) ಉಳ್ಕಂ = ಕೊಳ್ಳಿಗಳು ("ಉಲ್ಕಾಸ್ಯಾನ್ನಿರ್ಗತಜ್ವಾಲಾ" ಎಂದು ಅಮರವು) ಎಟ್ಟಿದುವು = ಎದ್ದುವು ॥ ರೂಪಕ ಮತ್ತು ಅತಿಶಯೋಕ್ತ್ಯಲಂಕಾರಗಳು ॥ ೨೫ ॥

ಅಂತು — ಇಂತೆಂದು ವಚನಂ ॥ ಅಂತು = ಹಾಗೆಯೇ, ಕಿರೀಟಿಯ = ಅರ್ಜುನನ; ರತ್ನಮಕುಟಂ = ರತ್ನಖಚಿತವಾದ ಕಿರೀಟವು, ಅರಾತಿಶಾತಶರದಿಂ = ಅರಾತಿ = ವೈರಿಯಾದ ಕರ್ಣನ; ಶಾತ = ಹರಿತವಾದ, ಶರದಿಂ = ಬಾಣದಿಂದ, ಉರುಳ್ವುದುಂ = ಹೊರಳುತ್ತಿರಲು; ಅಳಿನೀಳೋಜ್ವಳಸಹಸ್ರ ಕುಂತಳಂಗಳ್, ಅಳಿನೀಳ = ತುಂಬಿಗಳಂತೆ ನೀಲವೂ; ಉಜ್ವಲ = ಶೋಭಾಯಮಾನವೂ ಆಗಿರುವ; ಸಹಸ್ರಕುಂತಳಂಗಳ್ = (ತಲೆಯ) ಅಸಂಖ್ಯಾತವಾದ ಕೂದಲುಗಳು; ಪೊಱಮುಯ್ವಂ = ಹೆಗಲ ಹಿಂಭಾಗ

ಪುರಿಗಣೆಯುಪ್ಪ ಕಾರಣದಿನಂತದು ತಪ್ಪಿದೆನೆಂದು ನೊಂದು ಪ- ।
ಲ್ಮೊರೆದಹಿರೂಪದಿಂ ಮಗುಟ್ದಿ ಬಂದಿನ ನಂದನನಲ್ಲಿಗೆನ್ನನಂ- ॥
ತರಿಸದೆ ತೊಟ್ಟು ಬೇಗಮಿಸು ವೈರಿಯನೀಗಳೆ ಕೊಂದಪೆಂ ರಸಾಂ- ।
ಬರಧರಣೀವಿಭಾಗದೊಳಗಾವೆಡೆವೊಕ್ಕೊಡಮಂಗನಾಯಕಾ ॥ ೨೬ ॥

ವ ॥ ಎಂಬುದುಂ ನೀನಾರ್ಗೇನೆಂಬೆಯದಾವುದು ಕಾರಣದಿಂದಮೆನ್ನ ದೊ-
ಣೆಯಂ ಪೊಕ್ಕಿರ್ದೆಯೆಂದೊಡಾನಶ್ವಸೇನನೆಂಬ ಪನ್ನಗನೆನೆಂದು ತನ್ನ
ವೈರಕಾರಣಮನಱಿಯೆ ಪೇೞ್ದೊಡೆ ದರಹಸಿತಪದನಾರವಿಂದನಾಗಿ-

---

ವನ್ನು; ಪರಕಲಿಸಿ ಬಂದು = ವ್ಯಾಪಿಸಿಕೊಂಡು ಬಂದು; ಅಳ್ಳಿಱಿಯೆ = ಚಲಿಸುತ್ತಿರಲು; [ಅಳ್ಳು + ಇಱಿ (ಧಾತು) ಸ್ಪಂದನೇ] ಪಚ್ಚುಗಂಟಿಕ್ಕಿ = ಅವನ್ನು ಪ್ರತ್ಯೇಕ ವಿಭಾಗಿಸಿ ಕಟ್ಟಿಕೊಂಡು; ಗಾಂಡೀವಧನ್ವಂ = ಗಾಂಡೀವವೆಂಬ ಬಿಲ್ಲುಳ್ಳವನಾದ ಅರ್ಜುನನು [ಗಾಂಡೀವ-ಒಂದು ದಿವ್ಯ ಧನುಸ್ಸು. ಅದು ಮೊತ್ತಮೊದಲು ಬ್ರಹ್ಮನಲ್ಲಿತ್ತು. ಬಳಿಕ ಇಂದ್ರನಿಗೂ ತರುವಾಯ ವರುಣನಿಗೂ ದೊರಕಿತು ಅದನ್ನು ಬಳಿಕ ಅಗ್ನಿಯು ವರುಣ ನಿಂದ ಪಡಕೊಂಡನು. ಖಾಂಡವವನದಾಹಸಮಯದಲ್ಲಿ ಅಗ್ನಿಯು ತನಗೆ ಉಪಕಾರ ಮಾಡಿದ ಅರ್ಜುನನಿಗೆ ಅದನ್ನು ಕೊಟ್ಟನು. ಇದರ ಮಹಿಮೆಯಿಂದ ಆತನು ಎಲ್ಲರನ್ನೂ ಜಯಿಸುತ್ತ ಬಂದನು. ಇದರಿಂದಲೇ ಅರ್ಜುನನಿಗೆ ಗಾಂಡೀವಿಯೆಂಬ ಹೆಸರು ಬಂತು.] ಸನ್ನದ್ಧನಾಗಿ = ಯುದ್ಧಮಾಡಲು ತಯಾರಾಗಿ, ಇರ್ಪ ಅನ್ನೆಗಂ = ಇರುವ ವೇಳೆಗೆ ॥

ಪುಱಿಗಣೆಯುಪ್ಪ — ಇಂತೆಂದು ಚಂ. ಮಾಲಾವೃತ್ತಂ ॥ ಅದು = ಆ ಬಾಣವು, ಪುರಿಗಣೆಯುಪ್ಪ ಕಾರಣದಿಂ = ಸುರಿಗಣೆಯಾದ ಕಾರಣದಿಂದ, ಅಂತು = ಆ ರೀತಿ, ತಪ್ಪಿದೆಂ = ಗುರಿಮುಟ್ಟದೆ ಹೋದೆನು; ಎಂದು = ಎಂಬುದಾಗಿ, ನೊಂದು = ವ್ಯಸನ ಪಟ್ಟು; ಪಲ್ಮೊರೆದು = ಹಲ್ಲುಕಡಿಯುತ್ತ; ಅಹಿರೂಪದಿಂ = ಸರ್ಪವಾಗಿ; ಇನನಂದನ ನಲ್ಲಿಗೆ = ಕರ್ಣನ ಬಳಿಗೆ; ಮಗುಟ್ದಿ ಬಂದು = ಪುನಃಬಂದು; ಅಂಗನಾಯಕಾ = ಅಂಗಾ ಧಿಪತಿಯೇ ನೀನು; ಅಂತರಿಸದೆ = ತಡಮಾಡದೆ; (ಬೇರೇನೂ ಯೋಚಿಸದೆ) ಬೇಗಂ = ಕೂಡಲೆ; ಎನ್ನಂ = ನನ್ನನ್ನು; ತೊಟ್ಟು ಇಸು - ಸಂಧಿಸಿ ಹೊಡೆ; ರಸಾಂಬರಧರಣೀ ವಿಭಾಗದೊಳಗೆ = ಪಾತಾಳ ಆಕಾಶ ಭೂಮಿಗಳಲ್ಲಿ । ಆವಎಡೆ = ಯಾವ ಭಾಗದಲ್ಲಿ ಹೋಗಿ; ಪೊಕ್ಕೊಡಂ = ಅಡಗಿಕೊಂಡರೂ; ವೈರಿಯಂ = ವಿರೋಧಿಯಾದ ಅರ್ಜುನ ನನ್ನು, ಈಗಳೆಕೊಂದಪೆಂ = ಈಗಲೇ ನಾಶಪಡಿಸುವೆನು ॥ ೨೬ ॥

ಎಂಬುದುಂ — ಇಂತೆಂದು ವಚನಂ ॥ ಎಂಬುದುಂ = ಆ ಸರ್ಪವು ಹೀಗೆ ಹೇಳಿಕೊಳ್ಳಲು; (ಕರ್ಣನು) ನೀಂಆರ್ಗೆ = ನೀನಾರು (ನಿನ್ನ ಕುಲಗೋತ್ರಗಳೇನು? ತಂದೆತಾಯಿಗಳಾರು) ಏನೆಂಬೆ = ನೀನು ಹೇಳಿಕೊಳ್ಳುತ್ತಿರುವುದೇನು? ಅದು ಆವುದು

ಶರರೂಪದೊಳಿರೆ ನಿನ್ನಂ ।
ಶರಮೆಂದಾಂ ತೊಟ್ಟೆನಱಿದು ತುಡುವೆನೆ ನಿನ್ನಂ ॥
ನೆರದೊಳ್ ಕೊಲ್ವಂತೆನಗೇ- ।
ನರಿಯನೆ ಗಾಂಡೀವಧನ್ವನೆಂಬುದುಮಾಗಳ್ ॥ ೨೭ ॥
ನೀನ್ನಿನ್ನ ಪಗೆಯನಾರ್ಪೊಡ- ।
ದನ್ನಱಪೆನೆ ನೆಗೆದು ಬರ್ಪ ವಿಷಪನ್ನಗನಂ ॥
ಪನ್ನತನನೆಡೆಯೊಳರಿಗಂ ।
ತನ್ನಯ ಗರುಡಾಸ್ತ್ರದಿಂದೆ ಕುಱಿದಱಿದಱಿದಂ ॥ ೨೮ ॥

---

ಕಾರಣದಿಂದಂ=ಯಾವ ನಿಮಿತ್ತವಾಗಿ, ಎನ್ನ ದೊಣೆಯಂ=ನನ್ನ ಬತ್ತಳಿಕೆಯನು ಪೊಕ್ಕು ಇರ್ದೆ ಎಂದೊಡೆ=ಸೇರಿಕೊಂಡಿದ್ದೆ ಎಂದು ಕೇಳಲು, ಆಂ ಅಶ್ವಸೇನಂ ಎಂಬ ಪನ್ನಗನೆಂ=ತಾನು ಅಶ್ವಸೇನನೆಂಬ ಉರಗನಾಗಿರುವೆನು' ಪನ್ನಗನೆಂ= [ವಿನುತಗುಣವಚನದೊಳ್ ಸ । ರ್ವನಾಮದೊಳ್ ಸಂಖ್ಯೆಯೊಳ್ ಪ್ರವರ್ತಿಪುವಾ ಖ್ಯಾ । ತನಿಯುಕ್ತ ವಿಭಕ್ತಿಗಳವು । ಘನತರ ಸಂಸ್ಕೃತ ಗುಣೋಕ್ತಿಯೊಳಮುವು ದಿರ್ಕರ್ುಂ ॥ ವೃತ್ತಿ ॥ ಗುಣವಚನದೊಳಂ ಸರ್ವನಾಮದೊಳಂ ಸಂಖ್ಯೆಯೊಳಂ ಸಂಸ್ಕೃತ ಗುಣೋಕ್ತಿಯೊಳಂ ಆಖ್ಯಾತವಿಭಕ್ತಿಗಳ್ ವರ್ತಿಸುಗುಂ, ಸಮುಚ್ಚಯು ದಿಂ ಗುಣವಚನ ಮುಲ್ಲದಲ್ಲಿಯುಮುಂಟು—(ಪನ್ನಗಂ+ಎಂ=ಪನ್ನಗನೆಂ) ಶ. ಮ. ದ ಸೂತ್ರ ॥ ೨೧೮ ॥ ] ಎಂದು=ಈ ರೀತಿಯಾಗಿ, ತನ್ನ ವೈರಕಾರಣಮಂ=ತನಗೆ ಅರ್ಜುನನೊಂದಿಗಿರುವ ದ್ವೇಷಕ್ಕೆ ಮೂಲವನ್ನು, ಅಱಿಯೆ=ತಿಳಿಯುವ ಹಾಗೆ; ಪೇೞ್ದೊಡೆ=ಹೇಳಲು; (ಕರ್ಣನು) ದರಹಸಿತವದನಾರವಿಂದಂ ಆಗಿ=ಮಂದಹಾಸ ದಿಂದ ಕೂಡಿದ ಮುಖಕಮಲವುಳ್ಳವನಾಗಿ.

ಶರರೂಪದೊಳ್ — ಇಂತೆಂದು ಕಂದಂ ॥ ಶರರೂಪದೊಳ್ ಇರೆ=(ನೀನು) ಬಾಣದ ಆಕೃತಿಯಿಂದಿರಲು; ನಿನ್ನಂಆಂ ಶರಂ ಎಂದು ತೊಟ್ಟೆಂ=ನಾನು ಬಾಣ ವೆಂದೇ ತಿಳಿದು ನಿನ್ನನ್ನು ಬಿಲ್ಲಿನೊಡನೆ ಸಂಧಿಸಿದೆನು; ಅಱಿದು=ಯಾರೆಂಬುದನ್ನು ತಿಳಿದು; ನಿನ್ನಂತುಡುವೆನೆ=ನಿನ್ನನ್ನು ಹೂಡುತ್ತಿದ್ದೆನೆ? (ತಿಳಿಯದೆ ಆದ ಕೆಲಸವದಲ್ಲದೆ ತಿಳಿದಿದ್ದರೆ ತುಡುತ್ತಿದ್ದಿಲ್ಲ) ನೆರದೊಳ್=ಅನ್ಯರ ಸಹಾಯದಲ್ಲಿ, ಕೊಲ್ವಂತೆ=ನಾಶ ಪಡಿಸುವ ಹಾಗೆ; ಗಾಂಡೀವಧನ್ವಂ=ಅರ್ಜುನನು; ಎನಗೆ ಅರಿಯನೆ ಏಂ=ನನಗೆ ಅಸಾಧ್ಯನಾದ ವೈರಿಯೇನು? ]ಅರಿ (ಧಾತು) ಕೃಂತನೇ, ಶತ್ರೌಚ, ಅಱಿ=ಜ್ಞಾನೇ] ಎಂಬುದುಂ=ಹೀಗೆಂದುದು ಮಾತ್ರವಲ್ಲದೆ; ಆಗಳ್=ಕೂಡಲೇ ॥ ೨೭ ॥

ನೀನ್ನಿನ್ನ — ಇಂತೆಂದು ಕಂದಂ ॥ ನೀಂ ಆರ್ಪೊಡೆ=ನೀನು ಸಮರ್ಥನಾಗಿ

ವ ॥ ಆಗಳಂಗರಾಜಂಗೆ ಶಲ್ಯಂ ಕಿನಿಸಿ ಮುಳಿಸಿನೊಳೆ ಕಣ್ಗಾಣದಿಂತಪ್ಪೇಕಗ್ರಾಹಿಗವೊರಂಟಂಗಂ ರಥಮನೆಸಗೆನೆಂದು ವರೂಥದಿಂದಿೞಿದು ಪೋಗೆ—

ಅರಿಗನ ಬಟ್ಟಿನಂಬುಗಳ ಬಲ್ಸರಿ ಸೋಂಕುಗುಮೇೞಿಮೆನ್ನ ತೋ- ।
ಳ್ಸಿರಮೆನಗೆನ್ನ ಬಿಲ್ಲೆ ನೆರಮೆಂದು ವರೂಥತುರಂಗಮಂಗಳಂ ॥
ತುರಿಪದೆ ತಾನೆ ಚೋದಿಸುತುಮಾರ್ದಸುತುಂ ಕಡುಕೆಯ್ದು ಕಾದೆ ಭೀ- ।
ಕರರಥಚಕ್ರಮಂ ಪಿಡಿದು ನುಂಗಿದಳೊರ್ಮೆಯೆ ಧಾತ್ರಿ ಕೋಪದಿಂ ॥ ೨೯ ॥

---

ರುವೆಯಾದರೆ; ನಿನ್ನ ಪಗೆಯುಂ ಅದಂ= ನಿನಗಿರುವ ಆ ವೈರವನ್ನು; ನೆಱಪು= ನೆರವೇರಿಸು; ಎನೆ= ಎಂದು ಹೇಳಲು, ನೆಗೆದು ಬರ್ಪ= ಮೇಲಕ್ಕೆ ಹಾರಿಬರುವ; ಪನ್ನತನಂ= ವಿಕ್ರಮಿಯಾದ, ವಿಷಪನ್ನಗನಂ= ವಿಷ ತುಂಬಿದ್ದ ಆ ಸರ್ಪವನ್ನು, ಅರಿಗಂ= ಅರ್ಜುನನು; ತನ್ನಯ= ತನ್ನಲ್ಲಿದ್ದ, ಗರುಡಾಸ್ತ್ರದಿಂದ= ಗರುಡಮಂತ್ರಪ್ರೇರಿತವಾದ ಬಾಣದಿಂದ, ಎಡೆಯೊಳ್= ಮಧ್ಯಮಾರ್ಗದಲ್ಲೇ (ಬರುತ್ತಿದ್ದಾಗಲೇ) ಕುಱಿದಱಿದಱಿದಂ= ಕುರಿಯನ್ನು ತರಿಯುವಂತೆ ತರಿದನು (ನುಚ್ಚು ನೂರಾಗುವಂತೆ ಕೊಚ್ಚಿದನು) ॥ ೨೮ ॥

ಆಗಳ್ — ಇಂತೆಂದು ವಚನಂ ॥ ಆಗಳ್ = ಆ ವೇಳೆಗೆ, ಶಲ್ಯಂ= ಮದ್ರಾಧಿಪನು, ಅಂಗರಾಜಂಗೆ= ಅಂಗಾಧಿಪನಾದ ಕರ್ಣನಿಗೆ, (ಕರ್ಣನ ಮೇಲೆ) ಕಿನಿಸಿ= ಸಿಟ್ಟುಗೊಂಡು; ಮುಳಿಸಿನೊಳೆ= ಕೋಪದಲ್ಲೇ; ಕಣ್ಗಾಣದೆ= ಮುಂದುಗಾಣದವನಾಗಿ; ಇಂತು ಅಪ್ಪ= ಹೀಗಿರುವ, ಏಕಗ್ರಾಹಿಗಂ ಒರಂಟಂಗಂ= ತನಗೆ ತೋರಿದಂತೆಯೇ ಆಗಬೇಕೆಂಬ ಹಟವುಳ್ಳವನಾದ ಈತನಿಗೆ (ಛಲವಾದಿಗೆ) ರಥಮಂ= ತೇರನ್ನು, ಎಸಗೆಂ ಎಂದು= ಚೋದಿಸಲಾರೆನು ಎಂದು; ವರೂಥದಿಂದೆ= ತೇರಿನಿಂದ; ಇೞಿದು ಪೋಗೆ= ಇಳಿದು ಹೋಗಲು ॥

ಅರಿಗನ— ಇಂತೆಂದು ಚಂ. ಮಾಲಾವೃತ್ತಂ ॥ ಅರಿಗನ= ಅರ್ಜುನನ (ಅರಿಕೇಸರಿಯ) ಬಟ್ಟಿನ= ನಸುಬಿಳಿದಾಗಿ ಹೊಳೆಯುತ್ತಿರುವ (ಮಸೆದು ಹರಿತವಾದ, ಬಟ್ಟಿನ= ವರ್ತುಲಾಕಾರದ ಎಂದೂ ಹೇಳಬಹುದು) ಅಂಬುಗಳ= ಬಾಣಗಳ;ಬಲ್ಸರಿ= ದೊಡ್ಡ ಮಳೆಯು; ಸೋಂಕುಗುಂ= ತಾಗುವುದು; ಏಳಿಂ= ಎಚ್ಚರ ಹೊಂದಿರಿ (ಜಾಗ್ರತರಾಗಿರಿ); ಎನಗೆ= ನನಗೆ; ಎನ್ನ ತೋಳ್ಸಿರಂ= ನನ್ನ ಭುಜವೇ ಸಹಾಯವು, ಎನ್ನ ಬಿಲ್ಲೆ ನೆರಂ= ನನ್ನ ಧನುಸ್ಸೇ ಸಹಾಯವು; ಎಂದು= ಎಂಬುದಾಗಿ; ವರೂಥ ತುರಂಗಮಂಗಳಂ= ರಥಕ್ಕೆ ಹೂಡಿದ ಕುದುರೆಗಳನ್ನು; ತುರಿಪದೆ= ತ್ವರೆಯಿಂದ; (ತುರಿಪ (ಸಂ) ತ್ವರಿತ) ತಾನೇ= ಸ್ವತಃ (ಅಸಹಾಯನಾಗಿ); ಚೋದಿಸುತುಂ= ಪ್ರೇರೇಪಿಸುತ್ತ

ವ ॥ ಅಂತು ತನ್ನಂ ಮುಯ್ಯೇೞ್ ಸೂೞ್ವರಮೊಲ್ಲಣಿಗೆಯಂ ಪಿೞಿವಂತೆ ಪಿಂಡಿ ಪಿೞಿದ ಪಗೆಗೆ ರಥಚಕ್ರಮಂ ನುಂಗುವುದುಂ ರಥದಿಂದಿೞಿದು ಗಾಲಿಯನೆತ್ತುವಾಗಳಿವನನೀ ಪದದೊಳ್ ಕಡಿದೊಟ್ಟದಾಗಳ್ ಗೆಲಲಾಱೆಯೆಂದು ನುಡಿದ ಮುಕುಂದನ ನುಡಿಗೆ ಕೊಕ್ಕರಿಸಿ ಜಗದೇಕ-ಮಲ್ಲನಿಂತೆಂದಂ—

ಬೞಿವಂ ಸಾರಥಿಯಿಲ್ಲ ಮೆಯ್ಗೆ ಮಱೆಯುಂ ತಾನಿಲ್ಲದೆಂತೀಗಳಾ- ।
ನಿಱಿವೆಂ ನೋಡಿರೆ ಮತ್ತಮೊಂದನಿಸಲುಂ ಕೆಯ್ಯೇೞದೇಕೆಂದುಮಾ- ॥
ನಱಿಯೆಂ ಕೂರ್ಮೆಯೆ ಮಿಕ್ಕು ಬಂದಪುದಿದರ್ಕೇಗೆಯ್ವೆನೇನೆಂಬೆನಾಂ ।
ಮಱೆದೆಂ ಮುನ್ನಿನದೊಂದು ವೈರಮನದಿಂತೇಕಾರಣಂ ಭೂಧರಾ ॥ ೩೦ ॥

---

(ನಡೆಯಿಸುತ್ತ), ಕಡುಕೆಯ್ದು = ದುಡುಕಿ (ಆಕ್ರೋಶಗೊಂಡು) ಆರ್ದು = ಬೊಬ್ಬಿರಿದು [ಆರ್ (ಧಾ) ಉಚ್ಚೈರ್ಧ್ವನೌ] ಇಸುತುಂ = ಬಾಣಗಳನ್ನು ಹೂಡುತ್ತ; ಕಾದೆ = ಹೋರಾಡುತ್ತಿರಲು, ಧಾತ್ರಿ = ಭೂದೇವಿಯು, ಕೋಪದಿಂ = (ಹಿಂದೆ ತನ್ನನ್ನು ಹಿಂಡಿ ಹಿಳಿದ) ಸಿಟ್ಟಿನಿಂದ, ಒರ್ಮೆಯೆ = ಒಂದೇ ಬಾರಿಗೆ, ಭೀಕರರಥ ಚಕ್ರಮಂ = ವೈರಿ ಭಯಂಕರವಾದ ಕರ್ಣನ ರಥದ ಗಾಲಿಯನ್ನು; ಪಿಡಿದು ನುಂಗಿದಳ್ = ಹಿಡಿದು ನುಂಗಿದಳು [ನುಂಗು (ಧಾತು) ಗಿಲನೇ] ॥ ೨೯ ॥

ಅಂತು— ಇಂತೆಂದು ವಚನಂ ॥ ಅಂತು = ಹಾಗೆ, ತನ್ನಂ = ತನ್ನನ್ನು (ಭೂಮಿಯನ್ನು), ಮುಯ್ಯೇೞ್ ಸೂೞ್ವರಂ = ಇಪ್ಪತ್ತೊಂದು ಬಾರಿಯೂ, ಒಲ್ಲಣಿಗೆಯಂ = ಗಾಣಹಾಕಿ; ಪಿೞಿವಂತೆ = ಹಿಂಡುವ ಹಾಗೆ, ಪಿಂಡಿಪಿೞಿದ = ಹಿಂಡಿ ಹಿಪ್ಪೆ ಮಾಡಿದ; ಪಗೆಗೆ = ವೈರಕ್ಕೆ; ರಥಚಕ್ರಮಂ = ರಥದ ಗಾಲಿಯನ್ನು; ನುಂಗುವುದುಂ = ಕಬಳಿಸಿದಾಗ; ರಥದಿಂದ ಇಳಿದು ಗಾಲಿಯಂ ಎತ್ತುವಾಗಳ್ = (ಕರ್ಣನು) ರಥದಿಂದ ಕೆಳಗಿಳಿದು ಚಕ್ರವನ್ನು ಹಿಡಿದು ಮೇಲೆತ್ತುತ್ತಿದ್ದಾಗ; ಇವನಂ = ಈ ಕರ್ಣನನ್ನು, ಈ ಪದದೊಳ್ = ಈ ಸಂದರ್ಭದಲ್ಲಿ, ಕಡಿದು ಒಟ್ಟದಾಗಳ್ = ಕಡಿದು ರಾಶಿಹಾಕದಿದ್ದಲ್ಲಿ [ಒಟ್ಟು (ಧಾ) ರಾಶೀಕರಣೇ] ಗೆಲಲಾಱೆ = ಜಯಿಸಿಕೊಳ್ಳಲಾರೆ; ಎಂದು ನುಡಿದ ಮುಕುಂದನ ನುಡಿಗೆ = ಎಂದು ಹೇಳಿದ ಕೃಷ್ಣನಮಾತಿಗೆ, ಕೊಕ್ಕರಿಸಿ = ಅಸಹ್ಯಪಟ್ಟು, ಜಗದೇಕಮಲ್ಲಂ = ಲೋಕೈಕವೀರನಾದ ಅರ್ಜುನನು, ಇಂತೆಂದಂ = ಹೀಗೆ ಹೇಳಿದನು ॥

ಬೞಿವಂ — ಇಂತೆಂದು ಮ ವಿ. ವೃತ್ತಂ ॥ ಭೂಧರಾ = ವರಾಹಾವತಾರವೆತ್ತಿ ಭೂಮಿಯನ್ನು. ಧರಿಸಿಕೊಂಡವನೇ; (ವಿಶ್ವಸಂಸ್ಥಾಪಕನಾದ ಪರಮಾತ್ಮನೇ) ವರಾಹ — ವಿಷ್ಣುವಿನ ಮೂರನೆಯ ಅವತಾರ. ಹಿರಣ್ಯಾಕ್ಷನನ್ನು ಸಂಹರಿಸುವುದಕ್ಕಾಗಿ.

ವ ॥ ಎಂಬುದುಮೆನಿತಱಿಯದಿರ್ದೊಡಂ ಸೋದರಿಕೆಯೆ ಮಿಕ್ಕು ಬಕ್ಕುರ್ಗ-
ಮಾಗದೆಯೆಂದು ತನ್ನಂತರ್ಗತದೊಳ್ ಬಗೆದಸುರಾಂತಕನಿಂತೆಂದಂ–

ನೆಗಟ್ದ*ಭಿಮನ್ಯುವಂ ಚಲದಿನಂದಿಱಿದಿಂದು ನಿಜಾಗ್ರಜಾತನಂ ।
ಸುಗಿವಿನಮೆಚ್ಚು ಬೀರದೊಳೆ ಬೀಗುವ ಸೂತಸುತಂತೆ ನೀನುಮಾ- ॥
ಜಿಗೆ ಸೆಡೆದಿರ್ದೆಯಪ್ಪೊಡಿರು ಚಕ್ರನಿಘಾತದಿನಿಕ್ಕಿ ಬೀರಮು– ।
ರ್ವಿಗೆ ಪಡಿಚಂದಮಾಗೆ ತಱಿದೊಟ್ಟಿ ಜಯಾಂಗನೆಗಾಣ್ಮನಾದಪೆಂ ॥ ೩೧ ॥

---

ವಿಷ್ಣು ಈ ಅವತಾರವನ್ನು ಕೈಕೊಂಡು ಭೂಮಿಯನ್ನು ಕಾಪಾಡಿದನು ಸಾರಥಿಯಿಲ್ಲ= ರಥಚೋದಕನಿಲ್ಲ, ಮೆಯ್ಗೆ = ದೇಹಕ್ಕೆ, ಮರೆಯುಂ= ಶಸ್ತ್ರಾಸ್ತ್ರಗಳ ಬಾಧೆಯನ್ನು ತಡೆಯುವಂತಹ ಕಂಚುಕವು ಕೂಡ, ಇಲ್ಲದೆ= ಇಲ್ಲದೇನೇ; ತಾಂ= ಈ ಕರ್ಣನೀಗ, ಬಱಿವಂ= ಬರಿದಾಗಿರುವನು (ನಿಸ್ಸಾರನಾಗಿರುವನು) ಆಂ= ನಾನು, ಈಗಳ್ ಎಂತು ಇಱಿವೆಂ= ಈ ವೇಳೆಗೆ ಹೇಗೆ ತಾನೇ ಹೊಡೆಯಲಿ? ನೋಡಿರೆ= ಸರಿಯಾಗಿ ಅವಲೋಕಿಸಿರಿ, ಮತ್ತಂ= ಅಷ್ಟು ಮಾತ್ರವಲ್ಲದೆಯೂ, ಒಂದಂ ಇಸಲುಂ= ಒಂದು ಬಾಣ ಹೂಡುವುದಕ್ಕಾದರೂ, ಕೆಯ್ಯೇಟಿದು= ಕೈ ಮುಂದಾಗುವುದಿಲ್ಲ, ಆಂ ಏಕೆಂದುಂ ಅಱಿಯೆಂ= ಇದರ ಕಾರಣವನ್ನು ನಾನು ತಿಳಿಯಲಾರೆನು, ಕೂರ್ಮೆಯೆ= ಪ್ರೀತಿಯೆ, ಮಿಕ್ಕು ಬಂದಪುದು= ಮೀರಿ ಬರುತ್ತಿದೆಯಲ್ಲಾ, ಇದರ್ಕೆ ಏಗೆಯ್ವೆಂ ಏನೆಂಬೆಂ= ಇದಕ್ಕೇನು ಮಾಡಲಿ ಏನು ತಾನೇ ಹೇಳಲಿ? ಮುನ್ನಿನ= ಮೊದಲಿಂದಲೂ ಪ್ರವರ್ಧಮಾನವಾಗಿ ಬಂದ; ಅದೊಂದು ವೈರಮಂ= ಆ ಹಗೆಯನ್ನು ಕೂಡ; ಆಂಮಱೆದೆಂ= ನಾನು ಮರೆತುಬಿಟ್ಟೆನು; ಅದುಇಂತು= ಅದು ಹೀಗೆ ಆಗಲು; ಏಕಾರಣಂ= ಕಾರಣವೇನು ? ॥ ೩೦ ॥

ಎಂಬುದುಂ — ಇಂತೆಂದು ವಚನಂ ॥ ಎಂಬುದುಂ= ಅರ್ಜುನನು ಹೀಗೆನ್ನಲು, ಎನಿತು ಅಱಿಯದಿರ್ದೊಡಂ= (ಜನ್ಮಸಂಬಂಧದ ವಿಚಾರವಾಗಿ) ಏನೂ ತಿಳಿಯದಿದರೂ; ಸೋದರಿಕೆಯೆ= ಸೋದರಭಾವವೇ, ಮಿಕು = ಮುಂದುವರಿದು, ಬಕ್ಕುರ್ಗಂ ಆಗದೆ= ಬಿರಲಾರದೆ? ಎಂದು = ಎಂಬುದಾಗಿ, ತನ್ನ ಅಂತರ್ಗತದೊಳ್ ಬಗೆದು= ತನ್ನ ಮನಸ್ಸಿನಲ್ಲಿಯೇ ವಿಚಾರಿಸಿಕೊಂಡು; ಅಸುರಾಂತಕಂ= ಅಸುರಮರ್ದನನಾದ ಕೃಷ್ಣನು; ಇಂತು ಎಂದಂ= ಹೀಗೆ ಹೇಳಿದನು ॥

ನೆಗಟ್ದ — ಇಂತೆಂದು ಚಂ ಮಾಲಾವೃತ್ತಂ ॥ ನೆಗಟ= ವೀರನೆಂದು ಹೆಸರುವಾಸಿಗೆ ಬಂದ; ಅಭಿಮನ್ಯುವಂ= ಅಭಿಮನ್ಯು ಕುಮಾರನನ್ನು; ಅಂದು= ದ್ರೋಣನು ಚಕ್ರವ್ಯೂಹವನ್ನು ರಚಿಸಿದಂದು; ಚಲದಿಂ= ಒರಟುತನದ ಹಟದಿಂದ;

ವ ॥ ಎಂಬನ್ನೆಗಂ ಧರಾತಳಮಳಱೆ ರಥದ ಗಾಲಿಯಂ ಕಿೞ್ತು ಮತ್ತಂ ರಥ
ಮನಪ್ರತಿರಥನೇಱೆ ನಿಟ್ಟಾಲಿಯಾಗೆ ಮುಟ್ಟಿವಂದು ಕಿಡಿಗುಟ್ಟಿ
ಮರ್ಮೋದ್ಘಾಟನಂಗೆಯ್ದು ಕಾದುವಾಗಳ್ ಕಪಿಧ್ವಜಂ ವನದಂತಿ
ಯಂತೆ ಧ್ವಾಂಕ್ಷಧ್ವಜಮನುಡಿದು ಕೆಡೆವಿನಮೆಚ್ಚಾಗಳ್—

---

ಇಱೆದ=ಘಾತಿಸಿದ, ಇಂದು=ಈದಿನ, ನಿಜ+ಅಗ್ರಜಾತನಂ=ನಿನ್ನ ಅಣ್ಣನಾದ ಯುಧಿಷ್ಠಿರನನ್ನು, ಸುಗಿವಿನಂ=ಹೆದರಿಕೊಳ್ಳುವ ಹಾಗೆ, ಎಚ್ಚು=ಹೊಡೆದು, ಬೀರದೊಳೆ=ಪರಾಕ್ರಮದಲ್ಲೇ; (ತಾನು ಶೌರ್ಯಶಾಲಿಯೆಂಬ ವಿಚಾರದಲ್ಲೇ), ಬೀಗುವ=ಗರ್ವಪಡುತ್ತಿರುವ, ಸೂತಸುತಂಗೆ=ಸೂತಪುತ್ರನೆನಿಸಿದ ಈ ಕರ್ಣನೊಂದಿಗೆ ನಡೆಸಬೇಕಾದ, ಆಜಿಗೆ=ಯುದ್ಧಕ್ಕೆ, ನೀನುಂ=ಗಾಂಡೀವಿಯೆನಿಸಿ ಪ್ರಸಿದ್ಧನಾದ ನೀನೂ, ಸೆಡೆದು ಇರ್ದೆಅಪ್ಪೊಡೆ=ಹೆದರಿಕೊಂಡೆಯಾದರೆ; ಇರು=ಸುಮ್ಮನೆ ಇದ್ದುಬಿಡು, (ಆ ಕಾರ್ಯದಲ್ಲಿ ಪ್ರವೃತ್ತನಾಗಬೇಡ) ಬೀರಂ=ಪೌರುಷವು ಉರ್ವಿಗೆ=ಲೋಕಕ್ಕೆ; ಪಡಿಚಂದಂ ಆಗೆ=ಇದು ತಾನೇ ಸರಿಯೆನಿಸುವ ಹಾಗೆ, [ಪಡಿಚಂದ (ಸಂ) ಪ್ರತಿಚ್ಛಂದ] ಚಕ್ರನಿಘಾತದಿಂ=ಸುದರ್ಶನವೆಂಬ ನನ್ನ ಬಟ್ಟೆಗೈದಿನ ಹೊಡೆತದಿಂದ, ಇಕ್ಕಿ=ಕೆಡಹಾಕಿ, ತಱೆದು ಒಟ್ಟಿ=ನುಚ್ಚುನೂರಾಗುವಂತೆ ಕಡಿದು ರಾಶಿಹಾಕಿ, ಜಯಾಂಗನೆಗೆ=ಜಯಲಕ್ಷ್ಮಿಗೆ, ಆಣ್ಮಂ=ಯಜಮಾನನು, ಅದಪೆಂ=ಆಗುವೆನು ॥೩೧॥

ಎಂಬನ್ನೆಗಂ—ಇಂತೆಂದು ವಚನಂ ॥ ಎಂಬ ಅನ್ನೆಗಂ=ಹೀಗೆ ಹೇಳುತ್ತಿರುವಷ್ಟರಲ್ಲಿ, ಅಪ್ರತಿರಥಂ=ಅಸಮಾನವೀರನೆನಿಸಿದ ಕರ್ಣನು; ಧರಾತಳಂ=ಭೂಮಿಯು (ಲೋಕವು) ಅಳಱೆ=ಹೆದರಿಕೊಳ್ಳುವ ಹಾಗೆ; ರಥದ ಗಾಲಿಯುಂ ಕಿೞ್ತು=ರಥದ ಚಕ್ರವನ್ನು ಉದ್ಧರಿಸಿ, ಮತ್ತಂ=ತಿರುಗಿ (ಪುನಃ), ರಥಮಂ=ತೇರನ್ನು, ಏಱೆ=ಅಡರಿ; ನಿಟ್ಟಾಲಿಯಾಗೆ=(ನಿಡಿದು+ಆಲಿ) ಕಣ್ಣು ಇದಿರಿಗೆ, ಸರಿಯಾಗಿ ತೋರುವಂತೆ ದಿಟ್ಟಿಸಿ ನೋಡುತ್ತ, ಮುಟ್ಟಿವಂದು=ಸಮೀಪಿಸಿ, ಕಿಡಿಗುಟ್ಟಿ=ವಿಶೇಷವಾಗಿ, ಆಕ್ರೋಶಗೊಂಡು; ಮರ್ಮೋದ್ಘಾಟನಂಗೆಯ್ದು=ಮೂದಲಿಸಿ ಮಾತಾಡಿ, ಕಾದುವಾಗಳ್=ಹೋರಾಡುವ ವೇಳೆಗೆ, ಕಪಿಧ್ವಜಂ=ಕಪಿಯು ಧ್ವಜದಲ್ಲಿರುವ ಅರ್ಜುನನು, ವನದಂತಿಯಂತೆ=ಕಾಡಾನೆಯ ಹಾಗೆ, ಧ್ವಾಂಕ್ಷಧ್ವಜಮಂ=ಕಾಗೆಯ ಗುರುತಿರುವ ಕರ್ಣನ ಧ್ವಜವನ್ನು; ಉಡಿದು ಕೆಡೆವಿನಂ=ತುಂಡಾಗಿ ಬೀಳುವಂತೆ, ಎಚ್ಚಾಗಳ್=ಹೊಡೆದಾಗ ॥

ಪಟಿಯಿಗೆ ಬಿಟ್ಕೊಡೆ ಬೀರದ ।
ಪಟವಿಗೆಯಂ ನಿಱಿಸಲೆಂದೆ ಹರಿವಕ್ಷಮನ– ॥
ಲ್ಲಟಿವೋಗೆಯೆಚ್ಚು ಮುಳಿಸವ– ।
ಗಟಿಯಿಸುತಿರೆ ನರನ ಬಿಲ್ಲ ಗೊಣೆಯುಮನೆಚ್ಚಂ ॥ ೩೨ ॥

ಬೆಳಗುವ ಸೊಡರ್ಗಳ ಬೆಳಗ– ।
ಗ್ಗಳಿಸುವವೋಲ್ ಪೋಪ ಪೊಟ್ತುಟೊಳ್ ತೇಜಂ ಪ– ॥
ಜ್ಜಳಿಸೆ ತಟತಟಿಸಿ ತೊಳ ತೊಳ ॥
ತೊಳಗಿದನಸ್ತಮಯಸಮಯದೊಳ್ ದಿನಪಸುತಂ ॥ ೩೩ ॥

---

ಪಟಿಯಿಗೆ— ಇಂತೆಂದು ಕಂದಂ ॥ ಪಟಿಯಿಗೆ=ಬಾವುಟವು (ಪಟಿಯಿಗೆ (ಸಂ) ಪತಾಕೆ) ಬಿಟ್ಕೊಡೆ=ಕೆಳಗೆ ಬೀಳಲು; ಬೀರದ=ಶೌರ್ಯದ; ಪಟವಿಗೆಯಂ=ಪತಾಕೆಯನ್ನು(ಇಲ್ಲಿ ಶೌರ್ಯಪತಾಕೆಯೆಂದು ರೂಪಕವು) ನಿಱಿಸಲೆಂದೆ=(ಸ್ಥಿರವಾಗಿ) ನೆಲೆನಿಲ್ಲಿಸಬೇಕೆಂದೇ; ಹರಿವಕ್ಷಮಂ=ಶ್ರೀಕೃಷ್ಣನ ಉರಃಸ್ಥಳವನ್ನು, ಅಲ್ಲಟಿವೋಗೆ=ಸೀಳಿಹೋಗುವ ಹಾಗೆ, ಎಚ್ಚು=ಹೊಡೆದು, ಮುಳಿಸು=ಕೋಪವು, ಅವಗಟಿಯಿಸುತಿರೆ=ಮೇಲೆ ಮೇಲೆ ಬರುತ್ತಿರಲು, ನರನ=ಅರ್ಜುನನ, ಬಿಲ್ಲ=ಧನುಸ್ಸಾದ ಗಾಂಡೀವದ; ಗೊಣೆಯುಮಂ=ಧನುರ್ದಂಡದ ತುದಿಯನ್ನು, (ಗೊಣೆಯೆಂದರೆ ಧನುಸ್ಸು ಬಳುಕುವಲ್ಲಿಯ ಸ್ಥಳ. ಮಡಕೆಯಲ್ಲಿ ಬಳ್ಳಿಯ ಆಕೃತಿ ಬಂದ ಭಾಗಕ್ಕೆ ಗೊಣೆಯೆಂದು ಹೇಳುವ ರೂಢಿಯುಂಟು ಅಥವಾ ಚಾಪದ ತುದಿಯಲ್ಲಿರುವ ಹೆದೆಯೇರಿಸುವ ಕೊಂಡಿ) ಎಚ್ಚಂ==ಹೊಡೆದನು ॥ ರೂಪಕ ಉತ್ಪ್ರೇಕ್ಷೆ ಆವೃತ್ತಿದೀಪಕಾಲಂಕಾರಗಳು ॥ ೩೨ ॥

ಬೆಳಗುವ— ಇಂತೆಂದು ಕಂದಂ । ಬೆಳಗುವ=ಬೆಳಕನ್ನು ಹೊರಹೊಮ್ಮಿಸುವ (ಪ್ರಕಾಶಿಸುವ), ಸೊಡರ್ಗಳ=ದೀಪಗಳ, ಬೆಳಗು=ಪ್ರಕಾಶವು, ಪೋಪ ಪೊಟ್ತುಟೊಳ್=ಅವಸಾನ ಕಾಲದಲ್ಲಿ ಎಂದರೆ ಎಣ್ಣೆ ಆರಿ ನಂದುವ ವೇಳೆಗೆ, ಅಗ್ಗಳಿಸುವ, ವೋಲ್=ಹೆಚ್ಚಾಗುವಂತೆ; ತೇಜಂ=ಪ್ರಕಾಶವು; ತಳತಳಿಸಿ=(ಇದು ಅನುಕರಣೆ) ಥಳಥಳನೆ, ಪಜ್ಜಳಿಸೆ=ಪ್ರಜ್ವಲಿಸಿ ತೋರುತ್ತಿರುವಂತೆಯೇ, ದಿನಪಸುತಂ==ಸೂರ್ಯಸುಕುಮಾರನಾದ ಕರ್ಣನು, ಅಸ್ತಮಯಸಮಯದೊಳ್==ಸೂರ್ಯಾಸ್ತಮಾನ ಕಾಲದಲ್ಲಿ (ತನ್ನ ಅವಸಾನ ಕಾಲದಲ್ಲಿ) ತೊಳತೊಳತೊಳಗಿದಂ=ವಿಶೇಷವಾಗಿ ಪ್ರಕಾಶಿಸಿದನು ॥ ಉಪಮೆ ಮತ್ತು ಅನುಪ್ರಾಸವು. ನಂದುವ ವೇಳೆಗೆ ದೀಪದ ಪ್ರಕಾಶವು ಹೆಚ್ಚಾಗುವಂತೆ ದಿನಪಸುತನು ಅವಸಾನ ಕಾಲಕ್ಕೆ ವಿಶೇಷವಾಗಿ ಬೆಳಗಿ

ವ ॥ ಅಂತು ಕರ್ಣನಿಶಿತವಿಕರ್ಣಹತಿಯಿಂದಮಸುರಾಂತಕಂ ಕಟ್ಟಿಯೆ ನೊಂದು—

ಕಸೆಯಂ ಬಿಟ್ಟುಱದಭಿಮಂ- ।
ತ್ರಿಸಿ ಚಕ್ರಮನಸುರವೈರಿಯಿಡುವಾಗಳ್ ಬಾ- ॥
ರಿಸಿ ಪೆಱತು ಗೊಣೆಯದಿಂದೇ- ।
ಱಿಸಿ ಬಿಲ್ಲಂ ತ್ರಿಭುವನಂಗಳಳ್ಳಾಡುವಿನಂ ॥ ೩೪ ॥

ವ ॥ ಮುನ್ನಮಿಂದ್ರಕೀಲನಗೇಂದ್ರದೊಳ್ ಪಶುಪತಿಯನಾರಾಧಿಸಿ ಪಾಶುಪತಾಸ್ತ್ರಂಬಡೆದಂದು ತೆಲ್ಲಟಿಯೆಂದು—

---

ದನು. ಸೂರ್ಯನು ಇತರ ತೇಜಸ್ಸುಗಳನ್ನು ತಗ್ಗಿಸುವನಾದರೆ ಆವನ ಮಗನೂ ಹಾಗೆಯೇ ಎಂಬುದರಲ್ಲಿರುವ "ದಿನಪಸುತಂ" ಎಂಬ ಪದದ ಪ್ರಯೋಜನವನ್ನು ಊಹಿಸಿಕೊಳ್ಳುವುದು ॥ ೩೩ ॥

ಅಂತು — ಇಂತೆಂದು ವಚನಂ ॥ ಅಂತು=ಹಾಗೆಯೇ; ಕರ್ಣನಿಶಿತವಿಕರ್ಣಹತಿಯಿಂದಂ=ಕರ್ಣನ ಹರಿತವಾದ ಬಾಣದ ಹೊಡೆತದಿಂದ; ಅಸುರಾಂತಕಂ=ದುಷ್ಟರಾಕ್ಷಸರಿಗೆ ಯಮನಾದ ಶ್ರೀಕೃಷ್ಣನು, ಕಟ್ಟಿಯೆ=ಬಹಳವಾಗಿ (ಸಾಯುವ ಹಾಗೆ), [ಕಟ್ಟಿ (ಧಾ) ನಿಧನಾತಿದೂರಯೋಃ] ನೊಂದು=ವ್ಯಸನಪಟ್ಟು ॥

ಕಸೆಯಂ — ಇಂತೆಂದು ಕಂದಂ ॥ ಅಸುರವೈರಿ= ದಾನವಂತಕನಾದ ಶ್ರೀಕೃಷ್ಣನು, ಕಸೆಯುಂ= ಚಾಟಿಯನ್ನು, ಬಿಟ್ಟು= ಪರಿತ್ಯಜಿಸಿ, ಉಱದೆ= ಕೂಡಲೆ, ಅಭಿಮಂತ್ರಿಸಿ= ಅಧಿದೇವತೆಯನ್ನು ಆವಾಹಿಸಿ, ಚಕ್ರಮಂ= ಸುದರ್ಶನವನ್ನು, ಇಡುವಾಗಳ್= ಬಿಸುಡುವ ವೇಳೆಗೆ, ಬಾರಿಸಿ= ತಡೆದು; (ವಾರಿಸು (ದ್ಭ) ಬಾರಿಸು) ಪೆಱತು= ಬೇರೊಂದು, ಗೊಣೆಯದಿಂದೆ= ಬಿಲ್ಲಿನ ತುದಿಯ ಕೊಂಡಿಯಿಂದ; ತ್ರಿಭುವನಂಗಳ್= ಮೂರು ಲೋಕಗಳೂ, ಅಳ್ಳಾಡುವಿನಂ= ಚಲಿಸುವಂತೆ, ಬಿಲ್ಲಂ ಏಱಿಸಿ= ಬಿಲ್ಲಿಗೆ ಹೆದಯೇಱಿಸಿ ॥ ೩೪ ॥

ಮುನ್ನಂ — ಇಂತೆಂದು ವಚನಂ ॥ ಮುನ್ನಂ= ಮೊದಲು, ಇಂದ್ರಕೀಲನಗೇಂದ್ರದೊಳ್= ಪರ್ವತಗಳಲ್ಲಿ ಶ್ರೇಷ್ಠವಾದ ಇಂದ್ರಕೀಲದಲ್ಲಿ, ಪಶುಪತಿಯಂ= ಪಶುಪಾಶವಿಮೋಚನಾದಿಗಳಿಂದ ಪಶುಪತಿಯೆಂದು ಪ್ರಸಿದ್ಧನಾದ ಶಿವನನ್ನು, ಆರಾಧಿಸಿ= ಪೂಜಿಸಿ, ಪಾಶುಪತಾಸ್ತ್ರಂಬಡೆದ ಅಂದು= ಪಾಶುಪತಾಸ್ತ್ರವನ್ನು ಪಡೆದ ವೇಳೆಗೆ, ತೆಲ್ಲಟಿಯೆಂದು= ಬಹುಮಾನವಾಗಿ ॥

ಗಿರಿಜೆಯು ಮೆಚ್ಚಿಕೊಟ್ಟ ನಿಶಿತಾಸ್ತ್ರಮನಂಜಲಿಕಾಸ್ತ್ರಮಂ ಭಯಂ- ।
ಕರತರಮಾಗೆ ಕೊಂಡು ವಿಧಿಯಿಂದಭಿಮಂತ್ರಿಸಿ ಪೂಡೆ ಬಿಲ್ಲೊಳು- ॥
ರ್ವರೆ ನಡುಗಿತ್ತಜಾಂಡವೊಡೆದತ್ತು ನೆಲಂ ಪಿಡುಗಿತ್ತು ಸಪ್ತಸಾ- ।
ಗರಮುಡುಗಿತ್ತು ಸಾಹಸಮದೇಂ ಪಿರಿದೋ ಕದನತ್ರಿಣೇತ್ರನಾ ॥ ೩೫ ॥

ವ ॥ ಆ ಗ ಳ ಖಿ ಳ ಭುವನಭವನಸಂಹಾರಕಮಪ್ಪಂಜಲಿಕಾಸ್ತ್ರಮನಮೋಘಾಸ್ತ್ರಧನಂಜಯನಾಕರ್ಣಾಂತಂಬರಂ ತೆಗೆದಾಕರ್ಣಾಂತಂ ಮಾಡಲ್ ಬಗೆದು ಕಂಧರಸಂಧಿಯಂ ನಿಟ್ಟಿಸಿ—

---

ಗಿರಿಜೆಯ – ಇಂತೆಂದು ಚಂ. ಮಾಲಾವೃತ್ತಂ ॥ ಗಿರಿಜೆಯು = ಪರ್ವತರಾಜನಾದ ಹಿಮವಂತನ ಮಗಳಾದ ಪಾರ್ವತೀದೇವಿಯು (ಪ್ರಥಮಾರ್ಥದಲ್ಲಿ ಷಷ್ಠಿ), ಮೆಚ್ಚಿ = ಮನಸ್ಸಂತೋಷಗೊಂಡು, ಕೊಟ್ಟ = ಇತ್ತ; ಅಂಜಲಿಕಾಸ್ತ್ರಮಂ = ಅಂಜಲಿಕಾಸ್ತ್ರವೆಂದು ಪ್ರಸಿದ್ಧವಾದ, ನಿಶಿತಾಸ್ತ್ರಮಂ = ಹರಿತವಾದ ಬಾಣವನ್ನು, ಭಯಂಕರತರಮಾಗೆ = ಬಹಳ ಹೆದರಿಕೆಯನ್ನುಂಟುಮಾಡುವ ಹಾಗೆ, ಕೊಂಡು = (ಬತ್ತಳಿಕೆಯಿಂದ) ಕೈಗೆ ತಂದುಕೊಂಡು; ವಿಧಿಯಿಂದೆ = ಶಾಸ್ತ್ರೋಕ್ತ ರೀತಿಯಿಂದ; ಅಭಿಮಂತ್ರಿಸಿ = ಅಸ್ತ್ರದ ಅಧಿದೇವತೆಯನ್ನು ಕುರಿತು ಮಂತ್ರವನ್ನು ಜಪಿಸಿ, ಬಿಲ್ಲೊಳ್ = ಧನುಸ್ಸಿನಲ್ಲಿ, ಪೂಡೆ = ಹೂಡಲು, ಉರ್ವರೆ = ಭೂಮಿಯು; ನಡುಗಿತ್ತು = (ಹೆದರಿಕೆಯಿಂದ) ವಿಶೇಷವಾಗಿ ಚಲಿಸಿತು: ಅಜಾಂಡಂ = ಬ್ರಹ್ಮಾಂಡವು, ಒಡೆದತ್ತು = ಒಡೆದು ಹೋಯಿತು (ಒಡೆದು ಹೋಗುವಂತಾಯಿತು) ನೆಲಂ = ನೆಲವು; ಪಿಡುಗಿತ್ತು = ಕಂಪಿಸಿತು; ಸಪ್ತಸಾಗರಂ = ಏಳು ಸಮುದ್ರಗಳ ಸಮೂಹವು; (ಸಪ್ತಾಹಾರದ್ವಿಗು, ಲವಣ, ಇಕ್ಷು, ಸುರಾ, ಸರ್ಪಿ, ದಧಿ, ದುಗ್ಧ ಜಲಗಳೆಂದು ಸಪ್ತಸಾಗರಗಳು) ಉಡುಗಿತ್ತು = ಇಲ್ಲದಾಯಿತು (ನಾಶಹೊಂದಿತು); ಕದನ ತ್ರಿಣೇತ್ರನಾ = (ಯುದ್ಧದಲ್ಲಿ ಮುಕ್ಕಣ್ಣನಂತಹ ಅಪ್ರತಿಮನು, ಧ್ವಂಸಕಾರಿಯು) ಅರ್ಜುನನು (ಅರ್ಜುನನಿಗೆ ಇಲ್ಲವೆ ಅರಿಕೇಸರಿಗೆ ಇರುವ ಬಿರುದು ಕದನತ್ರಿಣೇತ್ರನಾ. ಎಂಬಲ್ಲಿ ಷಷ್ಠಿಗೆ ದೀರ್ಘ) ಸಾಹಸಂ ಅದು ಏಂ ಪಿರಿದೋ? = ಅದೆಂತಹ ಪ್ರಭಾವವುಳ್ಳ ಸಾಹಸವೋ ಹೇಳಲು ಸಾಧ್ಯವಿಲ್ಲ ॥ ಇಲ್ಲಿಸಮುಚ್ಚಯಾಲಂಕಾರವು. ಕದನ ತ್ರಿಣೇತ್ರನ ಸಾಹಸವು ತಾಂಡವವಾಡುವಂತೆಯೇ ಪದ್ಯದ ಗತಿಯೂ ಗುಡುಗುಟ್ಟುತ್ತಿದೆ ॥ ೩೫ ॥

ಆಗಳ್ — ಇಂತೆಂದು ವಚನಂ ॥ ಆಗಳ್ = ಆ ಸಮಯದಲ್ಲಿ, ಅಖಿಳ ಭುವನಭವನ ಸಂಹಾರಕಂ ಅಪ್ಪ = ಸಕಲ ಲೋಕಗಳೆಂಬ ವಸತಿಯನ್ನು ನಾಶಪಡಿಸಲು ಸಾಮರ್ಥ್ಯ ಉಳ್ಳದ್ದಾಗಿರುವ, ಅಂಜಲಿಕಾಸ್ತ್ರಮಂ = ಅಂಜಲಿಕಾಸ್ತ್ರವನ್ನು; ಅಮೋಘಾಸ್ತ್ರಧನಂಜಯಂ = ದಿವ್ಯಾಸ್ತ್ರಸಂಪನ್ನನಾದ ಅರ್ಜುನನು, ಆಕರ್ಣಾಂತಂ

ಮುಳಿದೆಚ್ಚಾಗಳ್ ಮಹೋಗ್ರಪ್ರಳಯಶಿಖಿಶಿಖಾನೀಕಮುಂ ವಿಸ್ಫುಲಿಂಗಂ-।
ಗಳುಮಂ ಬೀಱುತ್ತುಮೌರ್ವಜ್ವಳನರುಚಿಯುಮಂ ತಾನೆ ತೋಱುತ್ತು
ಮಾಟಂ- ॥
ದಳುರುತ್ತುಂ ಬಂದು ಕೊಂಡಾಗಳೆ ಗಗನತಳಂ ಪಾಯ್ದು ಕೆನ್ನೆತ್ತರಿಂದು- ।
ಚ್ಚಳಿಸುತ್ತಿರ್ಪನ್ನೆಗಂ ಬಿಬ್ದುದು ಭರದೆ ಸಿಡಿಲ್ದತ್ತ ಕರ್ಣೋತ್ತಮಾಂಗಂ ॥೩೬॥

ವ ॥ ಅಂತು ತಲೆ ನೆಲದೊಳುರುಳ್ದೊಡೆ ಲೋಕಕ್ಕೆಲ್ಲಮಗುಂದಲೆಯಾದ ಬೀರಮೆಸೆಯೆ ಪ್ರಾಣಮೊಡಲಿಂದಂ ತೊಲಗೆಯುಂ ತೊಲಗದ ನನ್ನಿಯನುದಾಹರಿಸುವಂತೆ ಪತ್ತೆಂಟು ಕೋಲನೆಚ್ಚಟ್ಟೆಯುಂ ನೆಲದೊಳಾ

---

ಬರಂ= ಕಿವಿಯು ಅಂತ್ಯದ ವರೆಗೂ, ತೆಗೆದು= ಸೆಳೆದು, ಆಕರ್ಣಾಂತಂಮಾಡಲ್= ಆ ಕರ್ಣನನ್ನು ನಾಶಮಾಡಲು, ಬಗೆದು= ನಿಶ್ಚೈಸಿ, ಕಂಧರಸಂಧಿಯಂ= ಕುತ್ತಿಗೆಯ ಸಂಧಿಯನ್ನು (ರುಂಡಮುಂಡಗಳ ಜೋಡಣೆಯ ಸಂದನ್ನು) ನಿಟ್ಟಿಸಿ= ನೋಡಿ ||

ಮುಳಿದೆಚ್ಚ— ಇಂತೆಂದು ಮ-ಸ್ರ-ವೃತ್ತಂ || ಮುಳಿದು= ಸಿಟ್ಟುಗೊಂಡು, ಎಚ್ಚ= ಹೊಡೆದ; ಆಗಳ್= ಆ ಕಾಲದಲ್ಲಿ, ಮಹೋ-ಮಂ= ಮಹಾ- ಅತ್ಯಂತ, ಉಗ್ರ= ಭಯಂಕರವಾದ, ಪ್ರಳಯಶಿಖಿ= ಕಲ್ಪಾಂತದಲ್ಲಿ ಉಂಟಾಗುವ ಬೆಂಕಿಯ, ಶಿಖಾ= ಜ್ವಾಲೆಗಳ, ಅನೀಕಮಂ= ಸಮೂಹವನ್ನೂ, ವಿಸ್ಫುಲಿಂಗಂಗಳಮಂ= ವಿಶೇಷವಾದ ಕಿಡಿಗಳನ್ನೂ, ಬೀಱುತ್ತುಂ= ಹರಡಿಸುತ್ತಾ, ಔರ್ವಜ್ವಳನರುಚಿಯುಮಂ= ವಡವಾಗ್ನಿಯ ತೇಜಸ್ಸನ್ನೂ, ತೋಱುತ್ತುಂ= ಕಾಣಿಸಿಕೊಳ್ಳುತ್ತ, ತಾನೇ= ಆ ಅಂಜಲಿಕಾಸ್ತ್ರವೇ, ಆಟಂದು= ಮೇಲೆಬಿದ್ದು, ಅಳುರುತ್ತುಂ= ವಿಜೃಂಭಿಸುತ್ತ, ಬಂದು= (ಕರ್ಣನ) ಸಮೀಪಕ್ಕೆ ಬಂದು, ಕೊಂಡಾಗಳೆ= ತನ್ನ ಅಧೀನವಾಗಿ ಮಾಡಿಕೊಂಡ ಕ್ಷಣದಲ್ಲೇ, (ಕತ್ತರಿಸಿಬಿಟ್ಟಾಗಲೇ) ಪಾಯ್ದು= ಮೇಲಕ್ಕೆ ಹಾರಿದ, ಕೆನ್ನೆತ್ತರಿಂದೆ= ರಕ್ತದಿಂದ, ಗಗನತಳಂ= ಅಂತರಿಕ್ಷವು, ಉಚ್ಚಲಿಸುತ್ತಿರ್ಪನ್ನೆಗಂ= ಮೇಲಕ್ಕೆ ಚಲಿಸುತ್ತಿರುವ ವೇಳೆಗೆ; ಕರ್ಣೋತ್ತಮಾಂಗಂ= (ಕರ್ಣ+ಉತ್ತಮಾಂಗಂ) ಕರ್ಣನ ತಲೆಯು, ಭರದೆ= ರಭಸದಿಂದ, ಸಿಡಿಲ್ದು= ಛೇಧಿಸಲ್ಪಟ್ಟು [ಸಿಡಿಲ್ (ಧಾತು) ವಿಕೀರ್ಣೇ ಮೋಘನಹ್ನಾಚ] ಅತ್ತ= ಆ ಕಡೆಗೆ, ಬಿಬ್ದುದು= ಬಿದ್ದುಬಿಟ್ಟಿತು || ಇಲ್ಲಿ ಅತ್ಯುಕ್ತಿಯೆಂಬ ಅಲಂಕಾರವಿದೆ ! ವೀರರಸವು ಮೂರ್ತಿಮತ್ತಾಗಿ ತೋರುವುದೆಂಬ ಭಾವನೆಯಾಗುತ್ತಿದೆ ಮ-ಹಾಸ್ರಗ್ಧರಾ ವೃತ್ತಕ್ಕೆ ಲಕ್ಷಣವು — ಸತತಂನಂಸಂರರಂಗಂ ನೆರೆದೆಸೆಯೆ ಮಹಾಸ್ರಗ್ಧರಾವೃತ್ತಮಕ್ಕುಂ || ೩೬ ||

ಅಂತು — ಇಂತೆಂದು ವಚನಂ ॥ ಅಂತು= ಹಾಗೆ, ತಲೆ= (ಕರ್ಣನ) ಶಿರವು;

ಚಂದ್ರಸ್ಥಾಯಿಯಾಗೆ ಚತುರ್ದಶಭುವನಂಗಳಂ ಪಸರಿಸಿ ನಿಂದೊಡೆ ಸೆದುದಾಹರಣಮೊಳ್ಪಿನುದಾಹರಣಮುಮಾಗೆ ಗುಣಾರ್ಣವನ ಶರ ಪರಿಣತಿಯಿಂದೆ ಕುಲಶೈಲಂ ಬೀೞ್ವಂತೆ ನೆಲನದಿರೆ ಬಿೞ್ದಾಗಳ್ —

ಚಾಗದ ನನ್ನಿಯ ಕಲಿತನ- ।
ದಾಗರಮೆನೆ ನೆಗೞ್ದ* ಕರ್ಣನೊಡಲಿಂದೆಂತುಂ ॥
ಪೋಗಲ್ಕಱಿಯದೆ ಸಿರಿ ಕರ- ।
ಮಾಗಳ್ ಕರಿಕರ್ಣತಾಳಸಂಚಳೆಯಾದಳ್ ॥ ೩೭ ॥

---

ನೆಲದೊಳ್ = ಭೂಮಿಯಲ್ಲಿ, ಉರುಳ್ದೊಡೆ = ಹೊರಳಿದರೂ, ಲೋಕಕ್ಕೆಲ್ಲಂ = ಎಲ್ಲಾ ಲೋಕಗಳಿಗೂ, ಅಗುಂದಲೆಯಾದ = ಅತಿಶಯವಾದ, ಬೀರಂ = ಪೌರುಷವು, ಎಸೆಯೆ = ಶೋಭಿಸಲು, ಪ್ರಾಣಂ = ಪಂಚಪ್ರಾಣಗಳು, ಒಡಲಿಂದಂ = ದೇಹದಿಂದ, ತೊಲಗೆಯುಂ = ಬಿಟ್ಟುಹೋದರೂ, ತೊಲಗದ = ಬಿಟ್ಟುಹೋಗದ, ನನ್ನಿಯಂ = ಸತ್ಯವನ್ನು, ಉದಾಹರಿಸುವಂತೆ = ಸಾಕ್ಷಾತ್ತಾಗಿ ತೋರಿಸಿಕೊಡುವ ಹಾಗೆ, ಪತ್ತೆಂಟು ಕೋಲಂ = ಎಂಟೋ ಹತ್ತೋ (ಎಂಟು ಹತ್ತು ಎಂದರೆ ಎಣಿಕೆ ಮಾಡತಕ್ಕಂತೆ ಕೆಲವೇ ಎಂದು ತಾತ್ಪರ್ಯವು) ಕೋಲಂ = ಸರಳುಗಳನ್ನು, ಎಚ್ಚ = ಹೊಡೆದ, (ಬಾಣಗಳಿಂದ ಹೊಡೆಯಲ್ಪಟ್ಟ) ಅಟ್ಟೆಯುಂ = ದೇಹವಾದರೂ; ನೆಲದೊಳ್ = ಭೂಮಿಯಲ್ಲಿ, ಆ ಚಂದ್ರಸ್ಥಾಯಿಯಾಗೆ = ಚಂದ್ರಮಂಡಲವಿರುವ ತನಕವೂ ಸ್ಥಿರವಾಗಿರುವಂತೆ ಚತುರ್ದಶಭುವನಂಗಳಂ = ಹದಿನಾಲ್ಕು ಲೋಕಗಳನ್ನೂ; ಪಸರಿಸಿ = ವ್ಯಾಪಿಸಿಕೊಂಡು, ನಿಂದೊಡೆ = ನಿಲ್ಲಲು, ಎಸೆದ ಉದಾಹರಣಂ = ಶೋಭಾಯಮಾನವಾದ ಉದಾಹರಣೆಯು, ಒಳ್ಪಿನ ಉದಾಹರಣಮುಂ ಆಗೆ = ಉತ್ತಮವಾದ ಉದಾಹರಣೆಯಾಗುತ್ತಿರುವಂತೆ, ಗುಣಾರ್ಣವನ = ಅಪಾರಗುಣಭೂಯಿಷ್ಠನಾದ ಅರ್ಜುನನ, ಶರಪರಿಣತಿಯಿಂದ = ಬಾಣದ ಪರಿಣಾಮದಿಂದ; ಕುಲಶೈಲಂ = ಏಳು ಕುಲಪರ್ವತಗಳು, (ಮಹೇಂದ್ರ, ಮಲಯ, ಸಹ್ಯ, ಶುಕ್ತಿಮಾನ್, ಋಕ್ಷ, ವಿಂಧ್ಯ, ಪಾರಿಯಾತ್ರ) ಬೀೞ್ವಂತೆ = ಕೆಡೆಯುವ ಹಾಗೆ, ನೆಲಂ = ಭೂಮಿಯು, ಅದಿರೆ = ನಡುಗುತ್ತಿರಲು; ಬಿೞ್ದಾಗಳ್ = ಬಿದ್ದ ವೇಳೆಗೆ ॥

ಚಾಗದ— ಇಂತೆಂದು ಕಂದಂ ॥ ಚಾಗದ (ಸಂ) ತ್ಯಾಗದ) = ದಾನ ಮಾಡುವಿಕೆಯ, ನನ್ನಿಯ = ಸತ್ಯ ಹೇಳುವಿಕೆಯ, ಕಲಿತನದ = ವಿಕ್ರಮಿಯಾಗಿರುವಿಕೆಯ, ಆಗರಂ = (ಸಂ) ಆಕರ = ಉತ್ಪತ್ತಿಸ್ಥಾನವೆಂಬ ಹಾಗೆ, ನೆಗೞ್ದ = ಪ್ರಖ್ಯಾತವಾದ, ಕರ್ಣನ ಒಡಲಿಂದೆ = ಕರ್ಣನ ದೇಹದಿಂದ, ಎಂತುಂ = ಹೇಗೂ; (ಬಿದ್ದು ಕೆಟ್ಟು ಹೋಗುವ ಸಂದರ್ಭದಲ್ಲಿಯೂ ಕೂಡ) ಪೋಗಲ್ಕೆ = ತೊಲಗಿ ಹೋಗಲು, ಅಱಿ

ಕುಡುಮಿಂಚಿನ ಸಿಡಿಲುರುಳಿಯೊ- ।
ಳೊಡಂಬಡಂ ಪಡೆಯೆ ಕರ್ಣನೊಡಲಿಂದಾಗಳ್ ॥
ನಡೆ ನೋಡೆ ನೋಡೆ ದಿನಪನೊ- ।
ಳೊಡಗೂಡಿದುದೊಂದು ಮೂರ್ತಿ ತೇಜೋರೂಪಂ ॥ ೩೮ ॥

---

ಯದೆ= ತಿಳಿಯದೆ, ಆಗಳ್ = ಆಗ; ಸಿರಿ (ಸಂ) ಶ್ರೀ= ಸಂಪದಧಿದೇವತೆಯು, ಕರಂ= ನಿಶ್ಚಯವಾಗಿಯೂ, ಕರಿಕರ್ಣತಾಳಸಂಚಳೆ= ಆನೆಯ ಕಿವಿಯು ಚಲಿಸುವ ಹಾಗೆಯೇ ಬಹು ಚಂಚಲೆಯಾದಳು ॥ ಇಲ್ಲಿ—ಉಪಮೋತ್ಪ್ರೇಕ್ಷಾಲಂಕಾರಗಳು ॥ [ಪ್ರಾಣಿ ಪಕ್ಷಿಗಳೂ ಕೂಡ ತಂತಮ್ಮ ವಸತಿಗಳನ್ನು ಬಿಟ್ಟು ಹೋಗಲು ಸಂಕಟಪಡು ತ್ತಿರುವುದನ್ನು ನಾವು ಕಣ್ಣಾರೆ ನೋಡುತ್ತಿರುವೆವು ಹಾಗಿರುವಾಗ ವಿವೇಚನಾಶಕ್ತಿ ಯುಳ್ಳ ಲಕ್ಷ್ಮೀದೇವಿಯು ಶೌರ್ಯೌದಾರ್ಯವೀರ್ಯಗಳಿಗೆ ನೆಲೆಯಾಗಿದ್ದ ಕರ್ಣನ ದೇಹ ವನ್ನು ಬಿಟ್ಟುಹೋಗುವುದರಲ್ಲಿ ಮನಸ್ಸಿಲ್ಲದೆ ಸಂಕಟಗೊಂಡುದರಲ್ಲಿ ಔಚಿತ್ಯವಿದೆ ಹೇಗೂ ಬಿಟ್ಟುಹೋಗಲು ಮನಸ್ಸಿಲ್ಲದೆ ಬಿಟ್ಟುಹೋಗದೆ ವಿಧಿಯಿಲ್ಲದೆ ಆನೆಯ ಕಿವಿ ಯಂತೆ ಚಲಿಸುತ್ತಿದ್ದಳೆಂದು ಕವಿಯು ಬಹುಸ್ವಾರಸ್ಯವಾಗಿ ಹೇಳಿದ್ದಾನೆ ] ॥ ೩೭ ॥

ಕುಡುಮಿಂಚಿನ—ಇಂತೆಂದು ಕಂದಂ ॥ ಕುಡುಮಿಂಚಿನ= ಬಳ್ಳಿಮಿಂಚಿನ [ಕೊಂಕು ಎಂಬುದಕ್ಕೆ ಕುಡು ಎಂಬಾದೇಶವು= ಕಿಱಿದಕ್ಕಾದೇಶಂ ಕುಱು, ಜಱುವೆಂ ಬುದು ಬೆಟ್ಟಿತರ್ಕೆ ಕೊಂಕಿಗೆ ಕುಡೆಂ । ದಱಿ ॥ ಶ. ಮ. ದ ಸೂತ್ರ ॥ ೧೮೪ ॥ ಕೊಂಕು+ ಮಿಂಚು= ಕುಡುಮಿಂಚು ಕ ಸಮಾಸ] ಸಿಡಿಲ್ = ಚದರಿಕೆಯು (ಚಲ್ಲಾ ಟವು) ಸಿಡಿಲ+ ಉರುಳಿಯೊಳ್ = ಮೇಘಾಗ್ನಿಯ ಗುಂಪಿನಲ್ಲಿ (ಮೇಘ ಜ್ಯೋತಿಯ ಪಿಂಡದಲ್ಲಿ) ಒಡಂಬಡಂ= ಐಕ್ಯವನ್ನು, ಪಡೆಯೆ= ಹೊಂದುವ ಹಾಗೆಯೇ, ಆಗಳ್ = ಆ ಸಮಯದಲ್ಲಿ, ನಡೆನೋಡೆನೋಡೆ= ನೋಡುತ್ತಿದ್ದಂತೆಯೇ (ಬಹುಬೇಗನೆ) ಕರ್ಣನ ಒಡಲಿಂದೆ= ಕರ್ಣನ ದೇಹದಿಂದ, ತೇಜೋರೂಪಂ= ಪ್ರಕಾಶಮಾನವಾದ, ಅದೊಂದು ಮೂರ್ತಿ= ಹೀಗೆಯೇ ಇರುವುದೆಂದು ಹೇಳಲು ಸಾಧ್ಯವಾಗದಂತಹ ಅದ್ಭುತಕರವಾದ ಆಕೃತಿಯೊಂದು, ದಿನಪನೊಳ್ = ಸೂರ್ಯಬಿಂಬದೊಡನೆ, ಒಡಗೂಡಿದುದು= ಲೀನವಾ ಯಿತು ॥ ಕುಡುಮಿಂಚಿನ ಸಿಡಿಲ್ ಸಿಡಿಲುರುಳಿಯೊಳ್ ಎಂದು ಹೇಳಬೇಕಾಗುವುದು ಅಲ್ಲವಾದರೆ ಕುಡುಮಿಂಚಿನ ತೇಜೋರೂಪಂ ಸಿಡಿಲುರುಳಿಯೊಳ್ ಎಂದೂ ಹೇಳಿಕೊಳ್ಳ ಬಹುದು ಅಂಶವು ಮೂಲದೊಂದಿಗೆ ಬೆರೆಯುವುದು ಪದ್ಧತಿಯಾಗಿರುವುದರಿಂದ ಸೂರ್ಯನಿಂದ ಉಂಟಾದ ತೇಜೋರೂಪವು ಸೂರ್ಯನೊಡನೆ ಐಕ್ಯಹೊಂದುವುದರಲ್ಲಿ ಔಚಿತ್ಯವಿದೆ. ಉಪಮಾಲಂಕಾರವು ॥ ೩೮ ॥

*

# ಪದ್ಯಗಳ ಅನುಕ್ರಮಣಿಕೆ

